ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಗಂಗಾಧರ ನಮೋಶಿ

## Eminent Parlimentarian Series

## GANGADHARA NAMOSHI

ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಗಂಗಾಧರ ನಮೋಶಿ

## Eminent Parlimentarian Series

## GANGADHARA NAMOSHI


ರಚನೆ:

ಡಾ॥ ಎಸ್.ಎಚ್. ಕವಂತೆ

ಡಾ॥ ಜೆ.ಎಸ್. ಪಾಟೀಲ್

ಮತ್ತು

ಡಾ॥ ಎಂ.ಎಸ್. ದ್ರಡವೆ

ಹಿರಿಯ ಪ್ರಾಧ್ಯಾಪಕರುಗಳು,

ಗುಲ್ಬರ್ಗಾ, ವಿಶ್ವವಿದ್ಯಾನಿಲಯ





ಮೊದಲ ಮುದ್ರಣ:

ಸೆಪ್ಟೆಂಬರ್ 2001 - 1,500 ಪ್ರತಿಗಳು





ಮುಖಪುಟ ವಿನ್ಯಾಸ:

ಸರ್ಕಾರಿ ಮುದ್ರಣಾಲಯ

ಬೆಂಗಳೂರು.

ಬೆಲೆ : ರೂ.15/-

ಪ್ರಕಟಣೆ:

ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ,

ಕರ್ನಾಟಕ ವಿಧಾನಸಭೆ ಸಚಿವಾಲಯ

ವಿಧಾನಸೌಧ, ಬೆಂಗಳೂರು -1

# ಪೀಠಿಕೆ

ದೇಶದ ಸ್ವಾತಂತ್ರ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿರುವ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ರಾಂಮನೋಹರ ಲೋಹಿಯಾ, ಡಾ॥ ಬಿ.ಆರ್.ಅಂಬೇಡ್ಕರ್, ಡಾ॥ಶಾಂಪ್ರಸಾದ್ ಮುಖರ್ಜಿ, ಡಾ॥ ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಕಿರುಹೊತ್ತಿಗೆಯನ್ನು ನಾವು ಕನ್ನಡದಲ್ಲಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸ ಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರ ಕುರಿತು ಕಿರುಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ಈ ಕಾರ್ಯವನ್ನು ವಿಧಾನ ಸಭೆಯ ಸದಸ್ಯರಾದ ಶ್ರೀ ಬಿ.ಬಿ.ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ವಿಶ್ವವಿದ್ಯಾನಿಲಯಗಳ ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್.ನಿಜಲಿಂಗಪ್ಪ, ಶ್ರೀ ಕೆ.ಸಿ.ರೆಡ್ಡಿ, ಶ್ರೀ ದೇವರಾಜ ಅರಸ್ ಹಾಗೂ ಇನ್ನೂ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಈಗ ಗುಲ್ಬರ್ಗಾ ವಿಶ್ವವಿದ್ಯಾ ನಿಲಯದ ಹಿರಿಯ ಪ್ರಾಧ್ಯಾಪಕರುಗಳಾದ ಡಾ॥ ಎಸ್.ಎಚ್. ಕವಂತೆ, ಡಾ॥ ಜೆ.ಎಸ್.ಪಾಟೀಲ್ ಮತ್ತು ಡಾ॥ ಎಂ.ಎಸ್. ಧಡವೆ ಅವರುಗಳು ಸಂಯುಕ್ತವಾಗಿ. ರಚಿಸಿರುವ, ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ.ಗಂಗಾಧರ ನಮೋಶಿ ಅವರ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆ ಎನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಯು ಮಾನ್ಯ ಸದಸ್ಯರುಗಳಿಗೆ ಮತ್ತು ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತವೆ ಮತ್ತು ಉಪಯುಕ್ತವಾಗುತ್ತವೆಂದು ಭಾವಿಸುತ್ತೇವೆ.

| | |
|---|---|
| ಬಿ.ಎಲ್.ಶಂಕರ | ಎಂ.ವಿ.ವೆಂಕಟಪ್ಪ |
| ಸಭಾಪತಿ | ಸಭಾಧ್ಯಕ್ಷರು |
| ಕರ್ನಾಟಕ ವಿಧಾನ ಪರಿಷತ್ತು | ಕರ್ನಾಟಕ ವಿಧಾನ ಸಭೆ |

# ನಮ್ಮ ಮಾತು

ಕರ್ನಾಟಕ ರಾಜ್ಯದ ವಿಧಾನ ಮಂಡಲದ ಸಚಿವಾಲಯವು ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳನ್ನು ಕುರಿತು ಬದುಕು - ಬರಹ ಮಾಲಿಕೆಯ ಅಡಿಯಲ್ಲಿ ಪುಸ್ತಕಗಳನ್ನು ಪ್ರಕಟಿಸಲು ತೀರ್ಮಾನಿಸಿದ್ದು ನಿಜಕ್ಕೂ ಶ್ಲಾಘನೀಯವಾದ ಕಾರ್ಯವಾಗಿದೆ. ಇದರಿಂದ ಶಾಸನ ಸಭೆಗಳಲ್ಲಿ ಸೇವೆ ಸಲ್ಲಿಸಿದ ಹಿರಿಯ ಹಾಗೂ ಪ್ರತಿಭಾವಂತ ಸಂಸದೀಯ ಪಟುಗಳ ವಿಚಾರಗಳು ಮತ್ತು ಅನುಭವಗಳು ಮುಂದಿನ ಶಾಸಕರುಗಳಿಗೆ, ಅಧಿಕಾರಿಗಳಿಗೆ ದಾರಿ ದೀಪವಾಗುವುದರಲ್ಲಿ, ಸಂದೇಹವಿಲ್ಲ. ಈ ಯೋಜನೆಯ ಅಡಿಯಲ್ಲಿ ಈಗಾಗಲೇ ಶ್ರೀ ಕೆ. ಹನುಮಂತಯ್ಯ, ಶ್ರೀ ವಿರೇಂದ್ರ ಪಾಟೀಲ್, ಶ್ರೀ ಕಡಿದಾಳ್ ಮಂಜಪ್ಪ, ಶ್ರೀ ಎಸ್. ನಿಜಲಿಂಗಪ್ಪನವರ ಕೃತಿಗಳು ಪ್ರಕಟಗೊಂಡಿವೆ. ಕರ್ನಾಟಕ ರಾಜ್ಯದ ವಿಧಾನಸಭೆಯ ಸದಸ್ಯರಾಗಿದ್ದ ಮತ್ತು ಶ್ರೇಷ್ಠ ರಾಜಕಾರಣಿ ಶ್ರೀ ಗಂಗಾಧರ ನಮೋಶೀಯವರನ್ನು ಕುರಿತು ಪುಸ್ತಕ ರಚಿಸುವ ಜವಾಬ್ದಾರಿಯನ್ನು ವಿಧಾನ ಮಂಡಲದ ಸಚಿವಾಲಯದ ಗ್ರಂಥಾಲಯ ಉಪ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರು ನಮಗೆ ಒಪ್ಪಿಸಿದಾಗ ನಾವು ಸಂತೋಷದಿಂದ ಒಪ್ಪಿಕೊಂಡುದರ ಫಲವಾಗಿ ಪ್ರಸ್ತುತ ಗ್ರಂಥವು ರಚಿಸಲ್ಪಟ್ಟಿದೆ.

ಶ್ರೀ ಗಂಗಾಧರ ನಮೋಶಿಯವರು, 1962 ರಿಂದ 1967ರ ವರೆಗೆ, ವಿಧಾನ ಸಭೆಯ ಸದಸ್ಯರಾಗಿ, ರಾಜ್ಯಕ್ಕೆ ಮತ್ತು ತಮ್ಮ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆ ಅಮೋಘವಾದದ್ದು. ಶ್ರೀ ಗಂಗಾಧರ ನಮೋಶಿಯವರು, ಉತ್ತಮ ವಾಗ್ಮಿಗಳು, ವಿಚಾರವಂತರು, ಮತ್ತು ಮುತ್ಸದ್ದಿಯಾಗಿದ್ದರು. ಅವರು ಶಾಸನ ಸಭೆಯಲ್ಲಿ ಮಂಡಿಸಿದ ವಿಚಾರಗಳು, ಭಾಷಣಗಳು ಪ್ರಶ್ನೆಗಳು ಮತ್ತು ಸ್ಪಷ್ಟೀಕರಣಗಳು, ಜನಪರ ಮತ್ತು ಮೌಲಿಕವಾದುದ್ದಾಗಿವೆ.

ಶ್ರೀ ಗಂಗಾಧರ ನಮೋಶಿಯವರ ಜೀವನ ಚರಿತ್ರೆ ಮತ್ತು ವ್ಯಕ್ತಿತ್ವ ಬರಹವನ್ನು ಬರೆಯುವಲ್ಲಿ, ನಮಗೆ ಸಹಾಯ ಮಾಡಿದ, ಅವರ ಪುತ್ರ ಶ್ರೀ ಶಶೀಲ ನಮೋಶಿ, ಎಂ.ಎಲ್.ಸಿ, ಮತ್ತು ಶ್ರೀ ಆರ್.ಕೆ. ಹುಡಗಿ, ಪ್ರಾಧ್ಯಾಪಕರು, ಪಿ.ಡಿ.ಎ. ಇಂಜಿನಿಯರಿಂಗ್ ಮಹಾವಿದ್ಯಾಲಯ ಗುಲಬರ್ಗಾ, ಅವರಿಗೆ ನಮ್ಮ ಅನಂತ ಅನಂತ ವಂದನೆಗಳು. ಈ ಕೃತಿಯ ರಚನೆಗೆ ಪ್ರೋತ್ಸಾಹಿಸಿದ ನಮ್ಮ ಆತ್ಮೀಯ ಮಿತ್ರರಾದ ಡಾ: ಎಸ್.ಎಸ್.ಚಟ್ಟಿ, ಪ್ರಾಧ್ಯಾಪಕರು, ಗಣಿತ ವಿಭಾಗ, ಗುಲ್ಬರ್ಗಾ ವಿಶ್ವವಿದ್ಯಾನಿಲಯ ಅವರಿಗೂ ಮತ್ತು ಇನ್ನುಳಿದ ಮಿತ್ರರಾದ ಆರ್.ಎಸ್.ಪಾಟೀಲ್, ಸಿಂಪಿ, ಕವಂಟೆ ಎಚ್.ಎಸ್. ಅವರಿಗೆ ಮತ್ತು ಇನ್ನುಳಿದ ಮಿತ್ರರಿಗೂ ನಮ್ಮ ಧನ್ಯವಾದಗಳು. ಈ ಕೃತಿಯನ್ನು ಅಂದವಾಗಿ ಬೆರಳಚ್ಚು ಮಾಡಿದ ರಾಜ್ಯ ಶಾಸ್ತ್ರ ವಿಭಾಗದ ಸಂಶೋಧಕ ಮಿತ್ರರಾದ ಶ್ರೀ ಜಗದೀಶ ಆರ್. ಪಾಂಚಾಳ ಅವರಿಗೂ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ಡಾ: ಕವಂಟೆ ಎಸ್.ಎಚ್
ರಾಜ್ಯಶಾಸ್ತ್ರ ಪ್ರಾಧ್ಯಾಪಕರು,

ಡಾ: ಜೆ. ಎಸ್. ಪಾಟೀಲ್
ಕಾನೂನುಶಾಸ್ತ್ರ ಪ್ರಾಧ್ಯಾಪಕರು,

ಡಾ: ಎಮ್.ಎಸ್.ಧಡವೆ,
ಸಮಾಜಶಾಸ್ತ್ರದ ನಿವೃತ್ತ ಪ್ರಾಧ್ಯಾಪಕರು.

ಗುಲಬರ್ಗಾ ವಿಶ್ವವಿದ್ಯಾಲಯ,
ಮಕರ ಸಂಕ್ರಮಣ.

## ವಿಧಾನ ಮಂಡಲದ ಗ್ರಂಥಾಲಯ ಉಪಸಮಿತಿ

## (2000 - 2001)

ಶ್ರೀಯುತರುಗಳಾದ:

1) ಬಿ.ಬಿ. ಶಿವಪ್ಪ - ಅಧ್ಯಕ್ಷರು
ವಿಧಾನ ಸಭಾ ಸದಸ್ಯರು

2) ಕಾಕಾಸಾಹೇಬ.ಪಾಂ. ಪಾಟೀಲ್ - ಸದಸ್ಯರು
ವಿಧಾನ ಸಭಾ ಸದಸ್ಯರು

3) ಸಿರಾಜ್ ಶೇಖ್ - ಸದಸ್ಯರು
ವಿಧಾನ ಸಬಾ ಸದಸ್ಯರು

4) ಪಿ. ಎಂ. ರಂಗನಾಥ್ - ಸದಸ್ಯರು
ವಿಧಾನ ಸಭಾ ಸದಸ್ಯರು

5) ಎನ್. ಸಂಪಂಗಿ - ಸದಸ್ಯರು
ವಿಧಾನ ಸಭಾ ಸದಸ್ಯರು

6) ಡಾ|| ವಿ.ಎಸ್. ಆಚಾರ್ಯ - ಸದಸ್ಯರು
ವಿಧಾನ ಪರಿಷತ್ತ್ನ ಸದಸ್ಯರು

7) ಡಾ|| ಹೆಚ್. ಎಸ್. ನಾಗೇಗೌಡ - ಸದಸ್ಯರು
ವಿಧಾನ ಪರಿಷತ್ತಿನ ಸದಸ್ಯರು

8) ಕೆ.ಸಿ. ಪುಟ್ಟಸಿದ್ಧಶೆಟ್ಟಿ - ಸದಸ್ಯರು (ಜೂನ್ ವರೆಗೆ)
ವಿಧಾನ ಪರಿಷತ್ತಿನ ಸದಸ್ಯರು

9) ಜಿ. ಮಧುಸೂದನ - ಸದಸ್ಯರು (ಜುಲೈದಿಂದ)
ವಿಧಾನ ಪರಿಷತ್ತಿನ ಸದಸ್ಯರು

(2001 - 2002)

ಶ್ರೀಯುತರುಗಳಾದ:

| | | | |
|---|---|---|---|
| 1) | ಬಿ.ಬಿ. ಶಿವಪ್ಪ<br>ವಿಧಾನ ಸಭಾ ಸದಸ್ಯರು | - | ಅಧ್ಯಕ್ಷರು |
| 2) | ಸುಭಾಷ್, ರುಕ್ಮಯ್ಯ ಗುತ್ತೇದಾರ್<br>ವಿಧಾನ ಸಭಾ ಸದಸ್ಯರು | - | ಸದಸ್ಯರು |
| 3) | ಚಂದ್ರಕಾಂತ್. ಗುರಪ್ಪ ಬೆಲ್ಲದ್<br>ವಿಧಾನ ಸಭಾ ಸದಸ್ಯರು | - | ಸದಸ್ಯರು |
| 4) | ಉಮೇಶ ಕತ್ತಿ<br>ವಿಧಾನ ಸಭಾ ಸದಸ್ಯರು | - | ಸದಸ್ಯರು |
| 5) | ಕೆ.ಎನ್.ಸುಬ್ಬಾರೆಡ್ಡಿ<br>ವಿಧಾನ ಸಭಾ ಸದಸ್ಯರು | - | ಸದಸ್ಯರು |
| 6) | ಡಾ|| ಎಲ್. ಹನುಮಂತಯ್ಯ<br>ವಿಧಾನ ಪರಿಷತ್ತಿನ ಸದಸ್ಯರು | - | ಸದಸ್ಯರು |
| 7) | ಕೆ ನಿರಂಜನ ನಾಯ್ಡು<br>ವಿಧಾನ ಪರಿಷತ್ತಿನ ಸದಸ್ಯರು | - | ಸದಸ್ಯರು |
| 8) | ಶ್ರೀಮತಿ ನಿರ್ಮಲಾ ವೆಂಕಟೇಶ್<br>ವಿಧಾನ ಪರಿಷತ್ತಿನ ಸದಸ್ಯರು | - | ಸದಸ್ಯರು |

# ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

## ಗಂಗಾಧರ ನಮೋಶಿ

ಪರಿವಿಡಿ

ಪುಟ ಸಂಖ್ಯೆ

## ಭಾಗ - ೩

## ಕಾಂ.ಗಂಗಾಧರ ನಮೋಶಿ

## ಭಾಗ - ೧

## ಜೀವನ ಚರಿತ್ರೆ ಮತ್ತು ವ್ಯಕ್ತಿತ್ವ

ರಾಜಕಾರಣಿಯ ಮುಂದಿನ ಚುನಾವಣೆಯನ್ನು ವಿಚಾರಿಸಿದರೆ, ಮುತ್ಸದ್ದಿಯು ಮುಂದಿನ ಪೀಳಿಗೆಯ ಬಗ್ಗೆ ವಿಚಾರಿಸುತ್ತಾನೆ ಕಾರಣ ಶ್ರೀ ಗಂಗಾಧಾರ ನಮೋಶಿಯವರು ಒಬ್ಬ ಮುತ್ಸದ್ದಿಯೇ ಸರಿ.

ಕಲಬುರ್ಗಿ ವಿಭಾಗದಲ್ಲಿ ಕ್ರಾಂತಿಕಾರಿ ಪ್ರಕ್ರಿಯೆಯನ್ನು ಆರಂಭಿಸಿ ಜನತೆಯ ಬದುಕನ್ನು ಹಸನು ಮಾಡುವುದಕ್ಕೆ, ಶ್ರಮ ಜೀವಿ ವರ್ಗದ ಬದುಕಿನ ಬವಣೆಯನ್ನು ದೂರೀಕರಿಸುವುದಕ್ಕೆ, ಎಲ್ಲಕ್ಕೂ ಮಿಗಿಲಾಗಿ, ಈ ಭಾಗದ ಜನತೆ ಜಾತಿ, ಮತ, ಪಂಥ, ಕೋಮುವಾದದ ಪರಿಧಿಯಾಚೆಗೆ ಚಿಂತಿಸುತ್ತ, ಅದಕ್ಕನುಗುಣವಾದ ಜೀವನ ರೂಪಿಸಿ ಕೊಳ್ಳುವುದಕ್ಕೆ, ತಮ್ಮ ಬದುಕನ್ನೇ ಮುಡುಪಾಗಿರಿಸಿದ್ದ ವ್ಯಕ್ತಿ ಕಾಂ. ಗಂಗಾಧರ ನಮೋಶಿ. ಕಾಂ. ನಮೋಶಿಯವರು ಕ್ರಾಂತಿಕಾರಿ ಪಥದಲ್ಲಿ ಹೆಜ್ಜೆಯಿಟ್ಟದ್ದು 40ರ ದಶಕದಲ್ಲಿ. ಆಗ ಕಲಬುರ್ಗಿ ವಿಭಾಗ ಇನ್ನೂ ಹೈದ್ರಾಬಾದ ನಿಜಾಮರ ಆಧೀನದಲ್ಲಿತ್ತು. ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ತೀರ ಗೊಂದಲದ ಸ್ಥಿತಿಯಲ್ಲಿದ್ದ ಅಂದಿನ ಪರಿಸರದಲ್ಲಿ ಕ್ರಾಂತಿಕಾರಿ ರಾಜಕಾರಣಕ್ಕೆ ಸಾಕಷ್ಟು ಅವಕಾಶಗಳಿದ್ದರೂ ಅದಕ್ಕೆ ಪೂರಕವಾದ ಅನುಕೂಲತೆಗಳಿರಲಿಲ್ಲ. ಶೇಕಡಾ 10 ಪ್ರತಿಶತ ರಷ್ಟಿದ್ದ ಸಾಕ್ಷರತೆಯ ಪ್ರಮಾಣ ಜನ ಸಾಮಾನ್ಯರನ್ನು ದೈನಂದಿನ ರಾಜಕೀಯ ಪ್ರಕ್ರಿಯೆಗಳಿಂದ ಬಹುದೂರ ಇಟ್ಟಿತ್ತು. ಕಲಬುರ್ಗಿಯಂಥ ವಿಭಾಗೀಯ ಕೇಂದ್ರದಲ್ಲಿಯೂ ಕೇವಲ ಇಂಟರ್ ಮೀಡಿಯಟ್‌ವರೆಗೆ ಮಾತ್ರ ಉನ್ನತ ಶಿಕ್ಷಣದ ಅವಕಾಶವಿತ್ತು. ಸಾವಿರಾರು ಊರುಗಳಲ್ಲಿ ಶಾಲೆಗಳೇ ಇರಲಿಲ್ಲ. ಇದ್ದ ಬಿದ್ದ ಮಠದ ಶಾಲೆಗಳಲ್ಲಿ ಉಳ್ಳವರ ಮಕ್ಕಳಿಗೆ ಮಾತ್ರ ಅವಕಾಶವಿದ್ದರೆ, ಅಲ್ಲೊಂದು ಇಲ್ಲೊಂದು ಕಾಣಸಿಗುತ್ತಿದ್ದ ಮದರಸಾಗಳಲ್ಲಿ ಉರ್ದು ಮಾಧ್ಯಮ ವಿಜೃಂಭಿಸುತ್ತಿತ್ತು. ಹೀಗಾಗಿ ಜನತೆ ಕಲಿಯುವ ಅವಕಾಶಗಳಿಂದ ವಂಚಿತರಾಗಿದ್ದರು. ಹೊಟ್ಟೆ ಹೊರೆಯುವದೇ ದೈನಂದಿನ ಪ್ರಯಾಸವಾಗಿದ್ದಾಗ ಇತರ ಶಿಕ್ಷಣ ಸಾಂಸ್ಕೃತಿಕ ಸಂಗತಿಗಳ ಬಗ್ಗೆ ತಲೆಕೆಡಿಸಿಕೊಳ್ಳುವ ಅವಶ್ಯಕತೆಯೂ ಇರಲಿಲ್ಲ; ಅವಕಾಶವೂ ಇರಲಿಲ್ಲ. ಪರಿಣಾಮವಾಗಿ ಜನತೆ ಕತ್ತಲಲ್ಲಿಯೇ ಬದುಕು ತಳ್ಳುತ್ತಿತ್ತು. ತಮಗಾಗುತ್ತಿರುವ ಶೋಷಣೆಯ ಪರಿವೆಯೇ ಅವರಿಗಿರಲಿಲ್ಲ. ಅಂದ ಮೇಲೆ ಅದರ ವಿರುದ್ಧ ಪ್ರತಿಭಟನೆಯಂತೂ ದೂರದ ಮಾತು. ಒಂದು ರೀತಿಯಲ್ಲಿ ಜನತೆಗೆ ರಾಜಕಾರಣದ ಗಂಧವೇ ಇರಲಿಲ್ಲವೆಂದರೂ ತಪ್ಪಾಗಲಾರದು.

ಇಡೀ ರಾಜಕೀಯ ವ್ಯವಸ್ಥೆ ಮಧ್ಯಯುಗದ ಪಾಳೇಗಾರಿ ಸ್ವರೂಪದ್ದಾಗಿತ್ತು. ಸ್ವತಃ ನಿಜಾಮನೆ ಬ್ರಿಟಿಷರ ಅಡಿಯಾಳಾಗಿದ್ದ. ಅಂತೆಯೇ ತನ್ನ ರಾಜ್ಯದ ಉದ್ದಗಲಕ್ಕೂ

ಹರಡಿಕೊಂಡಿದ್ದ ಸಾವಿರಾರು ಜಮೀನ್ದಾರು, ಜಾಹಗೀರದಾರರು, ದೇಶಪಾಂಡೇ ದೇಶಮುಖರು, ಗೌಡ ಕುಲಕರ್ಣಿಗಳಂತಹ ಊಳಿಗಮಾನ್ಯ ಏಜೆಂಟರ ಮೂಲಕ ರಾಜ್ಯಭಾರ ನಡೆಸುತ್ತಿದ್ದ ಒಂದು ಗಮನಾರ್ಹ ಸಂಗತಿಯೆಂದರೆ, ಸ್ವತ: ನಿಜಾಮ ಮುಸಲ್ಮಾನನಾಗಿದ್ದರೂ ಆತನ ಸಂಸ್ಥಾನ 'ಇಸ್ಲಾಮಿಕ್' ರಾಜ್ಯವಾಗಿರಲಿಲ್ಲ. ಇಡೀ ಸಂಸ್ಥಾನದಲ್ಲಿ ಶೇಕಡಾ 14 ರಷ್ಟು ಮಾತ್ರ ಮುಸಲ್ಮಾನರಿದ್ದು, ಉಳಿದ ಶೇಕಡಾ 86 ರಷ್ಟು ಜನ ಮುಸ್ಲಿಂಯೇತರರಾಗಿದ್ದರು. ಈ ಬಹುಸಂಖ್ಯಾತರು ನಿಜಾಮ ಶಾಹಿಯ ಅಧಿಪತ್ಯವನ್ನು ಕೋಮುವಾದಿ ದೃಷ್ಟಿಯಿಂದ ನೋಡುತ್ತಿರಲಿಲ್ಲ. ಕಾರಣ, ಸುಮಾರು 1935ರ ವರೆಗೂ ಯಾವುದೇ ಜಾತೀಯ ದ್ವಂದ್ವ, ಕಲಹಗಳು ಕಾಣಿಸಿಕೊಂಡಿದ್ದಿಲ್ಲ. ನಿಜಾಮನ ಆಡಳಿತದ ಕೆಳಹಂತದ ಪಾಳೇಯ ಪಟುಗಳು ಹಿಂದೂ - ಮುಸ್ಲಿಂರಾದಿಯಾಗಿ ಎಲ್ಲರನ್ನೂ ಸಮಾನವಾಗಿ ಸುಲಿಯುತ್ತಿದ್ದರು. ಆದ್ದರಿಂದ ದುಡಿಯುವ ವರ್ಗದ ಮೇಲಾಗುತ್ತಿದ್ದ ದೌರ್ಜನ್ಯಕ್ಕೆ ಕೋಮು ಜಾತಿಯ ಭೇದ ವಿರಲಿಲ್ಲ. ಬಡತನ ನಿರಕ್ಷರತೆ ಯಿಂದ ಕೂಡಿದ ದುರ್ಭರ ಸ್ಥಿತಿಯಲ್ಲಿ ಬದುಕು ತಳ್ಳುತ್ತಿದ್ದ ಜನತೆ ತಮ್ಮ ಕಷ್ಟ ಪರಂಪರೆಗೆ ಒಂದೋ ತಮ್ಮ ತಕ್ಷಣದ ಜಮೀನ್ದಾರಿ ವರ್ಗದ ದಬ್ಬಾಳಿಕೆಯೇ ಕಾರಣವೆಂದು ಬಗೆಯುತ್ತಿದ್ದರು. ಇಲ್ಲವೆ, ತಮ್ಮ ದು:ಸ್ಥಿತಿ ದು:ಖದುಮ್ಮಾನಗಳಿಗೆಲ್ಲ ತಮ್ಮ ಪ್ರಾರಬ್ಧವೇ ಕಾರಣವೆಂದು ಭಾವಿಸುತ್ತಿದ್ದರು. ಇದರಿಂದಾಗಿ ತಮ್ಮ ತಮ್ಮ ಯಥಾಶಕ್ತಿ ನಿಜಾಮನಿಗೆ 'ನಜರಾನ' ಒಪ್ಪಿಸುತ್ತಿದ್ದ ಜಮೀನ್ದಾರರು ಪ್ರತಿಯಾಗಿ ತಮ್ಮ ಪರಧಿಯೊಳಗೆ ಬರುವ ಜನಸಾಮಾನ್ಯರನ್ನು ಯಥಾಶಕ್ತಿಯಾಗಿಯೇ ದೋಚುತ್ತಿದ್ದರು.

ಅಸ್ತಿತ್ವದ ಅರಿವಿಲ್ಲದವರು ಕ್ರಾಂತಿಯ ಬಗ್ಗೆ ಚಿಂತಿಸಲು ಸಾಧ್ಯವೇ? ಕಾರಣ ಜನಕೋಟಿ ತುಟಿ ಪಿಟ್ಟೆನ್ನದೇ ಎಲ್ಲವನ್ನೂ ಮೌನವಾಗಿಯೇ ಸಹಿಸಿಕೊಂಡಿತ್ತು. ಕಾಂ. ಗಂಗಾಧರ ನಮೋಶಿಯವರು ಕಮ್ಯುನಿಸ್ಟ್ ಪಕ್ಷ, ಕಟ್ಟಿ ಜನತೆಯನ್ನು ಕ್ರಾಂತಿಯ ದಾರಿಯಲ್ಲಿ ಮುನ್ನಡೆಸುವ ಹಂಬಲದಿಂದ ಸಾರ್ವಜನಿಕ ಕ್ಷೇತ್ರಕ್ಕೆ ಕಾಲಿಟ್ಟಾಗ ಸಾಮಾಜಿಕ, ಮತ್ತು ರಾಜಕೀಯ ಪರಿಸ್ಥಿತಿ ಮಡುಗಟ್ಟಿ ನಿಂತಿತ್ತು. ವರ್ತಮಾನದ ವ್ಯವಸ್ಥೆಯ ಪ್ರಜ್ಞೆಯೇ ಇಲ್ಲದ ಜನತೆಯಲ್ಲಿ ಉಜ್ವಲ ಭವಿಷ್ಯತ್ತಿನ ಕನಸು ಕುದುರಿಸುವ ಕೆಲಸಕ್ಕೆ ಕೈಹಾಕಿದ ಕಾಂ. ನಮೋಶಿಯವರ ಮುಂದೆ ಅಸಂಖ್ಯಾತ ಸಮಸ್ಯೆಗಳ ಗುಡ್ಡವೇ ಇತ್ತು ಗಾಂಧೀವಾದಿ ಚಟುವಟಿಕೆಯ ಕಾಂಗ್ರೇಸಿನ ರಾಜಕಾರಣಕ್ಕೂ ಅವಕಾಶವಿಲ್ಲದಿದ್ದ, ಅಂದಿನ ಕಾಲದಲ್ಲಿ ಕಮ್ಯುನಿಸ್ಟ್ ರಾಜಕೀಯ ಚಟುವಟಿಕೆ ನಡೆಸುವದು, ಬಹುದುಸ್ತರದ ಕೆಲಸವಾಗಿತ್ತು. ತೆಲಂಗಾಣ ರೈತರ ಸಶಸ್ತ್ರ ಹೋರಾಟದಿಂದ ಹತಾಹತನಾಗಿದ್ದ ನಿಜಾಮ ಕಮ್ಯುನಿಸ್ಟ್‌ರೆಂದರೆ ಕೆಂಡ ಕಾರುತ್ತಿದ್ದ. ಒಂದೆಡೇ ಜನತೆಯ ಅಜ್ಞಾನ ಮತ್ತು ಉದಾಸೀನತೆ ಮತ್ತೊಂದೆಡೆ ನಿಜಾಮನ ನಿರಂಕುಶ ದಬ್ಬಾಳಿಕೆ ಇದರ ಮಧ್ಯ ಜನಪರ ಕ್ರಾಂತಿಕಾರಿ ರಾಜಕೀಯ ಚಟುವಟಿಕೆ ನಡೆಸುವದು ಅಸಾಧ್ಯದ ಕೆಲಸ. ಛಲವೆಂಬುದು ಕಾಂ.ನಮೋಶಿಯವರ ಹುಟ್ಟು ಗುಣವಾಗಿತ್ತು. ಅಸಾಧ್ಯವಾದದ್ದನ್ನು ಸಾಧ್ಯವನ್ನಾಗಿ ಮಾಡುವುದೇ ಅವರ ಛಲವಾಗಿತ್ತು. ಅಂತೆಯೇ ಜನತೆಯನ್ನು ನಿಜಾಮಶಾಹಿ ವಿರುದ್ಧ ಹೋರಾಡಲು ಟೊಂಕ ಕಟ್ಟಿ ನಿಂತರು. ಆ ಕೆಲಸಕ್ಕಾಗಿ

ಕಾರ್ಮಿಕ ವರ್ಗವನ್ನು ಹುರಿದುಂಬಿಸುವ ಉದ್ದೇಶದಿಂದ ಸ್ಥಳೀಯ ಎಮ್.ಎಸ್.ಕೆ. ಮಿಲ್ಲಿನ ಕಾರ್ಮಿಕ ವರ್ಗದ ಸಂಘಟನೆಗೆ ತೊಡಗಿದರು. ಅನಕ್ಷರಸ್ಥರಾಗಿದ್ದ ಬಹುಸಂಖ್ಯಾತ ಕಾರ್ಮಿಕರನ್ನು ಸಾಕ್ಷರರನ್ನಾಗಿ ಮಾಡಲು ಅವರು ಮಾಡಿದ ಪ್ರಥಮ ಕೆಲಸವಾಗಿತ್ತು. ಕ್ರಾಂತಿಯ ದಾರಿಯಲ್ಲಿ ಇಂತಹ ಪ್ರಾಥಮಿಕ ಕೆಲಸದಿಂದ ಆರಂಭಿಸಿದ ಕಾಂ. ನಮೋಶಿಯವರು ಮನೆ ಮಠ ಬಿಟ್ಟು ಹಗಲಿರುಳು ಮಿಲ್ಲಿನ ಕಾರ್ಮಿಕ ವರ್ಗದೊಂದಿಗೆ ಕಾಲ ಕಳೆಯತೊಡಗಿದರು. ಇದರಿಂದ ತಮ್ಮ ಸ್ವಂತ ಶಿಕ್ಷಣಕ್ಕೆ ಅಡ್ಡಿಯಾಯಿತಲ್ಲದೆ, ಇದ್ದೊಬ್ಬ ಮಗ ಓದು ಬರಹ ಬಿಟ್ಟು 'ಕೂಲಿ - ನಾಲಿ' ಮಾಡುವ ಕೀಳು ವೃತ್ತಿಯವರ ಸ್ನೇಹ ಸಾನಿಧ್ಯ ಬೆಳೆಸುತ್ತಾ ನಡೆದ್ದದ್ದು ಅವರ ತಂದೆಯರಲ್ಲಿ ಕಳವಳ ಮೂಡಿಸಿತು.

ಕಾಂ. ಗಂಗಾಧರ ನಮೋಶಿಯವರದ್ದೂ ಕಲಬುರ್ಗಿಯಲ್ಲಿ ಬಹುದೊಡ್ಡ ಮನೆತನ. ಅವರ ಅಜ್ಜ ಶ್ರೀ ಶರಣಪ್ಪ ನಮೋಶಿ ಕಲಬುರ್ಗಿಯ ಸುಪ್ರಸಿದ್ಧ ವ್ಯಾಪಾರಿಯಾಗಿದ್ದರು. ಕಾಂ. ಗಂಗಾಧರ ನಮೋಶಿಯವರ ತಂದೆ ಶ್ರೀ ಅಣ್ಣಪ್ಪ ನಮೋಶಿಯವರೂ ತಮ್ಮ ಹಿರಿಯರ ದಾರಿಯಲ್ಲಿಯೇ ಮುನ್ನಡೆದು ವ್ಯಾಪಾರ ಉದ್ಯಮದ ನೆಲೆಯನ್ನು ವಿಸ್ತೃತಗೊಳಿಸಿದರು. ಶ್ರೀ ಶರಣಪ್ಪ ನಮೋಶಿಯವರ ಕಾಲದಿಂದಲೂ ನಮೋಶಿ ಮನೆತನದ ಸಾಮಾಜಿಕ ಸ್ನೇಹ ಸಂಬಂಧಗಳು ಕಲಬುರ್ಗಿಯ ಇತರ ದೊಡ್ಡ ದೊಡ್ಡ ಮನೆತನಗಳೊಂದಿಗೇ ಸಾಗಿ ಬಂದುದ್ದರಿಂದ ಕಲಬುರ್ಗಿಯಲ್ಲಿ ನೆಂಟರಿಷ್ಟರ ಸಂಖ್ಯೆ ಬಹುವಾಗಿ ಬೆಳೆದಿತ್ತು. ಹೆಚ್ಚು ಕಡಿಮೆ ಈ ಎಲ್ಲಾ ಬಂಧು ಬಾಂಧವರು ಕಲಬುರ್ಗಿಯ ಒಂದಿಲ್ಲೊಂದು ಕ್ಷೇತ್ರದಲ್ಲಿ ಹೆಸರು ಮಾಡಿದ್ದ ಸಿರಿವಂತರಾಗಿದ್ದರು. ಪರಿಣಾಮವಾಗಿ ಶ್ರೀ ನಮೋಶಿಯವರದ್ದು ಕಲಬುರ್ಗಿಯಲ್ಲಿ ಬಹುಗಣ್ಯ 'ಖಾನ್‌ದಾನ್' ಎಂಬ ಹೆಸರಿಗೆ ಕಾರಣವಾಗಿತ್ತು. ಇಂತಹ ಬಹುದೊಡ್ಡ ಮನೆತನದ ಏಕೈಕ ಪುತ್ರ ಗಂಗಾಧರ ನಮೋಶಿ ಕಮ್ಯುನಿಸ್ಟ್ ಪಕ್ಷ ಸೇರಿ ಕಾಂಮ್ರೇಡ್ ಗಂಗಾಧರ ನಮೋಶಿಯಾಗಿ ಶ್ರಮಜೀವಿಗಳ ಸಂಪರ್ಕದಲ್ಲಿ ಬದುಕು ರೂಪಿಸಿಕೊಳ್ಳುತ್ತಿದ್ದದ್ದು, ಸಹಜವಾಗಿಯೇ ಅಂದಿನ ಸಿರಿವಂತರ ದೃಷ್ಟಿಯಲ್ಲಿ ದಾರಿಬಿಟ್ಟ ಹುಡುಗನಾಗಿ ಕಾಣತೊಡಗಿದರು. ಕಟ್ಟಾ ಕಾಂಗ್ರೆಸ್ಸಿಗರಾಗಿದ್ದ ಶ್ರೀ ಅಣ್ಣಪ್ಪ ನಮೋಶಿಯವರು ಮಗನನ್ನು ಗಾಂಧೀವಾದಿ ದಾರಿಗೆ ತರಲು ಮಾಡಿದ ಪ್ರಯತ್ನಗಳೆಲ್ಲ ವಿಫಲವಾದುವು. ಶೋಷಣೆಯ ಸ್ವರೂಪವನ್ನು ಆಮೂಲಾಗ್ರವಾಗಿ ಅಧ್ಯಯನಿಸಿದ ಕಾಂ.ಗಂಗಾಧರ ನಮೋಶಿಯವರು, ತಮ್ಮ ತಂದೆಯವರ ಉಪದೇಶದಿಂದ ವಿಚಲಿತರಾಗಲಿಲ್ಲ. ಬದಲಾಗಿ ಕ್ರಾಂತಿಯ ಬಗ್ಗೆ ಅವರಿಗಿದ್ದ ವಿಶ್ವಾಸ ಶೋಷಿತ ಜನತೆಯ ಬಗ್ಗೆ ಇದ್ದ ಕಳಕಳಿ ಇನ್ನೂ ಹೆಚ್ಚಾಗತೊಡಗಿತು; ಕಾರ್ಮಿಕರ ಸಖ್ಯ ದಿನದಿಂದ ದಿನಕ್ಕೆ ಬೆಳೆಯ ತೊಡಗಿತು ಇದರಿಂದ ವ್ಯಾಕುಲಗೊಂಡ ಶ್ರೀ ಅಣ್ಣಪ್ಪ ನಮೋಶಿಯವರಿಗೆ ಯಾರೋ ಸಲಹೆ ನೀಡಿದರು: "ಲಗ್ನ ಮಾಡಿ ಬಿಡ್ರಿ, ಎಲ್ಲಾ ದಾರಿಗೆ ಬರ್ತಾನ್". ಈ ಸಲಹೆಯನ್ನು ಶ್ರೀ ಅಣ್ಣಪ್ಪ ನಮೋಶಿಯವರು ಗಂಭೀರವಾಗಿ ಪರಿಗಣಿಸಿದರು. ಪರಿಣಾಮವಾಗಿ ಕಾಂಮ್ರೇಡ್ ಗಂಗಾಧರ ನಮೋಶಿಯವರ

ಮದುವೆಯಾಯಿತು. ಆದರೆ, ಅವರ ತಂದೆಯವರ ನಿರೀಕ್ಷೆಗೆ ವ್ಯತಿರಿಕ್ತವಾಗಿ, ಕ್ರಾಂತಿಕಾರಿ ಮನೋಭಾವ ಇನ್ನೂ ಹುರಿಗೊಂಡಿತು. ಕಮ್ಯುನಿಸ್ಟ್ ಪಕ್ಷದ ಬಗ್ಗೆ ಕಾಳಜಿ ಇಮ್ಮಡಿಯಾಯಿತು; ಕಾರ್ಮಿಕ ವರ್ಗದ ಬಗೆಗಿದ್ದ ಪ್ರೀತಿ ನೂರ್ಮಡಿಯಾಯಿತು. ಪರಿವರ್ತನಾ ಶೀಲವು, ಇನ್ನಷ್ಟೂ ವೃದ್ಧಿಯಾಗುತ್ತ ಹೋಯಿತು.

ಮಗನ ಭವಿಷ್ಯವನ್ನು, ತಮ್ಮ ಅಭಿಲಾಸೆಯಂತೆ ರೂಪಿಸುವ ಉದ್ದೇಶದಿಂದ ಮದುವೆ ಮಾಡಿದರೂ ಈಡೇರಲಿಲ್ಲ. ಏಕೆಂದರೆ, ಸಮತೆ ಸಮಭಾವದಿಂದ ಕೂಡಿದ, ಶೋಷಣಾರಹಿತ ಜಾತ್ಯಾತೀತ, ಸಮಾಜ ನಿರ್ಮಾಣದ ಆಕಾಂಕ್ಷೆಯನ್ನು ನರನಾಡಿಗಳಲ್ಲಿ ತುಂಬಿಕೊಂಡಿದ್ದ ಕಾಂ. ಗಂಗಾಧರ ನಮೋಶಿಯವರಿಗೆ, ವೈಯಕ್ತಿಕ ಬದುಕಿನ ಬೇಕು ಬೇಡಗಳು, ಆಶೆ ಆಕಾಂಕ್ಷೆಗಳು, ಲವಲೇಶವೂ ಕಾಡಲಿಲ್ಲ. ಅದರ ಬದಲಾಗಿ, ಅವರ ರಾಜಕೀಯ ಚಟುವಟಿಕೆಗಳು ಇನ್ನೂ ತೀವ್ರಗೊಂಡವು.

ಭಾರತ ವಿಭಜನೆ ಮತ್ತು ಅಧಿಕಾರದ ಹಸ್ತಾಂತರ ಸಂದರ್ಭದಲ್ಲಿ ಬ್ರಿಟೀಷರು ದೇಶಿಯ ಸಂಸ್ಥಾನಿಕರಿಗೆ ಸ್ವತಂತ್ರ ತೀರ್ಮಾನದ ಹಕ್ಕು ನೀಡಿ ಹೋದುದ್ದರಿಂದ ಹೈದ್ರಾಬಾದಿನ ನಿಜಾಮರಲ್ಲಿ ಹೊಸ ಆಶೆ ಹುಟ್ಟಿಸಿತು. ಭಾರತದ ಒಕ್ಕೂಟದಲ್ಲಿ ತಮ್ಮ ಸಂಸ್ಥಾನವನ್ನು ವಿಲೀನಗೊಳಿಸಿ ತಮ್ಮ ಅಧಿಕಾರದ ಗದ್ದುಗೆಯನ್ನು ಕಳೆದು ಕೊಳ್ಳುವ ಬದಲು, ತಮ್ಮದೊಂದು ಸ್ವತಂತ್ರ ರಾಷ್ಟ್ರ, (ಒಂದು ವಿಧದ ದಕ್ಷಿಣ ಪಾಕಿಸ್ತಾನ) ರೂಪಿಸಿಕೊಳ್ಳಬೇಕೆಂಬುದೇ ನಿಜಾಮರ ಅಂತರಾಳದಲ್ಲಿ ಆಶೆ ಚಿಗುರಿತು ಈ ಸಸಿಗೆ ನೀರು ಹಾಕಿ ಹೆಮ್ಮರ ಮಾಡುವ ಹುನ್ನಾರ ಕಾಶಿಂ ರಜವಿಯದ್ದಾಯಿತು. ಕಾಶಿಂ ರಜವಿ ನಿಜಾಮ ಸಂಸ್ಥಾನದ ಒಂದು ಚಿಕ್ಕ ಪಟ್ಟಣವಾಗಿದ್ದ ಲಾತೂರಿನಲ್ಲಿ ಲಾಯರಗಿರಿ ಮಾಡಿಕೊಂಡಿದ್ದವನು, ಇತ್ತೆ - ಹಾದ್ - ಮುಸ್ಲಮಿನ್ ಎಂಬ ಕೋಮುವಾದಿ ಭಯೋತ್ಪಾದಕ ಸಂಘಟನೆಯ ನೇತಾರನಾಗಿ ಹೊರ ಹೊಮ್ಮಿದ್ದೆ ತಡ, ತನ್ನ ಕಾರ್ಯಕ್ಷೇತ್ರವನ್ನು ಹೈದ್ರಾಬಾದಿಗೆ ಸ್ಥಳಾಂತರಿಸಿದ ರಜವಿ, ಕ್ರಮೇಣ ನಿಜಾಮರ ಕಿವಿ ಕಚ್ಚಲು ಸುರು ಮಾಡಿದ. ಅಲ್ಲಿಯವರೆಗೆ ಯಾವುದೇ, ಕನಸುಗಳಿಲ್ಲದೇ ವಾಸ್ತವದ 'ಲಗ್ಜುರಿಯಸ್' ಬದುಕು ನಡೆಸುತ್ತಿದ್ದ ನಿಜಾಮರ ತಲೆಯಲ್ಲಿ ಬಣ್ಣ ಬಣ್ಣ ಕನಸುಗಳನ್ನು ತುಂಬ ತೊಡಗಿದ. ಭ್ರಮೆಯನ್ನೇ ವಾಸ್ತವವೆಂದು ಬಗೆಯಲಾರಂಭಿಸಿದ ನಿಜಾಮರು ರಜವಿಯ ಕೈಗೊಂಬೆಯಾದದ್ದು ಸಹಜವೇ. ಕುಬುದ್ಧಿ - ತಂತ್ರಗಾರಿಕೆಯಲ್ಲಿ ತುಂಬಾ ಚಾಣಾಕ್ಷನಾಗಿದ್ದ ಕಾಶಿಂ ರಜವಿ, ದಿನ ಬೆಳಗಾಗುವದರೊಳಗೆ ಸಂಸ್ಥಾನದ ಸಕಲರ ಮನೆ ಮಾತಾಗಿಬಿಟ್ಟ; ಇತ್ತೆಹಾದ್-ಉಲ್-ಮುಸ್ಲಮಿನ್ ಸಂಘಟನೆ ತುಂಬ ವ್ಯಾಪಕವಾಗಿ ಬೆಳೆಯಿತು. ಅದರ ಬೆಳವಣಿಗೆಗೆ ಸರ್ಕಾರ ಪ್ರತ್ಯಕ್ಷವಾಗಿ කುಮ್ಮಕ್ಕು ಕೊಟ್ಟದ್ದಲ್ಲದೆ, ತನ್ನ ಖಜಾನೆಯಿಂದ ಸಾಕಷ್ಟು ಸಂಪನ್ಮೂಲವನ್ನೂ ಒದಗಿಸಿತು. ತನ್ನ ಸರ್ಕಾರವನ್ನು, ಸಂಸ್ಥಾನವನ್ನು ಉಳಿಸಿ ಬೆಳೆಸುವ ಏಕೈಕ ಸಂಘಟನೆ ಇತ್ತೆ - ಹಾದ್ - ಉಲ್ - ಮುಸ್ಲಮಿನ್; ಮತ್ತು ಕಾಶಿಂ ರಜವಿ ತಮ್ಮ ರಕ್ಷಣೆಯ ಮತ್ತು ಉದ್ಧಾರಕ್ಕಾಗಿಯೇ ಅವತರಿಸಿದ ಫರಿಷ್ತಾ (ದೇವದೂತ)

ಎಂಬ ಹುಚ್ಚು ನಿಜಾಮರ ನರನಾಡಿಗಳಲ್ಲಿ ಹೊಕ್ಕು ಅವರನ್ನು ಸಂಭ್ರಮಗೊಳಿಸಿತು. ಇದೆಲ್ಲದರ ಒಟ್ಟು ಪರಿಣಾಮವಾಗಿ, ಇತ್ತೆ-ಹಾದ್-ಉಲ್-ಮುಸ್ಲಮಿನ್ ಸಂಘಟನೆಯ ಸದಸ್ಯರಾಗಿದ್ದ ರಜಾಕಾರರ ಭಯೋತ್ಪಾದನೆಯ ಹಾವಳಿ, ಆತಂಕ, ಅತ್ಯಾಚಾರದ ಚಟುವಟಿಕೆಗಳು ಒಮ್ಮೆಲೇ ಭುಗಿಲೆದ್ದವು. ಅಲ್ಲಿಯವರೆಗೆ ಯಾವುದೇ ಕೋಮುಭಾವನೆಯಿಲ್ಲದೆ ಸಹಬಾಳುವೆ ನಡೆಸುತ್ತಿದ್ದ ಸಂಸ್ಥಾನದ ಜನ ಜನಮಾನಸದಲ್ಲಿ ಹಿಂದೂ-ಮುಸ್ಲಿಂ ಎಂಬ ಕೋಮು ಭಾವನೆ ಕಾಣಿಸಿಕೊಂಡಿತು. ಅಲ್ಪ ಸಂಖ್ಯಾತರಾಗಿದ್ದ ಮುಸ್ಲಿಂರನೇಕರಲ್ಲಿ ಅಭದ್ರತೆಯ ಅನಿಸಿಕೆ ಕಾಡತೊಡಗಿ, ಸಾವಕಾಶವಾಗಿ ಅವರೆಲ್ಲ ರಜಾಕಾರರಾದರು; ಇಲ್ಲವೆ, ರಜಾಕಾರರ ಬೆಂಬಲಕ್ಕೆ ನಿಲ್ಲತೊಡಗಿದರು. ನಿಜಾಮರ ನೇರ ಸಹಾಯದೊಂದಿಗೆ ಕೊಳ್ಳಿ ದೆವ್ವದಂತೆ ಕುಣಿಯಲಾರಂಭಿಸಿದ ರಜಾಕಾರರ ವಿರುದ್ಧ ಬಹುಸಂಖ್ಯಾತ ಮುಸ್ಲಿಂಯೇತರರೂ ಒಗ್ಗೂಡಿದರು. ಪರಿಣಾಮವಾಗಿ, ಸಂಸ್ಥಾನದ ಜನತೆ ಕೋಮು ನೆಲೆಯ ಮೇಲೆ ಇಭ್ಭಾಗವಾಯಿತು. ದಿನಬೆಳಗಾದರೆ ರಜಾಕಾರರ ಅತ್ಯಾಚಾರದ, ಸುದ್ದಿ, ಕೊಲೆ, ಸುಲಿಗೆ ಪ್ರಕಾರಣಗಳು ಹೆಚ್ಚಾಗಿ ತೊಡಗಿದವು.

ಸಮಾಜದಲ್ಲಾಗುವ ಯಾವುದೇ ಧಾರ್ಮಿಕ ಅಥವಾ ರಾಜಕೀಯ ಪ್ರಳಯಾಂತರ ಸ್ಥಿತ್ಯಂತರ ಕಾಲದಲ್ಲಿ, ಸಾಮಾನ್ಯವಾಗಿ ಅದಕ್ಕೆ ಬಲಿಯಾಗುವವರು ಎಲ್ಲಾ ಜಾತಿ, ಮತ್ತು ಧರ್ಮದ ಬಡವರು ಮಾತ್ರ. ಈಗ ನಡೆದದ್ದು ಇದಕ್ಕೆ ಭಿನ್ನವಾಗಿಯೇನೂ ಇರಲಿಲ್ಲ. ರಜಾಕಾರರ ಕೈ ಮೇಲಾಗಿದ್ದಾಗ ಅವರು ಮುಸ್ಲಿಂ ಯೇತರ ಬಡವರ ಮೇಲೆ ಹಲ್ಲೆ ಮಾಡಿದರೆ, ಅದಕ್ಕೆ ಪ್ರತಿಯಾಗಿ, ಮುಸ್ಲಿಂಯೇತರರು ಮಾಡಿದ ದಾಳಿಯಲ್ಲಿ ಅಮಾಯಕ ಬಡ ಮುಸ್ಲೀಮರು ಹತ್ಯೇಗೀಡಾಗುತ್ತಿದ್ದರು. ಇದರಿಂದ ನಿಜಾಮರಿಗಾಗಲಿ, ನಿಜಾಮರ ಸಾಮಂತರಾಗಿದ್ದ ಜಹಗೀರದಾರ್, ಜಮೀನದಾರ, ದೇಶಪಾಂಡೆ, ದೇಶಮುಖರಿಗೆ ಯಾವುದೇ ಹಾನಿಯಾಗುತ್ತಿರಲಿಲ್ಲ. 'ನಾವು ನಿಜಾಮರನ್ನು, ರಕ್ಷಿಸಿದರೆ ನಿಜಾಮರು ನಮ್ಮನ್ನು ಉಳಿಸಿ ಬೆಳೆಸುತ್ತಾರೆ' ಎಂಬ ವಾಸ್ತವದ ಮಹಾದಾಶೆಯಿಂದ ಅವರು ನಿಜಾಮರ ಮತ್ತು ಅವರ ರಕ್ಷಣಾ ದಳವಾಗಿದ್ದ ರಜಾಕಾರರ ಬೆಂಬಲಕ್ಕೆ ನಿಂತರೆ ವಿನ: ಬಡ-ಬಗ್ಗರ ಕಷ್ಟ ಕಾರ್ಪಣ್ಯಗಳಿಗೆ ಸ್ಪಂದಿಸಲಿಲ್ಲ, ಗಾಂಧೀಜಿಯ ಕರೆಯ ಮೇರೆಗೋ ಅಥವಾ ಸ್ವಯಂ ಸ್ಫೂರ್ತಿಯಿಂದಲೋ ಆಗೊಮ್ಮೆ ಈಗೊಮ್ಮೆ ನಿಜಾಮರ ತಿಕ್ಕಲುತನದ ವಿರುದ್ಧ, ರಜಾಕಾರರ ಕ್ರೂರ ಚಟುವಟಿಕೆಯ ವಿರುದ್ಧ ಧ್ವನಿಯಾತ್ತುತ್ತಿದ್ದ ಕಾಂಗ್ರೆಸ್ಸಿಗರು ಚರಿತ್ರೆಯ ಆ ಘಟ್ಟದಲ್ಲಿ ಸಂಸ್ಥಾನದ ರಾಜಕೀಯ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಕಾಣಿಸಿಕೊಂಡಿದ್ದ ದ್ವಂದ್ವ - ವೈರುಧ್ಯಗಳನ್ನು ವೈಜ್ಞಾನಿಕವಾಗಿ ಗುರುತಿಸುವಲ್ಲಿ ವಿಫಲರಾಗಿದ್ದರು.

ಇದರ ಫಲಶೃತಿಯಾಗಿ, ಸ್ವಾತಂತ್ರ್ಯೋತ್ತರ ಕಲಬುರ್ಗಿಯ ರಾಜಕಾರಣದಲ್ಲಿ ಕಾಂ. ಗಂಗಾಧರ ನಮೋಶಿ ಅಪಾರ ಜನಮೆಚ್ಚುಗೆ ಗಳಿಸಿದ ರಾಜಕಾರಣಿಯಾಗಿ ಹೊರ ಹೊಮ್ಮಿದರು. ನಿಜಾಮನ ಶರಣಾಗತಿಯ ನಂತರ, ರಜಾಕಾರರ ವಿರುದ್ಧ ಪ್ರತಿಕಾರ ವೆಂಬಂತೆ

ಭುಗಿಲೆದಿದ್ದ ಮುಸ್ಲಿಂ ವಿರೋಧಿ ಹಲ್ಲೆ-ದೊಂಬಿಗಳಲ್ಲಿ ಸಹಸ್ರಾರು ಮುಸ್ಲೀಂ ಬಾಂಧವರು ಬಲಿಯಾಗುತ್ತಿದ್ದಾಗ ಕಾಂ. ನಮೋಶಿಯವರು ಅವರ ರಕ್ಷಣೆಗೆ ಟೊಂಕಕಟ್ಟಿ ನಿಂತರು.

ಸ್ವಾತಂತ್ರ್ಯದ ನಂತರ ಕಲಬುರ್ಗಿಯ ಟೌನ್ ಮುನ್ಸಿಪಾಲಿಟಿಯ ಚುನಾವಣೆಯಲ್ಲಿ ಕಾಂ. ನಮೋಶಿಯವರ ಕಮ್ಯುನಿಸ್ಟ್ ಪಕ್ಷ ಅಪೂರ್ವ ಯಶಸ್ಸು ಸಾಧಿಸಿತು. ಕಾಂಗ್ರೇಸ್ ಮತ್ತು ಇತರ ಪಕ್ಷಗಳ ರಾಜಕಾರಣ ಅಧಿಕಾರದ ಹೋರಾಟವಾಗಿದ್ದರೆ, ಕಾಂ.ಗಂಗಾಧರ ನಮೋಶಿಯವರು ಜನಪರ ಕ್ರಾಂತಿಕಾರಿಯ ರಾಜಕಾರಣದ್ದಾಗಿತ್ತು ಚುನಾವಣೆ ಅವರಿಗೆ ಅಧಿಕಾರಗಿಟ್ಟಿಸುವ ಸಾಧನವಾಗಿರಲಿಲ್ಲ. ಬದಲಾಗಿ, ಜನತೆಯನ್ನು ಕ್ರಾಂತಿಯ ಪಥದಲ್ಲಿ ಮುನ್ನಡೆಸುವ ಅಸ್ತ್ರವಾಗಿತ್ತು. ಹಾಗೆಂದೇ, ಅವರು ಎಂದೂ ಚುನಾವಣೆಯ ಬಗ್ಗೆ ತಲೆಕೆಡಿಸಿಕೊಳ್ಳುತ್ತಿರಲಿಲ್ಲ. ಚುನಾವಣೆ ಬರಲಿ ಬಿಡಲಿ, ಸದಾ ಜನತೆಯ ಮಧ್ಯ ಓಡಾಡುತ್ತಾ, ಅವರ ಸಮಸ್ಯೆಗಳಿಗೆ ಸ್ಪಂದಿಸತ್ತಾ ಜನತೆಯ ಬದುಕಿಗೂ ತಮ್ಮ ಪಕ್ಷದ ನಿಲುವಿಗೂ ನಿಕಟ ಸಂಬಂಧ ಕುದುರಿಸಲು ಸೆಣಸುತ್ತಿದ್ದರು. ಕಲಬುರ್ಗಿ ಕಮ್ಯುನಿಸ್ಟ್‌ದಲ್ಲಿ ಕಾಂ. ಶ್ರೀನಿವಾಸ ಗುಡಿ, ಕಾಂ. ಗಂಗಾಧರ ನಮೋಶಿ ಹಾಗೂ ಕಾಂ. ಹಸನಖಾನ್ ಸಾಹೇಬ - ಈ ಮೂವರು ಮಾರ್ಕ್ಸ್, ಏಂಗಲ್ಸ್, ಲೆನಿನ್ ನಂತಿದ್ದರು. ಆಳವಾದ ಅಧ್ಯಯನ ಗಾಢವಾದ ಚಿಂತನೆ ಹಾಗೂ ಸೈದ್ಧಾಂತಿಕ ತಿಳುವಳಿಕೆಯನ್ನು ಹೆಚ್ಚಿಸುವ ಕೆಲಸ ಕಾಂ. ಹಸನ್‌ಖಾನ್ ಅವರದ್ದು; ಕಾಂ. ಶ್ರೀನಿವಾಸ ಗುಡಿಯವರು ಪಕ್ಷದ ಕಾರ್ಯ ತಂತ್ರಗಳನ್ನು ರೂಪಿಸುವ ಕೆಲಸ ನೋಡಿಕೊಳ್ಳುತ್ತಿದ್ದರು. ಕಾಂ. ಗಂಗಾಧರ ನಮೋಶಿಯವರು ಫೀಲ್ಡ್ ಮಾರ್ಷಲ್‌ನಂತೆ ತಮ್ಮ ಪಕ್ಷದ ಧ್ಯೇಯ ಧೋರಣೆಗಳನ್ನು ಜನತೆಯ ಮಧ್ಯ ಜಾರಿಗೊಳಿಸುತ್ತಿದ್ದರು.

ಕಲಬುರ್ಗಿ ವಿಭಾಗ ಕೃಷಿ ಪ್ರಧಾನವಾದದ್ದು, 50ರ ದಶಕದಲ್ಲಿ ಶಹಾಬಾದಿನ ಎ.ಸಿ.ಸಿ. ಸಿಮೆಂಟ್ ಫ್ಯಾಕ್ಟರಿ ಹಾಗೂ ಕಲಬುರ್ಗಿಯ ಎಮ್.ಎಸ್.ಕೆ. ಮಿಲ್ಲು ಬಿಟ್ಟರೆ ಜಿಲ್ಲೆಯಲ್ಲಿ ಹೇಳಿಕೊಳ್ಳುವಂತಹ ಇತರ ಯಾವುದೇ ಕೈಗಾರಿಕೋದ್ಯಮಗಳಿರಲಿಲ್ಲ. ಹೀಗಾಗಿ, ಕಮ್ಯುನಿಸ್ಟ್ ಪಾರ್ಟಿಯ ಟ್ರೇಡ್ ಯುನಿಯನ್ ಚಟುವಟಿಕೆ ಸಹಜವಾಗಿಯೇ ಎಂ.ಎಸ್.ಕೆ. ಮಿಲ್ ಕೇಂದ್ರಿತವಾಗಿತ್ತು. ಸುಮಾರು 4-5 ಸಾವಿರ ಕಾರ್ಮಿಕರು ಕೆಲಸ ಮಾಡುತ್ತಿದ್ದ ಎಂ.ಎಸ್.ಕೆ. ಮಿಲ್ಲಿನ ಕಾರ್ಮಿಕ ವರ್ಗದಲ್ಲಿ ಹೆಚ್ಚಿನವರು ದಲಿತ ಮತ್ತು ಮುಸ್ಲಮಾನರೇ ಆಗಿದ್ದರು. ಅವರಲ್ಲಿ ಪರಂಪರೆಯಿಂದ ಬಂದ ಅನಕ್ಷರತೆ ಅಜ್ಞಾನಗಳು ಮನೆಮಾಡಿಕೊಂಡಿದ್ದವು. ಸಾಮಾಜಿಕವಾಗಿ, ಕೀಳೈಸಲ್ಪಡುತ್ತಿದ್ದ ಈ ಕಾರ್ಮಿಕರು ತಮ್ಮ ಒಡಕಿನಿಂದಾಗಿ, ಸಾಂಘಿಕ ಶಕ್ತಿಯ ಕೊರತೆಯಿಂದಾಗಿ ಮಿಲ್ಲಿನಲ್ಲೂ ಕರಕಷ್ಟದ ವೃತ್ತಿ ನಡೆಸುತ್ತಿದ್ದರು. ವಾರ್ಷಿಕ ವೇತನದ ಬಡ್ತಿ, ಬೋನಸ್ಸು ಇತ್ಯಾದಿ; ಆರ್ಥಿಕ ಸೌಲಭ್ಯಗಳ ಬಗ್ಗೆ ಅವರಲ್ಲಿ ಅರಿವೇ ಇರಲಿಲ್ಲ. ಮಿಲ್ಲಿನಲ್ಲಿ ಕೆಲಸ ದೊರೆತಿದ್ದೇ ತಮ್ಮ ಪೂರ್ವ ಜನ್ಮದ ಪುಣ್ಯವೆಂದು ಭಾವಿಸಿ ಮೈಮುರಿದು ದುಡಿಯುತ್ತಿದ್ದರು. ತಮ್ಮ ಉಡಿಯಲ್ಲಿ ಬಿದ್ದುದ್ದನ್ನು ಉಂಡು ಜೀವನ ಸಾಗಿಸುತ್ತಿದ್ದರು.

ಇಂತಹ 'ಅಭಾವ ಸಂತೃಪ್ತಿ' ಯ ಬದುಕು ನಡೆಸುತ್ತಿದ್ದ ಕಾರ್ಮಿಕರಲ್ಲಿ ಆತ್ಮ ಪ್ರತ್ಯಯ ಅಂಕುರಿಸುವಂತೆ ಮಾಡುವ, ತಮ್ಮ ಹಕ್ಕಿಗಾಗಿ ಹೋರಾಟದ ಛಲ ಹುಟ್ಟಿಸುವ, ಸಂಘಟನಾತ್ಮಕ ಶಕ್ತಿಯಲ್ಲಿ ವಿಶ್ವಾಸ ಮೂಡಿಸುವ ಹೊಣೆಗಾರಿಕೆ ಕಾಂ. ನಮೋಶಿಯವರ ಹೆಗಲಿಗೆ ಬಿತ್ತು. ರಾಷ್ಟ್ರ ಮತ್ತು ರಾಜ್ಯದ ಕಮ್ಯುನಿಷ್ಟ ಪಕ್ಷದ ನಾಯಕರ ನೇತೃತ್ವದಲ್ಲಿ ಕಾಂ. ನಮೋಶಿಯವರು ಕಾರ್ಮಿಕ ವರ್ಗದ ಈ ಜವಾಬ್ದಾರಿಯನ್ನು ಯಶಸ್ವಿಯಾಗಿಯೇ ನಿರ್ವಹಿಸಿದರು. ಈ ಸಂದರ್ಭದಲ್ಲಿ ಎದುರಾಗುತ್ತಿದ್ದ ಯಾವ ಸಮಸ್ಯೆಗಳಿಗೂ ಅವರು ಬಗ್ಗಲಿಲ್ಲ. ಅನಾಧಿಕಾಲದಿಂದಲೂ ಭಾರತೀಯರ ಮನಸ್ಸು ಹಿಡಿದುಕೊಂಡಿರುವ ಜಾತೀಯತೆ ಮಿಲ್ಲಿನ ಕಾರ್ಮಿಕರಲ್ಲೂ ಮನೆ ಮಾಡಿ ಕೊಂಡಿದ್ದು, ಕಾರ್ಮಿಕ ವರ್ಗದ ಸಂಘಟನೆಯ ಸಂದರ್ಭ ಕಾಂ. ನಮೋಶಿಯವರಿಗೆ ಒಂದು ಸವಾಲಾಗಿ ಪರಿಣಮಿಸಿತು. ದುಡಿಮೆಯ ಸಂದರ್ಭದಲ್ಲಿ ಎಲ್ಲರೂ ಸಮಾನಾಗಿ ತೊಡಗಿಕೊಂಡರೂ ಮಿಲ್ಲಿನ 'ಪಾಳೀ' ಮುಗಿಸಿ ಹೊರಗೆ ಬಂದೊಡನೆಯೇ ಕಾರ್ಮಿಕರು ವಿಭಿನ್ನ ಜಾತಿಯ ಗುಂಪುಗಳಾಗಿ ಚದುರುತ್ತಿದ್ದರು.

ಈ ಸಮಸ್ಯೆಗೆ ಕಳಸವಿಟ್ಟಂತೆ ಹೆಚ್ಚಿನ ಕಾರ್ಮಿಕರು ಅನಕ್ಷರಸ್ಥರಾಗಿದ್ದರು. ಜಾತೀಯತೆ, ಬಡತನ, ಅನಕ್ಷರತೆ, ಅಸ್ತಿತ್ವದ ಆಗುಹೋಗುಗಳ ಬಗ್ಗೆ ಇದ್ದ ಅಮಿತ ಮೌಢ್ಯ ಇತ್ಯಾದಿಗಳಲ್ಲಿ ನಖ - ಶಿಖಾಂತವಾಗಿ ಮುಳುಗಿ ಹೋಗಿದ್ದ ಕಾರ್ಮಿಕರನ್ನು ಸಂಘಟಿಸಿ, ಅವರ ಏಳಿಗೆಗೆ ಶ್ರಮಿಸುವದು; ತೀರ ಕಷ್ಟಸಾಧ್ಯವಾದ ಕೆಲಸವಾಗಿತ್ತು. ಕಾಂ. ಗಂಗಾಧರ ನಮೋಶಿ ವ್ಯಕ್ತಿತ್ವದಲ್ಲಿ ಮೇಳೈಸಿದ್ದರು. ಹಿಡಿದ ಕೆಲಸ ಬಿಡದ ಛಲ, ಧೈರ್ಯ ಧೀಮಂತಿಕೆಗಳೆಲ್ಲವೂ ಈ ಸಂದರ್ಭದಲ್ಲಿ ಅವರ ಸಹಾಯಕ್ಕೆ ಬಂದುವು. ಕ್ರಮೇಣ ಕಾರ್ಮಿಕರು. ಆತ್ಮವಿಶ್ವಾಸ ಪಡೆದುಕೊಳ್ಳತೊಡಗಿದರು ಸಂಘಟನಾತ್ಮಕ ಶಕ್ತಿಯಲ್ಲಿ ಒಂದು ರೀತಿಯ ಮೊಂಡು ಧೈರ್ಯ ಮೊಳೆಯತೊಡಗಿತು. ಕಾಂ. ನಮೋಶಿಯವರ ಧುರೀಣತ್ವದಲ್ಲಿ ವಿಶ್ವಾಸ ಹುಟ್ಟತೊಡಗಿತು. ಇಂತಹ ಸಂದರ್ಭಗಳನ್ನು ಚಾಕಚಕ್ಯತೆಯಿಂದ ಬಳಸುವ ಪ್ರಾವೀಣ್ಯ ಕಾಂ. ನಮೋಶಿಯವರಲ್ಲಿ ಸಾಕಷ್ಟಿತ್ತು. ಆರಂಭದಲ್ಲಿಯೇ ಕಾರ್ಮಿಕರಿಗಾಗುತ್ತಿದ್ದ ಅನ್ಯಾಯವನ್ನು ಪ್ರತಿಭಟಿಸಿ ವಾರಗಟ್ಟಲೇ ಆಮರಣಾಂತ ಉಪವಾಸ ಸತ್ಯಾಗ್ರಹ ಮಾಡಿ ಯಶಸ್ವಿಯಾದುದ್ದೆ ತಡ ಕಾಂ. ನಮೋಶಿಯವರು ಇಡೀ ಕಲಬುರ್ಗಿ ವಿಭಾಗದಲ್ಲಿ ಚಿರಪರಿಚಿತ ವ್ಯಕ್ತಿಯಾಗಿ ಪರಿಣಮಿಸಿದರು. ಕಮ್ಯುನಿಸ್ಟ್ ಪಕ್ಷ ಕಲಬುರ್ಗಿಯ ಜನರ ಹೃದಯಕ್ಕೆ ಹತ್ತಿರವಾಯಿತು. ಅದರ ನೇತಾರರಾಗಿದ್ದ ಕಾಂ. ನಮೋಶಿ ಜನತೆಯ ವಿಶಿಷ್ಟ ಮೆಚ್ಚುಗೆಗೆ ಪಾತ್ರರಾದರು.

ಕಾಂ. ನಮೋಶಿಯವರು ಕೈಗೆತ್ತಿಕೊಂಡ ಎಲ್ಲಾ ಹೋರಾಟಗಳು ಒಂದಿಲ್ಲೊಂದು ರೀತಿಯ ಯಶಸ್ಸು ಪಡೆಯುತ್ತಲೇ ಹೋದವು. ಅದರಿಂದಾಗಿ ಅವರ ಕಾರ್ಯಭಾರವು ಹೆಚ್ಚುತ್ತಾ ಹೋಯಿತು. ಎಂ.ಎಸ್.ಕೆ. ಮಿಲ್ಲಿನ ಕಾರ್ಮಿಕರ ಸಮಸ್ಯೆಗಳ ಜೊತೆಗೆ ನಗರದ ಸಾರ್ವಜನಿಕರ ಸಮಸ್ಯೆಗಳನ್ನು ಅವರು ಸ್ಪಂಧಿಸಲಾರಂಭಿಸಿದರು. ಇಂತು ಪಕ್ಷ, ಕಾರ್ಮಿಕ ವರ್ಗದ ಸಂಘಟನೆ, ನಗರದ ಸಾರ್ವಜನಿಕರ ಸಮಸ್ಯೆಗಳು ಇತ್ಯಾದಿಗಳ ಮಧ್ಯೆಯೇ ಹಗಲಿರುಳು

ಚಿಂತನೆ ಮಾಡುತ್ತಿದ್ದ ಕಾಂ. ನಮೋಶಿಯವರು ಸಹಜವಾಗಿಯೇ ತಮ್ಮ ಕುಟುಂಬದ ಆಗು ಹೋಗುಗಳ ಬಗ್ಗೆ ಒಂದು ನಿರ್ಮಮ ನಿಲುವ ಬೆಳೆಸಿಕೊಂಡರು.

ಪಕ್ಷದ ನಿರಂತರ ಚಟುವಟಿಕೆಗಳು ಅವರನ್ನು ಸಂಸಾರಿಕ ಜವಾಬ್ದಾರಿಯಿಂದ ಇನ್ನೂದೂರ ಮಾಡಿದವು.

ಕಾಂ. ನಮೋಶಿಯವರದು ತುಂಬು ಸಂತೃಪ್ತಿಯ ಸಾಂಸಾರಿಕ ಬದುಕು. ಅವರ ಮದುವೆಯಾದಾಗ ಅವರ ಮಡದಿಗೆ ಕೇವಲ 14 ವರ್ಷ ವಯಸ್ಸು. ಪತಿಯ ಕ್ರಾಂತಿಕಾರಿ ಬದುಕಿನೊಂದಿಗೆ ಅನತಿ ಕಾಲದಲ್ಲಿಯೇ ಹೊಂದಿಕೊಂಡ ಶ್ರೀಮತಿ ಭೂದೇವಿ ನಮೋಶಿಯವರು ಕಾಂ. ನಮೋಶಿಯವರ ರಾಜಕೀಯ ಚಟುವಟಿಕೆಗಳಿಗೆ ಯಾವುದೇ ತೊಂದರೆ ಯಾಗದಂತೆ ಕುಟುಂಬದ ಜವಾಬ್ದಾರಿಯನ್ನು ಬಹುನಿಪುಣತೆಯಿಂದ ನಿರ್ವಹಿಸುತ್ತಿದ್ದರು. ಕಾಂ. ಗಂಗಾಧರ ನಮೋಶಿಯವರು ಶ್ರೀ ಅಣ್ಣಪ್ಪ ನಮೋಶಿಯವರ ಏಕೈಕ ಪುತ್ರರಾಗಿದ್ದರು.

ಕಾಂ. ನಮೋಶಿಯವರು ಕಾರ್ಮಿಕ ವರ್ಗದ ಸಂಘಟನೆಯಲ್ಲಿ ತೊಡಗಿದ್ದರಿಂದ ಹೈಸ್ಕೂಲಿನಾಚೆಗೆ ತಮ್ಮ ಶಿಕ್ಷಣ ಮುಂದುವರಿಸಲು ಆಗಲಿಲ್ಲ. ಆದರೂ ತಮ್ಮೆಲ್ಲ ಸಾರ್ವಜನಿಕ ಜೀವನದ ಸಂಕಷ್ಟಗಳ ನಡುವೆಯೂ ತಮ್ಮ ಮಕ್ಕಳಾದ ಅನಿಲ, ಶಶೀಲ, ನಳನಿ, ಮೂವರಿಗೂ ಉತ್ತಮ ಶಿಕ್ಷಣ ದೊರೆಯುವಂತೆ ನೋಡಿಕೊಂಡರು. ಡಾ.ಅನಿಲ ಎಂ.ಡಿ. ಯವರೆಗೆ ಓದಿ ಸ್ಥಳೀಯ ಮಹಾದೇವಪ್ಪ ರಾಂಪುರೆ ವೈದ್ಯಕೀಯ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಶ್ರೀ ಶಶೀಲ ಇಂಜನಿಯರಿಂಗ್ ಪದವಿ ಪಡೆದು ಮಹಾನಗರ ಪಾಲಿಕೆಯ ಸದಸ್ಯರಾಗಿ, ಉಪಮೇಯರಾಗಿ, ಸಾರ್ವಜನಿಕ ಕ್ಷೇತ್ರಕ್ಕೆ ಕಾಲಿರಿಸಿದವರು. ಈಗ ಶಿಕ್ಷಕರ ಮತಕ್ಷೇತ್ರದಿಂದ ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಮಗಳು ಶ್ರೀಮತಿ ನಳಿನಿ ವೈದ್ಯಕೀಯ ಪದವೀಧರೆಯಾಗಿ, ಕಲಬುರ್ಗಿಯಲ್ಲಿ ವೈದ್ಯಕೀಯ ವೃತ್ತಿಯಲ್ಲಿ ನಿರತರಾಗಿದ್ದಾರೆ.

ಕಾಂ. ಗಂಗಾಧರ ನಮೋಶಿಯವರು ಸಾರ್ವಜನಿಕ ವೇದಿಕೆಯಿಂದ ಗಂಟೆಗಟ್ಟಲೇ ನಿರರ್ಗಳವಾಗಿ ಮಾತಾನ್ನಾಡುತ್ತಿದ್ದರೂ ಖಾಸಗಿಯಾಗಿ ಅವರು ವಾಚಾಳಿಯಾಗಿರಲಿಲ್ಲ. ತುಂಬಾ ಮಿತಭಾಷಿ. ಆದರೆ ಅವರ ಮಾತು ಅಷ್ಟೇ ಹರಿತವಾಗಿರುತ್ತಿತ್ತು. ನೋಡಿದೊಡನೆಯೇ ತುಸು ಮುಂಗೋಪಿಯಾಗಿ ಕಾಣುತ್ತಿದ್ದ ಅವರ ಗಂಭೀರ ವದನ ಸದಾ ಚಿಂತನ ಶೀಲತೆಗೆ ಹೆಸರಾಗಿತ್ತು. ಗೌರವರ್ಣದ ದುಂಡು ಮುಖದಲ್ಲಿ ಎದ್ದು ಕಾಣುತ್ತಿದ್ದ ದೊಡ್ಡ ದೊಡ್ಡ ಕಣ್ಣುಗಳು ತುಂಬ ತೀಕ್ಷ್ಣವಾದ ಒಳನೋಟಗಳಿಗೆ ಸಂಕೇತವಾಗಿದ್ದವು. ಅಷ್ಟೇನು ಎತ್ತರವಲ್ಲದ ಅವರ ನಿಲುವು ಚಿತ್ತಾಕರ್ಷಕವಾಗಿತ್ತು. ಎಷ್ಟೇ ಎಡೆಬಿಡದ ಚಟುವಟಿಕೆಯಲ್ಲಿ ತೊಡಗಿದ್ದರೂ ಕಾಂ. ನಮೋಶಿಯವರು ತೀರ ಅಚ್ಚು ಕಟ್ಟು ಮತ್ತು ಶಿಸ್ತಿನ ನಡುವಳಿಕೆಗಳಿಗೆ ಇನ್ನೊಂದು

ಹೆಸರಾಗಿದ್ದರು. ತಲೆ ಬಾಚಿಕೊಳ್ಳುವದರಿಂದ ಹಿಡಿದು ತೊಡುತ್ತಿದ್ದ ಬಟ್ಟೆಯವರೆಗೂ ಅವರದ್ದು ತುಂಬಾ ಕಟ್ಟುನಿಟ್ಟು, ಹೀಗಾಗಿ, ಅಶಿಸ್ತು, ಅಸಡ್ಡಾಳತನ, ಅವರಿಗೆ ಸೇರುತ್ತಿರಲಿಲ್ಲ. ವ್ಯಂಗ್ಯ ವಿಡಂಬನೆಯಿಂದ ಕೂಡಿದ ಅವರ ಚುಚ್ಚು ಮಾತಿನಲ್ಲೂ ಒಮ್ಮೊಮ್ಮೆ ನವಿರಾದ ತಿಳಿ ಹಾಸ್ಯ ಹೊರ ಹೊಮ್ಮುತ್ತಿತ್ತು. ಯಾವುದೇ ತರಹದ ಶೋಷಣೆ ಕಂಡರೆ ಶೀಘ್ರವೇ ಉಗ್ರಗೊಂಡು ಕೆಂಡ ಮಂಡಲವಾಗುತ್ತಿದ್ದ ನಮೋಶಿಯವರು ದೀನ ದಲಿತರ ದಯನೀಯ ಪಾಡು ಕಂಡೊಡನೆಯೇ ಕರುಣೆಯಿಂದ ಕರಗಿ, ನೀರಾಗುತ್ತಿದ್ದರು. ಇಂತಹ ಪತಿಯ ಬಗ್ಗೆ ಶ್ರೀಮತಿ ಶ್ರೀಮತಿ ಭೂದೇವಿ ನಮೋಶಿಯವರಿಗೆ ಸಹಜವಾಗಿಯೇ ಭಯ ಮಿಶ್ರಿತ ಭಕ್ತಿಯಿತ್ತು. ಆದ್ದರಿಂದಲೇ ತಮ್ಮ ಯಾವುದೇ ಕಷ್ಟ ನಷ್ಟದ ಕೊರಗು ಪತಿಯ ಗಮನಕ್ಕೆ ಬರದಂತೇ ಸಾಕಷ್ಟು ಎಚ್ಚರವಹಿಸುತ್ತಿದ್ದರು. ಅಂತೆಯೇ ಕಾಂ. ನಮೋಶಿಯವರು ಕೂಡಾ ತಮ್ಮ ಸಾರ್ವಜನಿಕ ಜೀವನ ತೊಂದರೆಗಳ ಕುರಿತು ಶ್ರೀಮತಿ ಭೂದೇವಿಯವರ ಮುಂದೆ ಹೇಳಿ, ಅವರ ಸಂಕಷ್ಟದ ಭಾಗ ಹೆಚ್ಚಿಸುತ್ತಿರಲಿಲ್ಲ. ಅವರಿಬ್ಬರದ್ದೂ ಒಂದು ರೀತಿಯ ಮೌನ ನಿರ್ವಹಣೆಯ ಬದುಕು. ಹಾಗೆಂದೇ 60ರ ದಶಕದ ಆರಂಭದಲ್ಲಿ ಶಾಸಕರಾಗಿ ಚುನಾಯಿತರಾಗಿ ಕೆಲವೇ ದಿನಗಳಲ್ಲಿ ಕಾಂ. ನಮೋಶಿಯವರು ಜೈಲು ಸೇರುವ ಪ್ರಸಂಗ ಬಂದರೂ ಶ್ರೀಮತಿ ಭೂದೇವಿಯವರು ಎದೆಗುಂದದೆ ಸಂಸಾರದ ಭಾರವನ್ನು ಏಕಾಂಗಿಯಾಗಿ ಹೊತ್ತರು. ಹಾಗೆಯೇ, ಕಾಂ. ನಮೋಶಿಯವರು ಬಂಧನಕ್ಕೊಳಗಾದಾಗ ಧೈರ್ಯ ಧೀಮಂತಿಕೆಯಿಂದ ಜೈಲಿನೆಡೆಗೆ ಹೆಜ್ಜೆ ಹಾಕಿದ್ದರು. ರಾಜಕೀಯ ಕೈದಿಯಾಗಿ ಜೇಲಿನಲ್ಲಿದ್ದಾಗ ಒಂದೆರಡು ಸಲ ತಮ್ಮ ತಾಯಿ ಶ್ರೀಮತಿ ಬಸಮ್ಮಳಿಗೆ ಜೇಲಿಗೆ ಬಂದು ಭೆಟ್ಟಿಯಾಗುವ ಅವಕಾಶ ನೀಡಿದರೂ ತಮ್ಮ ಪತ್ನಿ ಭೂದೇವಿಯವರು ಮಾತ್ರ ತಮ್ಮನ್ನು ಕಾಣಲು ಜೇಲಿಗೆ ಬರದಂತೆ ಕಟ್ಟಪ್ಪಣೆ ಮಾಡಿದ್ದರು. ಜೇಲಿನಿಂದ ಹೊರಬಂದೊಡನೆಯೇ ಮತ್ತೆ ಅದೇ ನಿಬಿಡ ಚಟುವಟಿಕೆಗಳ ಬದುಕು. ಪಕ್ಷ, ಸಾಮೂಹಿಕ ಸಂಘಟನೆ ಹಾಗೂ ನಗರದ ಸಾರ್ವಜನಿಕ ಸಮಸ್ಯೆಗಳು - ಇವುಗಳ ನಡುವೆಯೇ ಸೂರ್ಯೋದಯ - ಸೂರ್ಯಾಸ್ತವಾಗುತ್ತಿತ್ತು. ಸಾರ್ವಜನಿಕ ಜೀವನದ ಮೇಲೆ ಪರಿಣಾಮ ಬೀರಬಹುದಾಗಿದ್ದ ಯಾವುದೇ ಸಮಸ್ಯೆಯಾಗಿರಲಿ, ಅದು ಮುನ್ಸಿಪಾಲಿಟಿಯ ಬೆಳಗಿನ ಅವ್ಯವಸ್ಥೆ. ನೀರು ಸರಬರಾಜು ಕೊಳಚಿ ನಿವಾಸಿಗಳ ಸಮಸ್ಯೆ, ಟಾಂಗೇವಾಲಾಗಳ ಸಮಸ್ಯೆ. ಈ ಯಾವುದೇ ಸಮಸ್ಯೆಯಿರಲಿ, ತಕ್ಷಣವೇ ಕಾಂ. ನಮೋಶಿಯವರು "ಸ್ಟ್ರೀಟ್ ಮೀಟಿಂಗ್" ಗಳು ಸುರುವಾಗುತ್ತಿದ್ದವು.

ಕಾಂ. ನಮೋಶಿಯವರು ಭಾಷಣವೆಂದರೆ, ಇಡೀ ನಗರ ಮೈಯೆಲ್ಲ ಕಿವಿಯಾಗಿ ಕೇಳುತ್ತಿತ್ತು. ಕಾಂ. ನಮೋಶಿಯವರ ಭಾಷಣ ಕೇಳುವದೇ ಒಂದು ರಸದೌತಣ. ಕನ್ನಡ, ಉರ್ದು, ಮರಾಠಿ ಮತ್ತು ಇಂಗ್ಲೀಷ್ - ನಾಲ್ಕೂ ಭಾಷೆಗಳ ಮೇಲೆ ಸಾಕಷ್ಟು ಪ್ರಭುತ್ವವಿದ್ದ ಕಾಂ. ನಮೋಶಿಯವರ ಭಾಷಣ ಕೇಳಲು ಜನ ಎಲ್ಲೆಲ್ಲೂ, ಮುಗಿಬೀಳುತ್ತಿದ್ದರು. ಬ್ರಹ್ಮಪುರದ ಮರಗೆಮ್ಮನ ಗುಡಿಯ ಮುಂದೆ, ರೋಜಾದ ರಂಗೀನ್ ಮಜ್ಜೀದ್ ಮುಂದೆ, ಅಥವಾ

ಬಜಾರಿನ ಟಾಂಗಾ ಸ್ಟ್ಯಾಂಡ್‌ನಲ್ಲಿ ಎಲ್ಲಿಯೇ ಕಾಂ. ನಮೋಶಿಯವರ ಭಾಷಣವಿರಲಿ ಸಾವಿರ ಸಂಖ್ಯೆಯಲ್ಲಿ ಜನ ಸೇರುತ್ತಿದ್ದರು. ತಮ್ಮ ಭಾಷಣಗಳಲ್ಲಿ ಯಾವಾಗಲೂ ಗತದ ಇತಿಹಾಸವನ್ನು ವೈಭವೀಕರಿಸುತ್ತಿದ್ದ ಆರ್ಯ ಸಮಾಜದ ಮುಖಂಡರ ಹಾಗೂ ಹಳಸಲು ವಿಷಯಗಳನ್ನು ಎತ್ತಿಕೊಂಡು ಸಪ್ಪೆಯಾಗಿ ಮಾತಾಡುತ್ತಿದ್ದ ಕಾಂಗ್ರೆಸ್ ಮುಖಂಡರ ಭಾಷಣಗಳಿಗೆ ಪ್ರತಿಯಾಗಿ, ತುಂಬಾ ಖಾರವಾಗಿ, ಕ್ರಾಂತಿಕಾರಿಯಾಗಿ ಮಾತಾಡುತ್ತಿದ್ದ, ನಮೋಶಿಯವರ ವಾಗ್ಝರಿಗೆ ಜನಸಾಮಾನ್ಯರು ಸಹಜವಾಗಿಯೇ ಮನಸೋಲುತ್ತಿದ್ದರು. ಅಂದಿನ ಕಾಲದಲ್ಲಿ ವ್ಯವಸ್ಥೆಯ ವಿರುದ್ಧ ಜಾತ್ಯಾತೀತವಾಗಿ ಮಾತನ್ನಾಡುವ ಧೈರ್ಯ - ಧೀಮಂತಿಕೆ ಕೇವಲ ನಮೋಶಿಯವರಿಗೆ ಮಾತ್ರ ಸಾಧಿಸಿತ್ತು - ಎಂಬುವದು ಆಗಿನ ಶ್ರೀಸಾಮಾನ್ಯರ ಅಂಬೋಣವಾಗಿತ್ತು. ತಮ್ಮ ವಿಚಾರ - ಪ್ರಚಾರ ಮತ್ತು ಪ್ರಸರಣಕ್ಕೆ ಕಾಂ. ನಮೋಶಿಯವರು ಮಾಧ್ಯಮಗಳನ್ನು ಹೆಚ್ಚಾಗಿ ಅವಲಂಬಿಸುತ್ತಿರಲಿಲ್ಲ. ಕಲಬುರ್ಗಿಯ ಓಣಿ ಓಣಿಗೆ ತೆರಳಿ ಸಾರ್ವಜನಿಕ ಸಭೆಗಳ ಮೂಲಕ ಜನತೆಯನ್ನು ನೇರವಾಗಿ ತಲುಪುವ ಕಲೆ ಕರಗತ ಮಾಡಿಕೊಂಡಿದ್ದರು, ಕಾಂ. ನಮೋಶಿಯವರು. ಇದಕ್ಕಾಗಿ ಅವರು ಬಳಸುತ್ತಿದ್ದ ಸಾಧನ ಸಾಮಗ್ರಿಗಳೆಂದರೆ, ಒಂದು ಸ್ಟೂಲು, ಒಂದು ಟೇಬಲ್ಲು, ಒಂದು ಪೆಟ್ರೋಮ್ಯಾಕ್ಸ್ ಮತ್ತು ಧ್ವನಿವರ್ಧಕ ವ್ಯವಸ್ಥೆ. ಸಾರ್ವಜನಿಕ ಸಭೆಯ ಕುರಿತು ನಗರದ ತುಂಬ ದಿನವಿಡಿ ಪ್ರಚಾರ ಮಾಡುವ ಕೆಲಸ ಕಾಂ. ಗುಲಾಂ ಇಬ್ರಾಹಿಂನದ್ದು ಸಂಜೆ ನಿಗದಿತ ವೇಳೆಗೆ ವೇಳೆಗೆ ಭಾಷಣ ಆರಂಭವಾಗುತ್ತಿತ್ತು. ಉತ್ಸುಕತೆಯಿಂದ ಬಂದು ಸೇರುತ್ತಿದ್ದ ಜನ ಭಾಷಣ ಕೇಳಿದೊಡನೆಯೇ ಉತ್ತೇಜನಗೊಂಡು ಕಾಂ. ನಮೋಶಿಯವರ ನೇತೃತ್ವದ ಹೋರಾಟದಲ್ಲಿ ಪಾಲುಗೊಳ್ಳಲು ಸಿದ್ಧರಾಗುತ್ತಿದ್ದರು. ಈ ಎಲ್ಲದರ ಪರಿಣಾಮವಾಗಿಯೇ, ಯಾವುದೇ ಕಾರಣಕ್ಕಾಗಿ ಕಾಂ. ನಮೋಶಿಯವರು ಕರೆ ಕೊಟ್ಟರೆ ಅರಗಳಿಗೆಯಲ್ಲಿಯೇ, ಸಾವಿರಾರು ಜನ ಅವರ ಸುತ್ತಾ ನೆರೆಯುತ್ತಿದ್ದರು. ಇಂತು ಕಾಂ. ನಮೋಶಿಯವರು ನಿಜವಾದ ಅರ್ಥದಲ್ಲಿ ಒಂದು ಕ್ರಾಂತಿಕಾರಿ ಪಕ್ಷದ ಸಾಮಾಹಿಕ ನೇತಾರರಾಗಿ ರೂಪಗೊಂಡರು. ಸ್ವಾತಂತ್ರ್ಯ ನಂತರ ಸಂಸದೀಯ ಪ್ರಜಾಸತ್ತೆಯ ಭಾರತದಲ್ಲೂ ಕಾಂ. ನಮೋಶಿಯವರು ನಾಲ್ಕಾರು ಸಲ ಬಂಧನಕ್ಕೊಳಗಾಗಿ, ಸೆರೆವಾಸ ಅನುಭವಿಸಿದರು. ಆದರೆ ಪ್ರತಿ ಸಲವೂ ಜೇಲಿನಿಂದ ಹೊರಬಂದಾಗ 'ಪೊರೆ ಕಳಚಿದ ಫಣಿ' ಯಂತೆ ಇಮ್ಮಡಿಸಿದ ಉತ್ಸಾಹ ವಿಶ್ವಾಸದಿಂದ ಕಾರ್ಯ ಪ್ರವೃತರಾಗುತ್ತಿದ್ದರು. 1964ರಲ್ಲಿ ಸೈದ್ಧಾಂತಿಕ ಕಾರಣಗಳಿಗಾಗಿ ಭಾರತೀಯ ಕಮ್ಯುನಿಸ್ಟ್ ಪಕ್ಷ ಇಬ್ಭಾಗವಾದಾಗ, ಅವರು ಡಾಂಗೆ ನೇತೃತ್ವದ 'ಪರಿಷ್ಕರಣವಾದಿ' ಸಿ.ಪಿ.ಐ. ಜೊತೆ ಹೋಗದೇ, ಕ್ರಾಂತಿಕಾರಿ ಮಾರ್ಗವನ್ನು ಅನುಸರಿಸಿದ ಸಿ.ಪಿ.ಐ. (ಎಂ) ಜೊತೆ ತಮ್ಮ ಬದ್ಧತೆಯನ್ನು ಘೋಷಿಸಿಕೊಂಡರು.

ಕಾಂ. ಇ.ಎಂ.ಎಸ್. ನಂಬೂದ್ರಿಪಾದ್ ಇವರ ನೆಚ್ಚಿನ ರಾಷ್ಟ್ರ ನಾಯಕರಾಗಿದ್ದರು. ಕಾಂ. ಬಿ.ಟಿ. ರಣದೀಪ, ಕಾಂ.ಪಿ. ರಾಮಮೂರ್ತಿ ಹಾಗೂ ಕಾಂ. ಸೂರ್ಯ ನಾರಾಯಣರಾವ್ ಇವರಿಗೆ ಟ್ರೇಡ್ ಯೂನಿಯನ್ ಮಾರ್ಗದರ್ಶಕರಾಗಿದ್ದರು. ಹಾಗೆಂದೆ ಇವರೆಲ್ಲ ತಮಗೆ ಎಷ್ಟೇ ಬಿಡುವಿಲ್ಲದ ಕಾರ್ಯಭಾರಗಳಿದ್ದರೂ ಕಾಂ. ನಮೋಶಿಯವರು ಕರೆದರೆ ಇಲ್ಲ ಎನ್ನಲಾಗುತ್ತಿರಲಿಲ್ಲ. ಕಾಮ್ಯುನಿಸ್ಟ್ ಪಕ್ಷ ಒಂದು 'ಸುಖೀ ಕುಟುಂಬ' ವಾಗಬಾರದು ಅದು ಸದಾ 'ಆಂತರಿಕ ಮತ್ತು ಬಾಹ್ಯ ವಾಗ್ವಾದ ಸಂಘರ್ಷದ ತಾಣ' ವಾಗಬೇಕು ಎಂಬುವದು ಕಾಂ. ಇ.ಎಂ.ಎಸ್.ರ ಕಿವಿಮಾತಾಗಿತ್ತು. ಕಾಂ. ನಮೋಶಿಯವರು ಇದನ್ನು ಚಾಚೂ ತಪ್ಪದೇ ಜಾರಿಗೊಳಿಸಲು ಪ್ರಯತ್ನಿಸಿದರು. ಅಂತರಾಷ್ಟ್ರೀಯ ಸಮಸ್ಯೆ ಇರಲಿ, ಸ್ಥಳೀಯ ಪ್ರಶ್ನೆಯೇ ಇರಲಿ, ಅಥವಾ ಪಕ್ಷದ ಸಂಘಟನಾತ್ಮಕ ವಿವಾದವೇ ಇರಲಿ. ಈ ಯಾವುದನ್ನೂ ಕುರಿತು ಪಕ್ಷದ ಕಚೇರಿಯಲ್ಲಿ ಕೂಲಂಕುಷವಾಗಿ ಚರ್ಚೆ ಜಿಜ್ಞಾಸೆ ನಡೆಸುತ್ತಿದ್ದರು, ಒಮ್ಮೆ ತೆಗೆದುಕೊಂಡ ಸಾಮೂಹಿಕ ತೀರ್ಮಾನವನ್ನು ಶತಾಯಗತಾಯ ಜಾರಿಗೊಳಿಸುತ್ತಿದ್ದರು.

ಪ್ರತಿಯೊಬ್ಬ ನೈಜ ಕಮ್ಯುನಿಸ್ಟ್‌ನಂತೆ ಕಾಂ. ಗಂಗಾಧರ ನಮೋಶಿಯವರಿಗೂ, ಅಪಾರವಾದ ಜ್ಞಾನದಾಹವಿತ್ತು. ಅವಿರತ ಚಟುವಟಿಕೆಯ ನಡುವೆಯೂ ಸೈದ್ಧಾಂತಿಕ ಅಧ್ಯಯನಕ್ಕೆ ಒಂದಿಷ್ಟು ಸಮಯ ಅನುಕೂಲಿಸಿಕೊಳ್ಳುತ್ತಿದ್ದರು. ಪುಸ್ತಕಗಳ ಬಗ್ಗೆ ಅವರದು ಅನುರಾಗ. ಎಲ್ಲಿಯೇ ಹೋಗಲಿ, ಯಾವಾಗಲೂ ಡಜನ್‌ಗಟ್ಟಲೆ ಪುಸ್ತಕಗಳನ್ನು ಖರೀದಿಸಿ ತರುತ್ತಿದ್ದರು. ಯಾವೊಂದು ಗ್ರಂಥವನ್ನು ಆಮೂಲಾಗ್ರವಾಗಿ ಓದಲು ಸಮಯಾವಕಾಶ ಕೂಡಿ ಬರದಿದ್ದರೆ, ಕೂಡಲೇ ಕಾಂ. ಹಸನ್‌ಖಾನ್ ಸಾಹೇಬರು ಅದನ್ನು ಓದಿ ತಿರುಳು ತಿಳಿಸುವಂತೆ ತಾಕೀತು ಮಾಡುತ್ತಿದ್ದರು. ಹೀಗಾಗಿ, ಪ್ರತಿಯೊಂದನ್ನು ಸಮೂಲವಾಗಿ ಓದುವ ಜವಾಬ್ದಾರಿ -ಕಾಂ. ಹಸನ್‌ಖಾನ್ ಸಾಹೇಬರ ಪಾಲಿನ ಪಾಳಿಯಾಗುತ್ತಿತ್ತು. ಬರುಬರುತ್ತಾ ನಗರದ ಅನೇಕ ಬುದ್ಧಿ ಜೀವಿಗಳು ಕಾಂ. ನಮೋಶಿಯವರ ಸಾನಿಧ್ಯ ಸಂಪರ್ಕಕ್ಕೆ ಬರತೊಡಗಿದರು. ಇವರೆಲ್ಲರಿಗೂ ಸಾಮ್ಯವಾದಿ ಸೈದ್ಧಾಂತಿಕ ಗ್ರಂಥಗಳನ್ನು ಸರಬರಾಜು ಮಾಡುವ ಇನ್ನೊಂದು ಕೆಲಸ ಕಾಂ. ನಮೋಶಿಯವರ ಕಾರ್ಯ ಚಟುವಟಿಕೆಗೆ ಸೇರಿಕೊಂಡಿತ್ತು. ಕಾಂ. ಗಂಗಾಧರ ನಮೋಶಿಯವರು ನೇರ ನಡೆ ನುಡಿ, ನಿರ್ದಾಕ್ಷಿಣ್ಯದ ನಿಲುವು, ಕ್ರಾಂತ ದೃಷ್ಟಿಗೆ ಹೆಸರಾಗಿದ್ದಂತೆಯೇ ರಾಜಕೀಯ ಚಾಣಾಕ್ಷತನ ಮುತ್ಸದ್ಧಿತನ ಹಾಗೂ ಪ್ರಸಂಗಾವಧಾನಕ್ಕೂ ಹೆಸರು ಮಾಡಿದ್ದರು.

75ರ ತುರ್ತುಪರಿಸ್ಥಿತಿಯ ಸಂದರ್ಭ. ಅರಸು ನೇತೃತ್ವದ ಸರ್ಕಾರದ ಶ್ರೀಮತಿ ಇಂದಿರಾ ಗಾಂಧಿಯವರ 'ಫರಮಾನ್'ಗೆ ಅನುಗುಣವಾಗಿ ಹೆಚ್ಚು ಕಡಿಮೆ ಎಲ್ಲ ರಾಜಕೀಯ ವಿರೋಧಿಗಳನ್ನೂ ಸೆರೆಮನೆಗೆ ಅಟ್ಟಿತ್ತು. ನಗರದಲ್ಲಿ ಯಾರೂ ಚಕಾರವೆತ್ತದಂತೆ,

ಪ್ರತಿಭಟನೆಯ ಸಭೆ ಸಮಾರಂಭಗಳನ್ನು ನಡೆಸದಂತೆ, ಸಾರ್ವಜನಿಕರ ಬಾಯಿ ಮುಚ್ಚಿಸಲು 144ನೇ ಕಲಂ ಜಾರಿಗೊಳಿಸಿದ್ದರು. ಕಾಂ. ನಮೋಶಿಯವರು ಕಾನೂನು ಉಲ್ಲಂಘಿಸಿ ತುರ್ತು ಪರಿಸ್ಥಿತಿಯನ್ನು ಪ್ರತಿಭಟಿಸುವದಾಗಿ ಹೇಳಿಕೆಯಿತ್ತರು. ಕೂಡಲೇ ನಮೋಶಿಯವರನ್ನು ಬಂಧಿಸಲು ಕಾರ್ಯಪ್ರವೃತ್ತರಾದ ಪೊಲೀಸರು ನಗರದ ಮೂಲೆ ಮೂಲೆಯಲ್ಲಿ ನಮೋಶಿಯವರಿಗಾಗಿ ಹುಡುಕಿದರು. ಇಡೀ ರಾತ್ರಿ ನೂರು ಜನ ಪೊಲೀಸರು ಕಣ್ಣಲ್ಲಿ ಕಣ್ಣಿಟ್ಟು ನಗರದ ಅನೇಕ ಸ್ಥಳಗಳಲ್ಲಿ, ತಡಕಾಡಿದರೂ ನಮೋಶಿಯವರ ಸುಳಿವು ಸಿಗಲಿಲ್ಲ. ಮರುದಿನ ಮುಂಜಾನೆ 10ರ ಸುಮಾರಿಗೆ ನಗರದ ಪಟೇಲ ಚೌಕದಿಂದ ಕನಿಷ್ಟ ನೂರು ಜನರ ಮೆರವಣಿಗೆ ನಡೆಸುವದಾಗಿ ಘೋಷಿಸಿದ ನಮೋಶಿಯವರಿಗಾಗಿ ನೂರಾರು ಜನ ಪೊಲೀಸರು ಪಟೇಲ ಚೌಕದ ಸುತ್ತಾ ಘೇರಾಯಿಸಿ, ಕಾತರದಿಂದ ಕಾಯತೊಡಗಿದರು. ಮುಂ. 9.55ದಾಯಿತು. ನಮೋಶಿಯವರು ಬರುವ ಯಾವ ಲಕ್ಷಣಗಳೂ ಕಾಣಬರಲಿಲ್ಲ. ಇನ್ನು ಮೆರವಣಿಗೆಯ ಮಾತಂತೂ ದೂರವೇ ಉಳಿಯಿತು. ಪೊಲೀಸರು ನಿರಮ್ಮಳರಾಗಿ ನಿಟ್ಟುಸಿರು ಬಿಟ್ಟರು. ಆದರೆ ಅರೆಕ್ಷಣದಲ್ಲಿಯೇ ಅವರಿಗೆ, ಒಂದು ಆಘಾತ ಕಾಯ್ದಿತ್ತು. ನಿಖರವಾಗಿ ಮುಜಾನೆ 10 ಗಂಟೆಗೆ ಅದಾವುದೋ ಒಂದು ಮೂಲೆಯಿಂದ ಪಟೇಲ ಚೌಕದ ಮಧ್ಯಕ್ಕೆ ಭರ್ರನೆ ಒಂದು ಆಟೋ ಬಂದು ನಿಂತಿತು; ಆದರೊಳಗಿಂದ ಬುರುಖಾ ಧರಿಸಿದ್ದ ಒಬ್ಬ ವ್ಯಕ್ತಿ ಚಂಗನೆ ಕೆಳ ನೆಗೆದು, ಮುಖದ ಮುಸುಕು ಮೇಲಿತ್ತಿ ಕಿವಿಗಡಚಿಕ್ಕುವಂತೆ ಘೋಷಣೆ ಹಾಕತೊಡಗಿದ; ಕೆಂಪು ಬಾವುಟ ಗಾಳಿಯಲ್ಲಿ ಎತ್ತಿ ಹಾರಾಡಿಸಿದೊಡನೆಯೇ ಚೌಕದ ಸುತ್ತಲೂ ನೂರಾರು ಅಡಿ ದೂರದಲ್ಲಿ ಮೂರು - ಮೂರು ಜನರ ಗುಂಪಾಗಿ ನಿಂತಿದ್ದ ಸಂಗಾತಿಗಳು ಘೋಷಣೆಯನ್ನು ಮಾರ್ದ್ವನಿಸಿದರು. ತಮ್ಮ ತಮ್ಮ ಕಿಸೆಯಲ್ಲಿದ್ದ ಕೆಂಬಾವುಟಗಳನ್ನು ಹೊರತೆಗೆದು ಗಾಳಿಯಲ್ಲಿ ಝುಳಪಿಸಹತ್ತಿದರು. ಅನಿರೀಕ್ಷಿತವಾಗಿ ಕಾಣಿಸಿಕೊಂಡ ಕಾಮ್ರೇಡರ ಈ 'ಚಕ್ರವ್ಯೂಹ' ಕಂಡು ಪೊಲೀಸರು ದಿಗಿಲುಗೊಂಡರು. ನಮೋಶಿಯವರನ್ನೇನೋ ಬಂಧಿಸಬಹುದಾಗಿತ್ತು. ಆದರೆ ಮೂರರ ಸಂಖ್ಯೆಯಲ್ಲಿ ನೂರಾರು ಅಡಿ ದೂರ ದೂರದಲ್ಲಿ ಗುಂಪುಗೂಡಿದ ಕಾಮ್ರೇಡರನ್ನು ಬಂಧಿಸುವದಕ್ಕೆ ಸ್ವತ: ಅವರ ಕಾನೂನೇ ತೊಡಕಾಗಿತ್ತು. ಯಾಕೆಂದರೆ ನಾಲ್ವರಕ್ಕಿಂತ ಹೆಚ್ಚು ಜನರು ಒಂದೆಡೆ ಸೇರಬಾರದೆಂದು ಕಾನೂನಿನ ಕಟ್ಟಪ್ಪಣೆ. ಆದರೆ ಇವರಿದ್ದುದು ಮೂರು - ಮೂರು ಜನರು ಮಾತ್ರ. ಪರಿಣಾಮತ: ಪೊಲೀಸರು ಪೆಚ್ಚಾಗಿ ಪರಸ್ಪರ ಮುಖ ನೋಡಿಕೊಳ್ಳಲಾರಂಭಿಸಿದರು. ಕಾಂ. ನಮೋಶಿಯವರು ಪೊಲೀಸರಿಗೆ ಚಳ್ಳೇಕಾಯಿ ತಿನ್ನಿಸಿದ್ದು, ನಗರದ ತುಂಬೆಲ್ಲ ಸುದ್ದಿಯೋ ಸುದ್ದಿ, ಕಾಂ. ನಮೋಶಿಯವರ ಜಾಣತನದ ಬಗ್ಗೆ ಎಲ್ಲರೂ ಮೆಚ್ಚಿ ನುಡಿಯುವವರೆ ಹೀಗೆಯೇ ಅನೇಕ ಸಲ ಕಾನೂನು ಚಾಪೆಯ ಕೆಳಗೆ ತೂರಿದರೆ, ಕಾಂ. ನಮೋಶಿಯವರು ರಂಗೋಲಿಯ ಕೆಳಗೆ ತೂರಿ ಜನತೆಯ ಹಕ್ಕು ಹಿತಸಾಧಿಸುವಲ್ಲಿ ಎತ್ತಿದ ಕೈಯಾಗಿತ್ತು.

ಕಾಂ. ಗಂಗಾಧರ ನಮೋಶಿಯವರು ತಮ್ಮ ಅವಿಶ್ರಾಂತ ಚಟುವಟಿಕೆಗಳ ಮೂಲಕ ಕಲಬುರ್ಗಿಯ ಜನ ಜನಿತ ವ್ಯಕ್ತಿಯಾಗಿ ಬೆಳೆಯುತ್ತಿದ್ದಂತೆ ಅನೇಕ ಆಘಾತಗಳಿಗೆ ಒಳಗಾದ ಅವರ ಆರೋಗ್ಯ ಕ್ಷೀಣಿಸತೊಡಗಿತು. ಮೂರ್‍ನಾಲ್ಕು ಸಲ ಕಾರ್ಮಿಕರ ಬೇಡಿಕೆಗಳಿಗಾಗಿ ಅಮರಣಾಂತ ಉಪವಾಸ ಹೂಡಿ ಸಾವಿನ ದವಡೆವರೆಗೂ ಹೋಗಿ ಹಿಂತಿರುಗಿದರು. ಪ್ರತಿ ಸಲವೂ ಸಾವೇನೋ ತಪ್ಪಿತು. ಮೇಲಾಗಿ, ಯಶಸ್ಸಿನ ಭರದಲ್ಲಿ ಉಪವಾಸದಿಂದಾದ ದೈಹಿಕ ದುಷ್ಪರಿಣಾಮದ ಬಗ್ಗೆಯೂ ತಲೆಗೆ ಹಚ್ಚಿಕೊಳ್ಳಲಿಲ್ಲ. ಆದರೆ ವಾಸ್ತವವಾಗಿ ಪ್ರತಿಯೊಂದು ಉಪವಾಸ ಸತ್ಯಾಗ್ರಹವು ಅವರ ಆರೋಗ್ಯದ ಮೇಲೆ ಭರಿಸಲಾರದ ಹಾನಿ ಉಂಟು ಮಾಡಿತ್ತು. ಕ್ರಮೇಣ ದೈಹಿಕ ಆರೋಗ್ಯ ಕ್ಷೀಣಿಸಿತು. ಮಧ್ಯ ವಯಸ್ಸಿಗಾಗಲೇ ಮಧುಮೇಹ ಕಾಣಿಸಿಕೊಂಡು, ಅವರನ್ನು ಸಾವಕಾಶವಾಗಿ ಹಣ್ಣು ಮಾಡಿತು. ಸಂಗಾತಿಗಳ ಬಗ್ಗೆ ಅತೀವ ಕಾಳಜಿ ವಹಿಸುತ್ತಿದ್ದ ನಮೋಶಿಯವರು ತಮ್ಮ ಸ್ವಂತದ ಹಸಿವು ಆರೋಗ್ಯದ ಬಗ್ಗೆ ಕಿಂಚಿತ್ತೂ ಯೋಚಿಸುತ್ತಿರಲಿಲ್ಲ. ಪರಿಣಾಮವಾಗಿ, 80ರ ನಂತರ ಅವರ ಆರೋಗ್ಯ ತೀರ ಹದಗೆಟ್ಟಿತು. 1927ರ ಸೆಪ್ಟೆಂಬರ್ 9ರಂದು ಜನಿಸಿದ್ದ ಕಾಂ. ಗಂಗಾಧರ ನಮೋಶಿಯವರು ಎಂಭತ್ತೆರಡು, ನವೆಂಬರ್ 14ರಂದು ಸೋಲಾಪುರಿನ ಆಸ್ಪತ್ರೆಯೊಂದರಲ್ಲಿ ತೀರಿಕೊಂಡಾಗ ಅವರಿಗೆ ಕೇವಲ 56 ವರ್ಷ ವಯಸ್ಸು. ಈ ದೃಷ್ಟಿಯಿಂದ ಅವರದು ಈ ಭಾಗದ ಇನ್ನೊಬ್ಬ ಧೀಮಂತ ವ್ಯಕ್ತಿ ಶ್ರೀ ಮಹಾದೇವಪ್ಪ ರಾಂಪುರೆಯವರ ಬದುಕಿಗೆ ಸಮಾನವಾದದ್ದು. ಶ್ರೀ ರಾಂಪುರೆ ಯವರೂ ತೀರಿಕೊಂಡಾಗ 56 ದಾಟಿರಲಿಲ್ಲ.

ದಿ. ಶ್ರೀ ಮಹಾದೇವಪ್ಪ ರಾಂಪುರೆಯವರು ಕಲಬುರ್ಗಿ ಭಾಗದಲ್ಲಿ ಅನೇಕ ಶಿಕ್ಷಣ ಸಂಸ್ಥೆಗಳನ್ನು ತೆರೆದು ಜನ ಸಾಮಾನ್ಯರ ಬದುಕಿನಲ್ಲಿ ಜ್ಞಾನದ ಜ್ಯೋತಿ ಹೊತ್ತಿಸಿದರೆ, ಕಾಂ. ಗಂಗಾಧರ ನಮೋಶಿಯವರು ತಮ್ಮ ಸೈದ್ಧಾಂತಿಕ ತಿಳುವಳಿಕೆಯ ಸ್ಪಷ್ಟತೆ, ಹೋರಾಟದ ಕ್ರಾಂತಿಕಾರಿ ಮುಂದಾಳುತನ ಹಾಗೂ ನಿರ್ಭೀತ ನಿಲುವಿನ ಮೂಲಕ ಕಲಬುರ್ಗಿಯ ಜನತೆಯಲ್ಲಿ ಮಾನವ ಪ್ರೀತಿಯನ್ನು ಹುಟ್ಟಿಸಿದವರು; ಮಾನವೀಯ ಮೌಲ್ಯಗಳಿಗಾಗಿ ಜೀವ ತೆರಬಲ್ಲ ನಿಷ್ಕಾಮ ಕ್ರಾಂತಿಕಾರಿಗಳನ್ನು ಸೃಷ್ಟಿಸಿದವರು. ಆದಕ್ಕಾಗಿಯೇ ಕಾಂ. ನಮೋಶಿಯವರು ದೈಹಿಕವಾಗಿ ಕಣ್ಮರೆಯಾದರೂ, ಅವರು ಬೆಳೆಸಿದ ಅನೇಕ ಸಂಸ್ಥೆಗಳು ಇವತ್ತಿಗೂ ಜೀವಂತವಾಗಿ ಉಳಿದಿವೆ, ಎಂದರೆ ಉತ್ಪ್ರೇಕ್ಷೆಯಾಗಲಾರದು. ಅವರು ಕಟ್ಟಿ ಬೆಳೆಸಿದ ಸಿ.ಪಿ.ಐ (ಎಂ) ಪಕ್ಷ ಇಂದಿಗೂ ಲಕ್ಷಾವಧಿ ದಲಿತ ರೈತ ಕಾರ್ಮಿಕರ ಆಶೋತ್ತರಗಳಿಗೆ ಸ್ಪಂದಿಸುತ್ತದೆ.

ಕಲ್ಬುರ್ಗಿಯ ಶೋಷಿತ ಜನತೆಯಲ್ಲಿ ಅವರು ಹುಟ್ಟಿಸಿದ ಗಾಢವಾದ ಬದ್ಧತೆ ಯಾವ ಏಳು ಬೀಳುಗಳಿಗೂ ಬಗ್ಗದೇ ಇವೊತ್ತಿಗೂ ಅನೇಕ ಕ್ರಾಂತಿಕಾರಿ ಚಟುವಟಿಕೆಗಳಿಗೆ, ಭದ್ರ ಬುನಾದಿ ಒದಗಿಸಿದೆ. ಅವರ ಸ್ಪರ್ಶಮಣಿ ವ್ಯಕ್ತಿತ್ವದ ಸಂಪರ್ಕಕ್ಕೆ ಬಂದವರು ಅನೇಕರು. ಅವರೆಲ್ಲ ಇಂದು ನಮೋಶಿಯವರು ಕಟ್ಟಿ ಬೆಳೆಸಿದ ಪಕ್ಷದಲ್ಲಿರಲಿಕ್ಕಿಲ್ಲ. ಆದರೆ ಅವರೆಲರಲ್ಲಿ ಇಂದಿಗೂ ಕಾಣಿಸುತ್ತಿರುವ ಕ್ರಿಯಾಶೀಲತೆ ಸಾಮಾಜಿಕ ಕಳ ಕಳಿಗಳಿಗೆ ಕಾಂ. ನಮೋಶಿಯವರ

ಪ್ರಭಾವವೇ ಕಾರಣವೆಂದು ನಿಸ್ಸಂದೇಹವಾಗಿ ಹೇಳಬಹುದು. ಜಾತಿ ಧರ್ಮಗಳ ಗೋಡೆಯನ್ನು ಎಂದೋ ಕೆಡವಿದ ಕಾಂ. ನಮೋಶಿಯವರು ಇವ್ರೊತ್ತಿಗೂ ಕಾಂ. ಇಸಾಕ್ ಮಂದೂರ, ಮಹ್ಮದ ಜಲಾಲ್, ಹನ್ನುಭಾಯಿ ಮಹ್ಮದ್ ಹುಸೇನ್ ಮುಂತಾದ ಸಂಗಾತಿಗಳ ಕಣ್ಮಣಿಯಾಗಿದ್ದರು ಎಂದು ಹೇಳಿದರೆ ಯಾರು ಆಶ್ಚರ್ಯ ಪಡಬೇಕಾಗಿಲ್ಲ. ಯಾಕೆಂದರೆ, ಅಗಾಧ ಆಶ್ಚರ್ಯ ಪಡಬಹುದಾದ ಅಸಾಧ್ಯತೆಗಳನ್ನು ಸಾಧ್ಯಗೊಳಿಸುವದೇ ಒಬ್ಬ ಕಟ್ಟಾ ಕಮ್ಯುನಿಸ್ಟ್‌ನ ಆದ್ಯ 'ಕರ್ತವ್ಯ' ಈ ಕರ್ತವ್ಯವನ್ನು ಅಪೂರ್ವ ಯಶಸ್ಸಿನಿಂದ ಪೂರೈಸಿದ ಕಾಂ. ನಮೋಶಿಯವರು ಕಲಬುರ್ಗಿಯ ಜನಸಾಮಾನ್ಯನ ಹೃದಯದಲ್ಲಿ ಕ್ರಾಂತಿಯ ಕಿಡಿಯಾಗಿ, ಉಜ್ವಲ ಭವಿಷ್ಯ ಮತ್ತು ಬದುಕಿನ ಆಶಾಜ್ಯೋತಿಯಾಗಿ ಅಮರರಾಗಿದ್ದಾರೆ. ಕಾರಣ, ಅವರೊಬ್ಬ ಕೇವಲ ರಾಜಕೀಯ ಧುರೀಣ ರಾಗಿರದೇ, ಮುಂದಿನ ಪೀಳಿಗೆಯ ಕಲ್ಯಾಣದ ಗುರಿಯನ್ನು ಈಡೇರಿಸಲು, ಜನ್ಮತಾಳಿದ ಮುತ್ಸದ್ದಿಯೆಂದೇ ಸಮರ್ಥಿಸಬೇಕಾಗುತ್ತದೆ.

ಸಮಾರೋಪ:-

ಒಟ್ಟಾರೆ ಹೇಳುವುದಾದರೆ, ಶ್ರೀ ಗಂಗಾಧರ ನಮೋಶಿಯವರ ವ್ಯಕ್ತಿತ್ವ, ಇಡೀ ಗುಲಬರ್ಗಾ ವಿಭಾಗದ ಸಮಸ್ತ ಜನರ ಆಶೋತ್ತರಗಳನ್ನು ಪೂರೈಯಿಸಲು ಸ್ಪಂದಿಸುವಂತಿತ್ತು. ಜನ ಸೇವೆಯೇ ಜನಾರ್ಧನ ಸೇವೆಯೆಂದು ಮನವರಿಕೆ ಮಾಡಿಕೊಂಡಿದ್ದ ಶ್ರೀ ನಮೋಶಿಯವರು, ಅದೇಷ್ಟೋ ಜನಪರ ಕಾರ್ಯಗಳಲ್ಲಿ ಅಪೂರ್ವ ಸಾಧನೆ ಮಾಡಿದ್ದುಂಟು. ಆ ಸಾರ್ವಜನಿಕ ಕಾರ್ಯಕ್ರಮಗಳಲ್ಲಿ, ಈ ಕೆಳಗಿನವುಗಳು ಪ್ರಾಮುಖ್ಯವಾಗಿರುತ್ತವೆ.

1. ಮಹಾನಗರ ಸಭೆಯ ಕಟ್ಟಡ ನಿರ್ಮಾಣಗೊಳ್ಳುವಲ್ಲಿ ಅವರ ಪ್ರಯತ್ನ.

2. ಚಳವಳಿಯ ಮೂಲಕ, ಬೆಣ್ಣೆತೊರೆ ಯೋಜನೆಯನ್ನು ಸರಕಾರವೇ ವಹಿಸಿ, ಅದನ್ನು ಪೂರ್ತಿಗೊಳ್ಳುವಂತೆ ಮಾಡಲು, ಅವರು ಮಾಡಿದ ಒತ್ತಾಯದ ಯಶಸ್ಸು.

3. ಟ್ರೇಡ್ ಯುನಿಯನ್‌ನ ಪ್ರಧಾನ ಕಾರ್ಯದರ್ಶಿಗಳಾಗಿ, ಎಂ.ಎಸ್.ಕೆ. ಮಿಲ್ (ಗುಲಬರ್ಗಾ ಮತ್ತು ಎ.ಸಿ.ಸಿ. (ಶಹಾಬಾದ್) ಕಾರ್ಮಿಕ ಸಮಸ್ಯೆಗಳನ್ನು ಪರಿಹಾರಗೊಳಿಸುವಲ್ಲಿ, ಅವರ ಅಮೋಘ ಮತ್ತು ಅವಿರತವಾದ ಸೇವೆ. ಆ ನಿಟ್ಟಿನಲ್ಲಿ, ಕಾರ್ಮಿಕರ ಸಂಬಳ ಹೆಚ್ಚಿಸುವಲ್ಲಿ ಮತ್ತು ಎಂ.ಎಸ್.ಕೆ.ಮಿಲ್ ಮುಚ್ಚಬಾರದೆಂದು, ಅನೇಕ ಸಲ ಚಳವಳಿಗಳನ್ನು ಹೂಡಿ, ಸತತ 3 ಬಾರಿ ಪ್ರಾಣಾಂತಿಕ ಉಪವಾಸ ಸತ್ಯಾಗ್ರಹ ಮಾಡಿ ಯಶಸ್ವಿಯಾದದ್ದು.

4. ಶೈಕ್ಷಣಿಕವಾಗಿ ಹಿಂದುಳಿದ ಪ್ರದೇಶವಾದ ಹೈದ್ರಾಬಾದ್ ಕರ್ನಾಟಕವನ್ನು ಶೈಕ್ಷಣಿಕವಾಗಿ, ಅಭಿವೃದ್ಧಿಪಡಿಸಲು, "ಹೈದ್ರಾಬಾದ ಶಿಕ್ಷಣ ಸಂಸ್ಥೆ" ಯನ್ನು ಪ್ರಾರಂಭಿಸಲು, ಪ್ರಯತ್ನ ಮಾಡಿ ಮತ್ತು ಯಶಸ್ವಿಯಾಗಿ ಆ ಸಂಸ್ಥೆಯ ಜೀವಾವಧಿ ಸದಸ್ಯರಾಗಿ, ಈ ಭಾಗಕ್ಕೆ ಒಂದು ಸ್ವತಂತ್ರ ವಿಶ್ವವಿದ್ಯಾಲಯವು ಸ್ಥಾಪಿಸಲು ಅವರು ಮಾಡಿದ ಪ್ರಯತ್ನವನ್ನು ಯಾರೂ ಮರೆಯುವಂತಿಲ್ಲ.

5. ತಾವು ಎಂ.ಎಲ್.ಎ. ಆಗಿದ್ದಾಗ ಅರ್ಧದಷ್ಟು ಅವಧಿಯನ್ನು ಜೈಲಿನಲ್ಲಿ ಕಳೆದರೂ, ಗುಲಬರ್ಗಾ ಭಾಗದ ಜನರ ಸೇವೆ ಮಾಡಿ, ಗುಲಬರ್ಗಾದಲ್ಲಿ ಪೂರ್ಣ ಪ್ರಮಾಣದ ವಿದ್ಯುತ್ ಒದಗಿಸಿಕೊಡುವಲ್ಲಿ ನಿರಂತರ ಹೋರಾಟದ ಯಶಸ್ಸು ಒಂದು ಅಮೋಘ ಕೊಡುಗೆ.

6. 1972ರ ಭೀಕರ ಬರಗಾಲದ ಅವಧಿಯಲ್ಲಿ, ಗುಲ್ಬರ್ಗಾ ಭಾಗದ ಬಡ ಜನರ ಜೀವ ಉಳಿಸಲು, ಮುಖ್ಯಮಂತ್ರಿ (ದೇವರಾಜ ಅರಸ್) ಯವರನ್ನು ಆಮಂತ್ರಿಸಿ, ಜನರ ಕಷ್ಟಗಳನ್ನು ಅವರಿಗೆ ಮನವರಿಕೆ ಮಾಡಿ, ಕೇಂದ್ರ ಸರ್ಕಾರಕ್ಕೂ ಆ ಸಮಸ್ಯೆಯ ಬಗ್ಗೆ ಮನವಿ ಪತ್ರ ಸಲ್ಲಿಸಿ, ಕೇಂದ್ರ ಸರಕಾರದ ಶ್ಲಾಘನೆಗೆ ಪಾತ್ರರಾದರು.

ಹೀಗೆ, ಅದೆಷ್ಟೋ ಕಾರ್ಯಗಳನ್ನು ಮಾಡಿ, ಮತ್ತು ಸಾಧಿಸಿ, ಇಡೀ ಹೈದ್ರಾಬಾದ್ ಕರ್ನಾಟಕ ಭಾಗದ ಜನರ ಪ್ರೀತಿ ಮತ್ತು ವಿಶ್ವಾಸಗಳಿಗೆ ಸ್ಪಂದಿಸಿ, ಕೇವಲ ಚುನಾವಣೆಗಳಿಗೋಸ್ಕರ, ಹೋರಾಡದೇ, ಜನರ ಕಲ್ಯಾಣ, ಸಾಧಿಸುವುದೊಂದೇ ಪ್ರಮುಖ ಗುರಿಯನ್ನಿಟ್ಟುಕೊಂಡು, ಒಬ್ಬ ಮುತ್ಸದ್ದಿಯಾಗಿ, ತಮ್ಮ ರಾಜಕೀಯ ಜೀವನದ ಗುರಿ ಸಾಧಿಸಿ. ಶ್ರೀಯುತರು ದಿನಾಂಕ 14ನೇ ನವೆಂಬರ್, 1982 ರಂದು ವೈವಾಧೀನರಾದರು.

## ಭಾಗ - ೨

## ಸಂಸದೀಯ ಪಟುವಾಗಿ

**ಪೀಠಿಕೆ:**

ಶ್ರೀ ಗಂಗಾಧರ ನಮೋಶಿಯವರು, ತಮ್ಮ ರಾಜಕೀಯ ಜೀವನವನ್ನು, ಗುಲ್ಬರ್ಗಾ ಮುನ್ಸಿಪಾಲಿಟಿಯ ಚುನಾವಣೆಗಳಲ್ಲಿ ಜಯಗಳಿಸಿ, ನಗರದ ಅಭಿವೃದ್ಧಿಗಾಗಿ, ಎಷ್ಟೋ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸುವುದರೊಂದಿಗೆ ಪ್ರಾರಂಭಿಸಿದರು. ಅವರು ಮುನ್ಸಿಪಾಲಿಟಿಯ ಕೌನ್ಸಿಲರಾಗಿ, ತಮ್ಮ ವಿಶೇಷ ಕಾರ್ಯ ವೈಖರಿ.ಯಿಂದ, ಗುಲಬರ್ಗಾದ ಸಮಸ್ತ ನಾಗರೀಕರ ಹೃದಯದಲ್ಲಿ, ಒಂದು ಹೊಸ ಚೈತನ್ಯ ಹುಟ್ಟಿಸಿದ್ದು ಯಾರೂ ಮರೆಯುವಂತಿಲ್ಲ. ಕಮ್ಯುನಿಸ್ಟ್ ಪಕ್ಷದ ತತ್ವಗಳಿಗೆ ಬದ್ಧವಾಗಿ, ಕಾರ್ಮಿಕರ ಹಿತಕ್ಕಾಗಿ, ತಮ್ಮ ಸರ್ವಸ್ವವನ್ನೇ ಮುಡುಪಾಗಿಟ್ಟಿದ್ದುದು ಕಲಬುರ್ಗಿಯ ಎಂ.ಎಸ್.ಕೆ. ಮಿಲ್‌ನ ಸಮಸ್ತ ಕಾರ್ಮಿಕರೇ ಸಾಕ್ಷಿ.

ಮುಂದೆ, ರಾಜಕೀಯದಲ್ಲಿ ಸಕ್ರೀಯವಾಗಿ ಭಾಗವಹಿಸಲು, ಶ್ರೀ ನಮೋಶಿಯವರಿಗೆ 1957ರಲ್ಲಿ ಮೈಸೂರು ರಾಜ್ಯದ ವಿಧಾನಸಭೆಗೆ ಕಲ್ಬುರ್ಗಿಯಿಂದ, ಕಮ್ಯುನಿಸ್ಟ ಪಕ್ಷದ ಅಭ್ಯರ್ಥಿಯಾಗಿ ಕಾಂಗ್ರೆಸ್ಸಿನ ಶ್ರೀ ಮಹಮ್ಮದ ಅಲಿ ಯವರ ವಿರುದ್ಧ ಚುನಾವಣೆಯನ್ನು ಸ್ಪರ್ಧಿಸಿ ಪರಾಭವಗೊಂಡರು. ಆದರೂ ವಿಧಾನಸಭೆಯ ಸದಸ್ಯರಾಗಲು ಅವರ ಉತ್ಸಾಹ ಮತ್ತು ಬಯಕೆ ಹೆಚ್ಚುತ್ತಾ ಹೋಯಿತು. ಅದಕ್ಕಾಗಿಯೇ 1962ರ, ವಿಧಾನ ಸಭೆಯ ಚುನಾವಣೆಯಲ್ಲಿ ಮತ್ತೊಮ್ಮೆ ಶ್ರೀ ಮಹ್ಮದ ಅಲಿಯವರ ವಿರುದ್ಧ ಸ್ಪರ್ಧಿಸಿ. ಅವರನ್ನು ಪರಾಭವಗೊಳಿಸಿ ಚುನಾಯಿತರಾದರು. ಆ ಜಯಭೇರಿಯೇ ಶ್ರೀ ಗಂಗಾಧರ ನಮೋಶಿಯವರಿಗೆ ಸಂಸದೀಯ ಪಟುವಾಗಲು ಪ್ರಥಮ ಹೆಜ್ಜೆಯಾಯಿತು.

1962 ರಿಂದ 1967 ರ ವರೆಗೆ, ಶ್ರೀ ಗಂಗಾಧರ ನಮೋಶಿಯವರು, ಗುಲಬರ್ಗಾ ಕ್ಷೇತ್ರವನ್ನು, ಪ್ರತಿನಿಧಿಸುತ್ತ ರಾಜ್ಯ ವಿಧಾನ ಸಭೆಯ ಸದಸ್ಯರಾಗಿ ಸಂಸದೀಯ ಪಟುವಿನಂತೆ ತಮ್ಮ ರಾಜಕೀಯ ಜೀವನವನ್ನು ಕ್ಷೇತ್ರದ ಅಭಿವೃದ್ಧಿಗಾಗಿ ಸಾರ್ಥಕಗೊಳಿಸಿದರು. ಸಂಸದೀಯ ಪಟುವಾಗಿ ವಿಧಾನ ಸಭೆಯ ಸದಸ್ಯರಾಗಿ, ಅವರ ಐದು ವರ್ಷಗಳ ಕಾಲಾವಧಿಯಲ್ಲಿ, ಕ್ಷೇತ್ರದ ಸರ್ವತೋಮುಖದ ಅಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು, ಸದನದಲ್ಲಿ, ಕೆಲವು ಪ್ರಮುಖ ವಿಷಯಗಳ ಬಗ್ಗೆ ಮತ್ತು ಸಮಸ್ಯೆಗಳ ಬಗ್ಗೆ, ಸಂಬಂಧಪಟ್ಟ ಮಂತ್ರಿಗಳಿಗೆ ಮತ್ತು ಮುಖ್ಯ ಮಂತ್ರಿಯವರಿಗೆ ಲಿಖಿತ ಮತ್ತು ಮೌಖಿಕ ಪ್ರಶ್ನೆಗಳನ್ನು ಕೇಳಿದ್ದುಂಟು. ಮತ್ತು ಆ ಪ್ರಶ್ನೆಗಳಿಗೆ, ಸರಕಾರದಿಂದ ಸೂಕ್ತ ಉತ್ತರಗಳನ್ನು ಪಡೆಯಲು ಪ್ರಯತ್ನಿಸಿದ್ದುಂಟು. ಆ ರೀತಿಯ ಪ್ರಶ್ನೆಗಳನ್ನು ಕೇಳುವಲ್ಲಿ ಶ್ರೀ ನಮೋಶಿಯವರು ಕ್ಷೇತ್ರದ ಸಮಸ್ಯೆಗಳ ಬಗ್ಗೆ ಸರಕಾರದ ಗಮನಹರಿಸುವುದರ ಜೊತೆಗೆ, ಆ ಸಮಸ್ಯೆಗಳ ಬಗ್ಗೆ ಸರಕಾರದಿಂದ. ಸೂಕ್ತ ಪರಿಹಾರ ಕ್ರಮಗಳು ಸಿಗುವಂತೆ ಮಾಡಿದ್ದುಂಟು.

ಕೆಲವು ಮಹತ್ವದ ಮತ್ತು ಜಟಿಲವಾದ ಸಮಸ್ಯೆಗಳ ಬಗ್ಗೆ ಶ್ರೀ ನಮೋಶಿಯವರು ಸದನದಲ್ಲಿ ಸಂಸದೀಯ ಪಟುವಿನಂತೆ ಭಾಷಣ ಮಾಡಿ, ಸದನದ ಘನತೆ ಮತ್ತು ಗೌರವವನ್ನು ಕಾಪಾಡಿಕೊಂಡು ಸರಕಾರವನ್ನು ತರಾಟೆಗೆ ತೆಗೆದುಕೊಂಡಿದ್ದರ ಬಗ್ಗೆ ಸಾಕಷ್ಟು ಉದಾಹರಣೆಗಳಿವೆ. ಶ್ರೀ ನಮೋಶಿಯವರು ಸದನದ ದಿನ ನಿತ್ಯದ ಕಾರ್ಯಕಲಾಪಗಳಲ್ಲಿ, ಹಾಜರಿದ್ದು ಸದನದ ಚರ್ಚೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಸದನದಲ್ಲಿ ಅವರು ತಮ್ಮದೇ ಆದ ಶೈಲಿಯಲ್ಲಿ ಮಾತನಾಡಿದಾಗ ಇಡೀ ಸದನವೇ ಹರ್ಷದ ಹಾಸ್ಯದ ಸಾಗರದಲ್ಲಿ ಮುಳುಗಿ ಬಿಡುತ್ತಿತ್ತು. ಸಂಸದೀಯ ಸರಕಾರ ವ್ಯವಸ್ಥೆಯಲ್ಲಿ ವಿರೋಧ ಪಕ್ಷದ ನ್ಯಾಯ ಬದ್ಧವಾದ ಮತ್ತು ರಚನಾತ್ಮಕ ಪಾತ್ರವನ್ನು ಗಮನದಲ್ಲಿಟ್ಟು ಕೊಂಡು ಶ್ರೀ ನಮೋಶಿಯವರು ಸಂಸದೀಯ ಪಟುವಿನ ಪಾತ್ರವನ್ನು ನಿರ್ವಹಿಸುತ್ತಿದ್ದರು. 1964ರಲ್ಲಿ, ಕಮ್ಯುನಿಸ್ಟ ಪಕ್ಷವು ಇಭ್ಭಾಗವಾದಾಗ ಶ್ರೀ ನಮೋಶಿಯವರು ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ತತ್ವಗಳಿಗೆ ಬದ್ಧರಾಗಿ, ರೈತರ, ಕಾರ್ಮಿಕ, ಮತ್ತು ಕೂಲಿಕಾರರ ಕಲ್ಯಾಣಕ್ಕಾಗಿ, ತಮ್ಮ ರಾಜಕೀಯ ಜೀವನವನ್ನು ಯಶಸ್ವಿಯಾಗಿ, ನಿರ್ವಹಿಸಿ, ಕ್ಷೇತ್ರದ ಅಭಿವೃದ್ಧಿಯನ್ನು ಸಾಧಿಸಿದ್ದುಂಟು.

ಅದಕ್ಕಾಗಿಯೇ ಇಲ್ಲಿ ಶ್ರೀ ಗಂಗಾಧರ ನಮೋಶಿಯವರನ್ನು ಸಂಸದೀಯ ಪಟುವೆಂದು, ಸಮರ್ಥಿಸಲು ಸದನದಲ್ಲಿ ಅವರು ಕೇಳಿದ ಪ್ರಶ್ನೆಗಳು ಮತ್ತು ಅವುಗಳಿಗೆ ದೊರೆತ ಉತ್ತರವನ್ನು ಮತ್ತು ಕೆಲವು ಮಹತ್ವದ ವಿಷಯಗಳಿಗೆ ಸಂಬಂಧಿಸಿದಂತೆ ಅವರ ಭಾಷಣಗಳನ್ನು ವಿಧಾನ ಸಭೆಯ ನಡುವಳಿಕೆಗಳ ಆಧಾರದ ಮೇಲೆ ವಿವರಿಸಲಾಗಿದೆ.

## ಮೈಸೂರು ಧನ ವಿನಿಯೋಗ (ನಂ.4) ಮಸೂದೆ, 1962

ಅಧ್ಯಕ್ಷರೇ, ನಾನು ಈ ಅಪ್ರೋಪ್ರಿಯೇಷನ್ ಬಿಲ್‌ನ ಸಂದರ್ಭದಲ್ಲಿ, ಬೇಡಿಕೆಗಳ ಚರ್ಚೆಯ ಸಂದರ್ಭ ಹೇಳಲು ಅವಕಾಶ ಸಿಗದೆ ಹೇಳದಿದ್ದ ಕೆಲವೆ ವಿಷಯಗಳನ್ನು ತಮ್ಮ ಗಮನಕ್ಕೆ ತರಬಯಸುತ್ತೇನೆ.

### ಸ್ಟಾಂಪ್ ಡ್ಯೂಟಿ

ಈಚೀಚೆಗೆ ಸ್ಟಾಂಪ್ ಡ್ಯೂಟಿ ಬಹಳ ಜಾಸ್ತಿಯಾಗಿದೆ. ಬಡಬಗ್ಗರಿಗೆ ನ್ಯಾಯ ದೊರಕಿಸಿಕೊಡಲಿಕ್ಕೆ ಕೋರ್ಟಿಗೆ ಹೋಗಬೇಕಾದರೆ ಸ್ಟಾಂಪ್ ಫೀಸ್ ಕೊಡುವುದೇ ಸಾಕಾಗಿದೆ. ಎಷ್ಟೋ ಜನರು ಇಷ್ಟು ದುಡ್ಡು ಕೊಟ್ಟು ಕೋರ್ಟಿಗೆ ಹೋಗುವುದರ ಬದಲು ಸುಮ್ಮನಿರುವುದೇ ಲೇಸೆಂಬ ನಿರ್ಣಯಕ್ಕೆ ಬಂದಿದ್ದಾರೆ. ಹೀಗಾಗಿ ಬಡ ಬಗ್ಗರಿಗೆ ನ್ಯಾಯ ಸಿಕ್ಕುವುದಿಲ್ಲ. ದುಡ್ಡು ಕೊಟ್ಟು ನ್ಯಾಯವನ್ನು ಕೊಂಡುಕೊಳ್ಳಬೇಕಾಗಿದೆಯೆಂದು ಅವರು ವಿಷಾದ ಪಡುತ್ತಿದ್ದಾರೆ. ಆದ್ದರಿಂದ ತಾವು ದಯವಿಟ್ಟು ಕೋರ್ಟ ಫೀಜು ಮತ್ತು ಸ್ಟಾಂಪ್ ಡ್ಯೂಟಿಯನ್ನು ಆದಷ್ಟು ಕಡಿಮೆ ಮಾಡಬೇಕೆಂದು ವಿನಂತಿಮಾಡಿಕೊಳ್ಳುತ್ತೇನೆ.

### ಸೇಲ್ಸ್ ಟ್ಯಾಕ್ಸ್

ಆ ಮೇಲೆ ಸೇಲ್ಸ್ ಟ್ಯಾಕ್ಸ್ ವಿಧಿಸುವ ವಿಚಾರವಾಗಿ ಒಂದು ಮಾತು ಈಗಾಗಲೇ ನಾನಾ ರೀತಿಯಲ್ಲಿ ಟ್ಯಾಕ್ಸ್‌ನ್ನು ಕೊಟ್ಟು ಸಾಕಾಗಿರುವಾಗ ಹಳ್ಳಿಗಳಲ್ಲಿ ಸಣ್ಣ ಉದ್ಯೋಗ ಮಾಡುವ ಗಾಣಿಗಾರ ಮತ್ತು ಇತರ ಚಿಕ್ಕ ಪುಟ್ಟ ಗ್ರಾಮ ಕೈಗಾರಿಕೊದ್ಯಮಿಗಳ ಮೇಲೆ ಸೇಲ್ಸ್ ಟ್ಯಾಕ್ಸ್ ಹಾಕಿರುವುದು ವಿಷಾದಕರ. ದೊಡ್ಡ ದೊಡ್ಡ ಎಣ್ಣೆ ಎಕ್ಸ್‌ಪೆಲ್ಲರಗಳ ಮತ್ತು ರೋಲರ್‌ಗಳ ಮುಂದೆ ಚಿಕ್ಕಪುಟ್ಟ ಈ ಕೈಗಾರಿಕೋ ದ್ಯಮಿಗಳು ಈ ರೀತಿ ಟ್ಯಾಕ್ಸ್ ಕೊಡಬಲ್ಲರೇ. ಸರ್ಕಾರಿ ಆಫೀಸರುಗಳು ಇತರೇ ಕಡೆಗಳಲ್ಲಿರುವ ಪರಿಸ್ಥಿತಿಯನ್ನು ತೋರುತ್ತೇವೆಂದು ತಮ್ಮ ರಿಪೋರ್ಟ್‌ಗಳನ್ನು ಸರ್ಕಾರಕ್ಕೆ, ಮಂತ್ರಿಗಳವರಿಗೆ ಹೀಗೆ ವಿಧಿಸುವಂತೆ ಮಾಡಿದ್ದಾರೆ. ದಯವಿಟ್ಟು ಇಂಥ ಸಣ್ಣ ಪುಟ್ಟ ಗ್ರಾಮೋದ್ಯೋಗಸ್ಥರಿಗೆ ಸೇಲ್ಸ್ ಟ್ಯಾಕ್ಸ್‌ನ ವಿನಾಯಿತಿ ತೋರಿಸಬೇಕೆಂದು ಹೇಳುತ್ತೇನೆ.

### ಸರಕಾರಿ ಕೈಗಾರಿಕೆಗಳು

ಕೈಗಾರಿಕೆಗಳ ವಿಷಯದಲ್ಲಿ ಹೇಳುವುದಾದರೆ ಸರಕಾರಿ ಸೆಕ್ಟರಿನಲ್ಲಿ ನಡೆಯುವಂಥವುಗಳು ಎಷ್ಟೇ ಉತ್ತಮ ರೀತಿಯಿಂದ ನಡೆದಿವೆಯೆಂದರೂ ಪ್ರೈವೇಟ್ ಸೆಕ್ಟರಿನಲ್ಲಿರುವದಕ್ಕಿಂತ 20-30 ರಷ್ಟು ಕಡಿಮೆ ಲಾಭ ಪಡೆಯುತ್ತಿದ್ದಾರೆ. ಪ್ರೈವೇಟ್ ಸೆಕ್ಟರಿನಲ್ಲಿ ಹೆಚ್ಚು ಲಾಭಾ ಹೊಂದುವುದಕ್ಕೆ ಸಾಧ್ಯವಾದರೂ ಸರಕಾರಿ ಸೆಕ್ಟರಿನಲ್ಲಿ ಹಾಗೆ ಹೊಂದುವುದಕ್ಕೆ ಸಾಧ್ಯವಾಗುವುದಿಲ್ಲವೆಂದು ಹೇಳಿದ್ದಾರೆ. ಇದಕ್ಕೆ ಕಾರಣವೇನು? ಎ.ಸಿ.ಸಿ. ಮುಂತಾದ ಫರ್ಮಗಳು ಚೆನ್ನಾಗಿ ನಡೆಯುತ್ತಿಲ್ಲವೇ? ಅವರೂ ಕೂಡ ಸ್ವಂತವಾಗಿ ನೋಡಿಕೊಳ್ಳುವುದಿಲ್ಲ. ಅಲ್ಲಿ ಕೂಡ ಮ್ಯಾನೇಜ್ ಮಾಡುವುದಕ್ಕೆ ಬೇರೆ ಜನರಿದ್ದಾರೆ. ಆದರೆ, ಅವರು ಒಳ್ಳೊಳ್ಳೆಯ ಅಧಿಕಾರಿಗಳನ್ನಿಟ್ಟು ಅವರು ತಮ್ಮ ಸ್ವಂತ ಜವಾಬ್ದಾರಿಗಳ ಮೇಲೆ ಆಡಳಿತ ನಡೆಸುವುದಕ್ಕೆ ಪ್ರೋತ್ಸಾಹಿಸುತ್ತಾರೆ. ನಮ್ಮ ಸರ್ಕಾರದವರು, ಹಾಗಿರುವುದಿಲ್ಲ.

ದಿನದಿನದ ಪ್ರತಿಯೊಂದು ಕೆಲಸ ಕಾರ್ಯಗಳಲ್ಲಿ, ಸರಕಾರದವರು ಇಂಟರ್‌ಫಿಯರ್ ಮಾಡಿ, ತಮಗೆ ಇಷ್ಟವಿಲ್ಲದವರನ್ನು ತೆಗೆದು ಹಾಕಿಬಿಟ್ಟು, ಒಬ್ಬ ಒಳ್ಳೆಯ ಅಧಿಕಾರಿಯಾಗಿದ್ದರೂ, ತಮಗೆ ಬೇಡದವನಾಗಿದ್ದರೆ, ಇನ್ನೊಬ್ಬ ಅಧಿಕಾರಿಯನ್ನು ತಂದು ಅವನ ಮೇಲೆ ನೇಮಕ ಮಾಡುವುದು ಇವೆಲ್ಲಾ ನಡೆಯುತ್ತದೆ. ಇದರಿಂದಾಗಿ ಪಬ್ಲಿಕ್ ಸೆಕ್ಟರಿನ ಕೈಗಾರಿಕೆಗಳು ಹಾಳಾಗುತ್ತಿವೆ. ಆದ್ದರಿಂದ ಇಂಥ ಕೈಗಾರಿಕೆಗಳಲ್ಲಿ ಕೆಲಸ ಮಾಡಲು ಯೋಗ್ಯರಾದವರನ್ನು ಇಟ್ಟು ಅಲ್ಲಿನ ಕೆಲಸ ಕಾರ್ಯಗಳು ಸರಿಯಾಗಿ ನಡೆಯುವಂತೆ ವ್ಯವಸ್ಥೆ ಮಾಡಬೇಕೆಂದು ಹೇಳುತ್ತೇನೆ.

**ಮೆಡಿಕಲ್ ಕಾಲೇಜು**

ಹೈದರಾಬಾದ್ ಕರ್ನಾಟಕ ವಿಷಯದಲ್ಲಿ ಹೇಳುವುದಾದರೆ, ನಮಗೆ ಮೆಡಿಕಲ್ ಕಾಲೇಜನ್ನು ಸರ್ಕಾರದವರು ಕೊಡುತ್ತೇವೆಂದು ಬಹಳ ವರ್ಷಗಳಿಂದ ಹೇಳುತ್ತಲೇ ಇದ್ದಾರೆ. ಅದರ ವಿಷಯವಾಗಿ ಮಾನ್ಯ ಮಂತ್ರಿಗಳು ಉತ್ತರದಲ್ಲಿ ಸಾಕಷ್ಟು ಹೇಳಿಲ್ಲ. ಅಷ್ಟೇ ಅಲ್ಲ ಅಲ್ಲಿರುವ ದವಾಖಾನೆಯಲ್ಲಿ ಡಾಕ್ಟರುಗಳೇ ಇರುವುದಿಲ್ಲ. ನಾನು ಒಂದು ಸಾರಿ ಹೆಲ್ತ್ ಸೆಕ್ರೆಟರಿ ಆಫೀಸ್‌ಗೆ ಹೋಗಿದ್ದೆ ಅಲ್ಲಿ ಒಂದೊಂದು ಮ್ಯಾಪ್ ಇದೆ. ಆ ಸಂಸ್ಥಾನದಲ್ಲಿ ಎಲ್ಲೆಲ್ಲಿ ಎಷ್ಟೆಷ್ಟು ದವಾಖಾನೆಗಳಿವೆ, ರಸ್ತೆಗಳಿವೆ, ಎಂಬುದನ್ನೆಲ್ಲಾ ಆ ಮ್ಯಾಪಿನಲ್ಲಿ ಚೆನ್ನಾಗಿ ಕಾಣುವುದು. ಆದರೆ ನಮ್ಮಲ್ಲಿ ಯಾವಯಾವುದು ಎಲ್ಲೆಲ್ಲಿದೆ ಎಂಬುದೇ ತಿಳಿಯುವುದಿಲ್ಲ. ಏನೇನೂ ಕ್ರಮಗಳನ್ನು ಮಾಡುತ್ತಿದ್ದಾರೆಂಬುದೂ ಸಹ ತಿಳಿಯದು. ಅವೆಲ್ಲವೂ ಕಸ ಬಿದ್ದ ಹಾಗೆ ಬಿದ್ದಿವೆ. ದವಾಖಾನೆ, ರಸ್ತೆ ಇತ್ಯಾದಿಗಳು ಎಷ್ಟೆಷ್ಟು ನಮ್ಮ ಹೈದರಾಬಾದ್ ಕರ್ನಾಟಕದಲ್ಲಿವೆ ಎಂಬುದು ಒಂದೂ ಕಾಣುವುದಿಲ್ಲ. ಅದಕ್ಕೆ ಸಂಬಂಧ ಪಡುವ ಮ್ಯಾಪ್ ಸಹ ಇರುವುದಿಲ್ಲ.

ಉಪಾಧ್ಯಕ್ಷರು:- ಇದು ಈ ಸಭೆಯಲ್ಲಿ ಬಹಳ ಸಾರಿ ಚರ್ಚೆಯಾಗಿದೆ.

ಶ್ರೀ ಗಂಗಾಧರ ನಮೋಶಿ: ಮುಖ್ಯವಾಗಿ ನಮ್ಮ ವಿಭಾಗದಲ್ಲಿ ಹೆಚ್ಚುವರಿ ಆಸ್ಪತ್ರೆಗಳಿಲ್ಲ, ರಸ್ತೆಗಳಿಲ್ಲ, ಕಾಲೇಜುಗಳು, ಸ್ಕೂಲುಗಳು ಎಷ್ಟರಮಟ್ಟಿಗೆ ನಮ್ಮ ವಿಭಾಗದಲ್ಲಿ ಇವೆ ಎಂಬುದೂ ಸಹ ಆ ಭೂಪಟದಿಂದ ಚೆನ್ನಾಗಿ ತಿಳಿಯುತ್ತದೆ. ದಯವಿಟ್ಟು ಹೈದರಾಬಾದ ಕರ್ನಾಟಕಕ್ಕೆ ಎಷ್ಟರ ಮಟ್ಟಿಗೆ ಸವಲತ್ತುಗಳ ದೊರೆತಿವೆ ಎಂಬುದನ್ನು ಎಲ್ಲಾ ಆಫೀಸರುಗಳು ನೋಡಬೇಕು. ಸೆಕ್ರೆಟೇರಿಯೇಟ್ ಬಿಲ್ಡಿಂಗ್‌ನಲ್ಲಿರುವ ಎಲ್ಲಾ ಸೆಕ್ರೆಟರಿಗಳು, ಆಫೀಸರುಗಳು ಆ ಭಾಗದ ಭೂಪಟವನ್ನು ತಮ್ಮ ಆಫೀಸಿನಲ್ಲಿಟ್ಟುಕೊಂಡು ನೋಡಿದರೆ ಎಷ್ಟರಮಟ್ಟಿಗೆ ಹೈದರಾಬಾದ್ ಕರ್ನಾಟಕ ಭಾಗಗಳಿಗೆ ಸೌಕರ್ಯ ದೊರಕಿದೆ ಎಂಬುದು ಗೊತ್ತಾಗುತ್ತದೆ.

ಒಂದೆರಡು ದಿವಸಗಳು ಅಂತಹ ಭೂಪಟವನ್ನು ಈ ಅಸೆಂಬ್ಲಿ ಹಾಲನಲ್ಲಿಯೂ ಹಾಕಿದರೆ ಎಲ್ಲ ಸದಸ್ಯರಿಗೂ ಎಲ್ಲೆಲ್ಲಿ ಎಷ್ಟೆಷ್ಟರ ಮಟ್ಟಿಗೆ ಸರ್ಕಾರದವರು ಸೌಕರ್ಯಗಳನ್ನು ಜನಗಳಿಗೆ ಮಾಡಿಕೊಡುತ್ತಿದ್ದಾರೆಂಬುದು ಅರ್ಥವಾಗುತ್ತದೆ ಮತ್ತು ಮುಖ್ಯವಾಗಿ ಹೈದರಾಬಾದ್ ಕರ್ನಾಟಕಕ್ಕೆ ಎಷ್ಟು ಅನ್ಯಾಯವಾಗಿದೆಯೆಂಬುದೂ ಸಹ ತಿಳಿಯುತ್ತದೆ. ನಿಜವಾಗಿ ನಮ್ಮ ಭಾಗಕ್ಕೆ ಎಷ್ಟೋ ವರ್ಷಗಳಿಂದ ಯಾವ ಸೌಕರ್ಯವನ್ನೂ ಕೊಡದೆ ಕಡೆಗಾಣಿಸಿದ್ದಾರೆಂಬುದು ಮಾನ್ಯ ಸದಸ್ಯರೆಲ್ಲರಿಗೂ ಮತ್ತು ಮಾನ್ಯ ಮಂತ್ರಿಗಳಿಗೂ ತಿಳಿದು ಬರುತ್ತದೆ. ಈಗಾಗಲೇ ಆ ವಿಷಯ ಅನೇಕರಿಗೆ ತಿಳಿದಿದೆಯೆಂದು ನಾನು ಭಾವಿಸುತ್ತೇನೆ.

### ಪೊಲೀಸ್ ಇಲಾಖೆ

ಇನ್ನು ಪೊಲೀಸ್ ಇಲಾಖೆಯ ವಿಚಾರ. ಅದರ ವೆಚ್ಚವನ್ನು ಬಹಳವಾಗಿ ತೋರಿಸುತ್ತಿದ್ದಾರೆ. ಅದು ಯಾವ ರೀತಿ ಆಗುತ್ತದೋ ಗೊತ್ತಾಗಲಿಲ್ಲ. ಕಾನ್ ಸ್ಟೇಬಲ್ಸ್ ಹಳ್ಳಿಯಿಂದ ಹಳ್ಳಿಗೆ ನಡೆದುಕೊಂಡು ಹೋಗುತ್ತಿದ್ದರೂ ಟಿ.ಎ. ಮತ್ತು ಡಿ.ಎ. ತೆಗೆದುಕೊಳ್ಳುತ್ತಾರೆ. ಒಂದು ವೇಳೆ ಪೊಲೀಸ್ ಆಫೀಸರ್ಸ್ ಎಲ್ಲೊ ಒಂದು ಊರಿನಲ್ಲಿರುತ್ತಾರೆನ್ನೋಣ. ಅವರ ಮಕ್ಕಳನ್ನು ಶಾಲೆಗೆ ಕಳುಹಿಸಬೇಕೆಂದು ಪೊಲೀಸ್ ಮೋಟಾರನ್ನು ಉಪಯೋಗಿಸುತ್ತಾರೆ. ವ್ಯಾಪಾರ ಉದ್ಯೋಗಗಳಿಗೋಸ್ಕರ ಉಪಯೋಗ ಮಾಡುತ್ತಾರೆ. ಯಾರಾದರೂ ಒಬ್ಬ ಪೊಲೀಸ್ ಆಫೀಸರ್ ಮನೆಯಲ್ಲಿ ಲಗ್ನವಾದರೆ ಸರ್ಕಾರೀ ಪೊಲೀಸ್ ವ್ಯಾನ್ ಬೇಕಾಗುತ್ತದೆ. ಆ ವ್ಯಾನುಗಳಲ್ಲಿ ಒಯ್ಯುವುದು ಇಂತಹ ವೇಸ್ಟ್ ಎಕ್ಸ್‌ಪೆಂಡಿಚರನ್ನು ಕೂಡಲೇ ಸರಕಾರದವರು ನಿಲ್ಲಿಸುವ ವ್ಯವಸ್ಥೆ ಮಾಡಬೇಕೆಂದು ನನ್ನ ಸಲಹೆ.

### ಲೇಬರ್ ಡಿಪಾರ್ಟ್‌ಮೆಂಟ್

ಇನ್ನು ಲೇಬರ್ ಡಿಪಾರ್ಟ್‌ಮೆಂಟ್ ವಿಚಾರ. ಈ ಇಲಾಖೆಯ ಬಗ್ಗೆ ಕಮ್ಯುನಿಸ್ಟ್ ಸದಸ್ಯರಾದ ಶ್ರೀಮಾನ್ ರಾಜಗೋಪಾಲ್ ಅವರೊಬ್ಬರು ಮಾತ್ರ ಮಾತನಾಡಿದರು. ಬೇರೆಯವರು ಮಾತನಾಡುವುದಕ್ಕೆ ಸರಿಯಾಗಿ ಆಸ್ಪದ ಸಿಕ್ಕಲಿಲ್ಲ. ಎಷ್ಟೋ ಮಂದಿ ಕ್ರಿಟಿಸಿಜಂ ಮತ್ತು ಸಜೇಷನ್ಸ್ ಕೊಟ್ಟರು ಎಂದು ಲೇಬರ್ ಮಿನಿಸ್ಟರ್ ಉತ್ತರ ಹೇಳುವಾಗ ಹೇಳಿದರು. ಆದರೆ ಆ ಸಲಹೆ ಮತ್ತು ಟೀಕೆಗಳಿಗೆ ಏನೇನು ಕ್ರಮ ತೆಗೆದುಕೊಂಡಿದ್ದೇವೆ ಎಂಬ ಬಗ್ಗೆ ಏನನ್ನೂ ಹೇಳಲಿಲ್ಲ. ಏನು ಉತ್ತರ ಹೇಳಿದರೋ ನನಗೆ ಅರ್ಥವಾಗಲಿಲ್ಲ. ಈ ಲೇಬರ್ ಇಲಾಖೆಯಲ್ಲಿ ಮೂರು ನಾಲ್ಕು ಲಕ್ಷ ಜನರು ಕೆಲಸ ಮಾಡುತ್ತಿದ್ದಾರೆ. ಸರ್ಕಾರದವರು ಈ ಇಲಾಖೆಗೋಸ್ಕರ 75,56,200 ರೂಪಾಯಿಗಳನ್ನು ಖರ್ಚು ಮಾಡುತ್ತಿದ್ದಾರೆ. ಲೇಬರ್ ಇಲಾಖೆಯಲ್ಲಿ ಹೆಚ್ಚಿಗೆ ಕನ್‌ಸಿಲಿಯೇಷನ್ ಆಫೀಸರ್ಸ್ ಕೆಲಸ ಚೆನ್ನಾಗಿ ಆಗುತ್ತಿಲ್ಲ. ಕಡಿಮೆ ಮಾಡುವುದಕ್ಕೋಸ್ಕರ ವ್ಯವಸ್ಥೆ ಮಾಡುತ್ತಿದ್ದಾರೋ ಏನೋ ಗೊತ್ತಿಲ್ಲ. ಆದಾಗಬಾರದು. ಎಷ್ಟೋ ವೇಳೆ ಸರಿಯಾಗಿ ಕೇಸುಗಳನ್ನು ಇಂಡಸ್ಟ್ರಿಯಲ್ ಟ್ರಿಬ್ಯೂನರ್ಲಗೆ ರೆಫೆರ್ ಮಾಡುವುದೇ ಇಲ್ಲ. ಹೀಗಾಗಿ ಲೇಬರ್ ಇಲಾಖೆಗೆ ಸಂಬಂಧಪಟ್ಟ ಕೇಸುಗಳು ಇನ್ನೂ ಪರಿಶೀಲನೆಯಾಗದೆ ಹೆಚ್ಚಾಗಿ ಪೆಂಡಿಂಗ್‌ನಲ್ಲಿಯೇ ಇವೆ.

## ವೇಜ್ ಬೋರ್ಡ್ ವಿಷಯ

ಇನ್ನು ವೇಜ್ ಬೋರ್ಡ್ ವಿಷಯ. ಈ ಬಗ್ಗೆ ಯಾವಾಗಲೂ ಕೆಲಸಗಾರರು ಗದ್ದಲ ಮಾಡುತ್ತಲೇ ಇರುತ್ತಾರೆ. ಈ ಡಿಮ್ಯಾಂಡ್ ಸುಮಾರು ಮೂರು ನಾಲ್ಕು ವರ್ಷಗಳಿಂದಲೂ ಇದೆ. ಅದನ್ನೇನ್ನೋ ನೇಮಿಸುತ್ತಾರೆ. ಆದರೆ ಆ ಬೋರ್ಡಿನಿಂದ ವರದಿ ಕೊಡಲಿಕ್ಕೆ 4-5-6 ತಿಂಗಳುಗಳನ್ನಾದರೂ ಮಾಡುತ್ತಾರೆ. ಆ ವರದಿ ಬಂದನಂತರ ವಾದರೂ ಅದನ್ನು ನೈತಿಕವಾಗಿ ಅಮಲಿನಲ್ಲಿ ತರದೇ ಹೋದರೆ ಏನೂ ಪ್ರಯೋಜನವಿಲ್ಲ. ಆ ರೀತಿ ಒಂದು ನಿಯಮವನ್ನು ಸಹ ಮಾಡುತ್ತಿಲ್ಲ. ಆದ್ದರಿಂದ ಈ ವಿಚಾರದಲ್ಲಿ ಸರ್ಕಾರದವರು ಕೂಡಲೇ ಒಂದು ತಕ್ಕ ಕ್ರಮವನ್ನು ತಗೆದುಕೊಳ್ಳಬೇಕೆಂದು ನಾನು ಹೇಳುತ್ತೇನೆ. ಉದಾ : ಹೇಳುವುದಾದರೆ, 1953-54ರಲ್ಲಿ ಒಂದು ಸಾರಿ ಟೆಕ್ಸ್‌ಟೈಲ್ ಮಿಲ್‌ನವರು ಅಜಿಟೇಷನ್ ಮಾಡಿದ ನಂತರ ಒಂದು ವೇಜ್ ಬೋರ್ಡ್ ರಚನೆಯಾಯಿತು. 1959-60ರಲ್ಲಿ ಒಂದು ವರದಿ ಬಂತು. ಕೇವಲ ಒಂದೆರಡು ವಿಚಾರಗಳನ್ನು ಬಿಟ್ಟರೆ ಮತ್ತಾವ ಗುರಿ ಸಾಧನೆಯನ್ನೂ ಲೇಬರ್ ಬೋರ್ಡಿನವರು ಇಂಪ್ಲಿಮೆಂಟ್ ಮಾಡಲಿಲ್ಲ. ಆದಷ್ಟು ಜಾಗ್ರತೆಯಾಗಿ ಈ ಸರ್ಕಾರಕ್ಕೆ ಈ ಬಗ್ಗೆ ಜಾರಿಗೆ ತರಲು ತೊಂದರೆಯಾದರೂ ಬೇರೆಯವರು ಪುನ: ಸ್ಟಗಲ್ ಮಾಡುವುದಕ್ಕೆ ಮುಂಚೆಯೇ ಕೆಲವು ಮುಂಜಾಗರೂಕತೆಯ ಕ್ರಮಗಳನ್ನು ತೆಗೆದುಕೊಳ್ಳಬೇಕು. ಆ ರೀತಿ ಮಾಡದೆ ಸುಮ್ಮನೆ ಪೊಲೀಸ್ ಬಂದೋಬಸ್ತ್ ಹಾಕುತ್ತಾರೆ, ಮ್ಯಾನೇಜಮೆಂಟ್‌ನವರು ಇದನ್ನು ನೋಡಿ ನೋಡಿ ಸಾಕಾಗಿ ಕೊನೆಗೆ ಅವರೇ ತಕ್ಕ ಕ್ರಮ ತೆಗೆದುಕೊಳ್ಳುತ್ತಾರೆ. ಸರ್ಕಾರ ಇಷ್ಟು ಮಾತ್ರ ಮಾಡುವುದಕ್ಕೆ ತಯಾರು ಇಲ್ಲವೆಂದರೆ ಬಹಳವಾಗಿ ನನ್ನ ಮನಸ್ಸಿಗೆ ನೋವಾಗುತ್ತದೆ. ಅದಕ್ಕೆ ಕಾರಣ ಇವರಿಗೆ ಚುನಾವಣೆಯ ಸಮಯ ಬಂದಾಗ ಅವರು ಎಲ್ಲರೂ ದುಡ್ಡು ಕೊಡುತ್ತಾರೆ. ಮೋಟಾರ್ ಕೊಡುತ್ತಾರೆ ಪೆಟ್ರೋಲ್ ಕೊಡುತ್ತಾರೆ. ಇದೆಲ್ಲಾ ಕಾರಣದಿಂದ ಮಾಲೀಕರ ಮೇಲೆ ಅಷ್ಟಾಗಿ ಕ್ರಮ ತೆಗೆದುಕೊಳ್ಳುವುದರಲ್ಲಿ ಯೋಚನೆ ಮಾಡುತ್ತಾರೆ. ಆ ಬೋರ್ಡಿನಲ್ಲಿ ಮ್ಯಾನೇಜ್‌ಮೆಂಟ್ ನವರ ಪ್ರತಿನಿಧಿ ಇರುತ್ತಾರೆ, ಲೇಬರ್ ಪ್ರತಿನಿಧಿ ಇರುತ್ತಾನೆ, ಸರ್ಕಾರದ ಪರವಾಗಿ ಪ್ರತಿನಿಧಿ ಇರುತ್ತಾನೆ, ಇವರೆಲ್ಲರೂ ಇರತಕ್ಕ ವೇಜ್ ಬೋರ್ಡ್‌ನಲ್ಲಿ ತೀರ್ಮಾನವಾದಂತೆ ಕೆಲಸ ಕಾರ್ಯಗಳನ್ನು ಜಾಗ್ರತೆಯಾಗಿ ಜಾರಿಗೆ ತರಲು ಸರ್ಕಾರದವರು ಲಕ್ಷ್ಯ ಕೊಡಬೇಕು. ಇವತ್ತು ನಮ್ಮ ದೇಶದಲ್ಲಿ ಮಜದೂರ್ ವರ್ಕರ್ಸ್ ಭಾರಿ ಭಾರೀ ಕೆಲಸಗಳನ್ನು ಮಾಡುತ್ತಾರೆ. ಅವರು ದೇಶದ ಸಂಪತ್ತನ್ನೂ ಸಹ ಹೆಚ್ಚಿಗೆ ಮಾಡುತ್ತಾರೆ. ಅಂತಹವರ ಕಡೆ ಸರ್ಕಾರದವರ ಲಕ್ಷ್ಯ ಹೆಚ್ಚು ಇರಬೇಕು. ಆದ್ದರಿಂದ ಸರ್ಕಾರದವರು ಇವರ ಯೋಗಕ್ಷೇಮದ ಬಗ್ಗೆ ನಿರ್ಲಕ್ಷ್ಯ ಮಾಡದೆ ಈ ಲೇಬರ್ ಪ್ರಾಬ್ಲಮ್‌ಗಳನ್ನು ಬಹಳ ಸೀರಿಯಸ್ಸಾಗಿ ತೆಗೆದುಕೊಂಡು ವಿಚಾರಮಾಡಬೇಕಾಗಿದೆ. ಉದಾಹರಣೆಗೆ ದಾಂಡೇಲಿಯಲ್ಲಿ ಯಾವ ರೀತಿ ಕೂಲಿಗಾರರ ಕಂದಾಯವನ್ನು ವಸೂಲು ಮಾಡಿ ಸರ್ಕಾರದ ಆರ್ಥಿಕ ಪರಿಸ್ಥಿತಿಯನ್ನು ಹೆಚ್ಚಿಸಲಿಕ್ಕೆ ಕಾರಣರಾದರು ಎಂಬುದನ್ನು ಯೋಚಿಸಬೇಕು. ಅವರು ತಮ್ಮ ತೆರಿಗೆಯನ್ನು ಕೊಡಲು ಸಿದ್ಧರಾಗಿದ್ದಾರೆ.

(2) ಆಯವ್ಯಯ ಅಂದಾಜು 1962-63 - ಅನುದಾನಗಳ ಬೇಡಿಕೆಗಳ ಕುರಿತು

* ಶ್ರೀ ಗಂಗಾಧರ್ ನಮೋಶಿ:- (ಗುಲಬರ್ಗಾ):

ಮಾನ್ಯ ಅಧ್ಯಕ್ಷರೆ, ಜನರಲ್ ಅಡ್ಮಿನಿಸ್ಟ್ರೇಷನ್ ಬೇಡಿಕೆ ಸಂಬಂಧದಲ್ಲಿ ಮಾತನಾಡುತ್ತಾ, ನಾನು ಕೆಲವು ವಿಷಯಗಳನ್ನು ಸರಕಾರದ ಗಮನಕ್ಕೆ ತರಬೇಕೆಂದು ಇಚ್ಛಿಸುತ್ತೇನೆ. ಶ್ರೀಮಾನ್ ನಿಜಲಿಂಗಪ್ಪನವರು, ಒಳ್ಳೆಯ ಹೆಸರನ್ನು ಪಡೆದಿರತಕ್ಕಂಥವರು, ನೀತಿವಂತರೂ ಆಗಿದ್ದಾರೆ. ನಾವು ಹೇಳುವ ವಿಷಯಗಳನ್ನು ಮನಗಂಡು ಅವರು ಆಡಳಿತವನ್ನು ಸುಧಾರಣೆ ಮಾಡುತ್ತಾರೆಂಬ ಆಶೆ ನಮಗಿದೆ. ಆದರೆ, ಅವರು ಬೇರೆ ಪಾರ್ಟಿ ಜನರ ಮಾತುಗಳನ್ನು ಕೇಳಿಕೊಂಡು ಎಷ್ಟೋ ತಪ್ಪುಗಳನ್ನು ಮಾಡುತ್ತಿದ್ದಾರೆ ಎಂದು ಅನೇಕರು ಹೇಳುತ್ತಿದ್ದಾರೆ. ದಯವಿಟ್ಟು ಇಂತಹದಕ್ಕೆ ಆಸ್ಪದ ಕೊಡಕೂಡದೆಂದು ನಾನು ಅವರನ್ನು ಕೇಳಿಕೊಳ್ಳುತ್ತೇನೆ.

ಇಷ್ಟೇ ಅಲ್ಲ. ನನ್ನ ಅನುಭವಕ್ಕೆ ಬಂದಿರುವ ಮಾತುಗಳನ್ನೇ ಹೇಳುವುದಾದರೆ, ಆಫೀಸರುಗಳಲ್ಲಿ ಕೆಲವರು ಒಳ್ಳೆಯರಿದ್ದಾರೆ, ಕೆಲವರು ಕೆಟ್ಟವರಿದ್ದಾರೆ. ಈಗ ನಾನು ನೋಡಿರುವಂತೆ ಎಷ್ಟೋ ವೇಳೆ ಒಳ್ಳೆಯ ಆಫೀಸರುಗಳಿಗೆ ತೊಂದರೆ ಇದೆ. ನಿಮ್ಮಲ್ಲಿರತಕ್ಕ ಎರಡೂ ಪಾರ್ಟಿಗಳಲ್ಲಿ, ಒಂದು ಪಾರ್ಟಿಯವರು ಹೋಗಿ ಹೀಗೆ ಮಾಡಿ ಹಾಗೆ ಮಾಡಬೇಡಿ ಎಂದು ಹೇಳಿದರೆ, ಇನ್ನೊಂದು ಪಾರ್ಟಿಯವರು ಹೋಗಿ ಬೇರೆ ರೀತಿಯಲ್ಲಿ ಮಾಡಬೇಕೆಂದು ಒತ್ತಾಯ ಮಾಡುತ್ತಾರೆ.

ಒಬ್ಬ ಸದಸ್ಯರು:- ನಿಮ್ಮ ಕಡೆಯವರೂ ಶಿಫಾರಸ್ಸು ಮಾಡುತ್ತಾರಲ್ಲ;

ಶ್ರೀ **ಗಂಗಾಧರ** ನಮೋಶಿ: ನಾವೇನಿದ್ದರೂ ಇಂಥವರು ಇಲ್ಲಿ ಚೆನ್ನಾಗಿ ಕೆಲಸ ಮಾಡುತ್ತಿದ್ದಾರೆ, ಅವರನ್ನು ಟ್ರಾನ್ಸ್‌ಫರ್ ಮಾಡಬೇಡಿ ಎಂದು ಹೇಳಿರಬಹುದು. ಆದರೆ ನಿಮ್ಮವರು ತಾವು ಹೇಳಿದಂತೆ ಮಾಡದೇ ಹೋದರೆ ಆ ಒಳ್ಳೆಯ ಆಫೀಸರ್ ಮೇಲೆ ದೂರನ್ನು ಕೊಟ್ಟು ಅವರನ್ನು ಕಷ್ಟಕ್ಕೀಡು ಮಾಡಿರುವ ಸಂದರ್ಭಗಳುಂಟು. ಈ ಅಂಶವನ್ನು ಸರ್ಕಾರದವರು ಲಕ್ಷ್ಯದಲ್ಲಿಡಬೇಕೆಂದು ಹೇಳುತ್ತೇನೆ.

ಇನ್ನೊಂದು ರೀತಿಯ ನಡವಳಿಕೆ ಎಂದರೆ, ಕೆಲವು ಆಫೀಸರುಗಳು ಲಂಚತಿನ್ನತಕ್ಕ ಆಫೀಸರುಗಳು ಈ ರೀತಿ ಕಾಂಗ್ರೆಸ್ಸಿನವರು ಹೇಳಿದಂತೆ ತಪ್ಪುಗಳನ್ನು ಮಾಡಿ, ಆ ಮೇಲೆ ಕೇಳಿದಾಗ "ನಾನೇನು ಮಾಡಲಿ, ಕಾಂಗ್ರೆಸ್ಸಿನವರು ಹೇಳಿದರು, ನಾನು ಮಾಡಿದೆ" ನೀನು ಸಂಸಾರದೊಂದಿಗ; ದೊಡ್ಡ ಮಗಳ ಮದುವೆಗೆ ಎರಡು ಸಾವಿರ ರೂಪಾಯಿ ವರಕ್ಷಿಣೆ ಕೇಳುತ್ತಾರೆ. ನೀನು ಹೇಳಿದಂತೆ ಮಾಡದೆ ಇದ್ದರೇ ನಿನ್ನ ನೌಕರಿಯೇ ಉಳಿಯುವುದಿಲ್ಲವೆಂದು ಹೆದರಿಸುತ್ತಾರೆ, ಆದ್ದರಿಂದ ಮಾಡಿದೆ ಎನ್ನುತ್ತಾರೆ. ಆದ್ದರಿಂದ ಈಗಿರತಕ್ಕ ಸರ್ಕಾರದವರು ನಿಮ್ಮ ಕಾಂಗ್ರೆಸ್ ಮಿತ್ರರು ಈ ರೀತಿ ಮಾಡುತ್ತಿರುವದನ್ನು ಗಮನಿಸಬೇಕೆಂದು ಹೇಳುತ್ತೇನೆ.

* ವಿಧಾನಸಭೆಯ ನಡವಳಿಕೆಯ ದಿನಾಂಕ. 12ನೇ ಜುಲೈ 1962

ಆ ಮೇಲೆ, ನಾನ್-ಆಫಿಷಿಯಲ್ ರೆಪ್ರೆಸೆಂಟೇಷನ್ ಇರಬೇಕೆಂದಿರುವ ಕೆಲವು ಖಾಸಗಿ ಕಮಿಟಿಗಳಲ್ಲಿ ತಾವು ಕೇವಲ ಕಾಂಗ್ರೆಸ್ ಸದಸ್ಯರನ್ನೇ ಹಾಕುತ್ತಿದ್ದೀರಿ. ಈಗ 5 ವರ್ಷಗಳ ಹಿಂದಿನಿಂದ ಗುಲಬರ್ಗಾದಲ್ಲಿ ಕಿಸಾನ ಸಭೆ ಎಂದು ಕೆಲಸ ಮಾಡಿಕೊಂಡಿದ್ದು 3000 ದಷ್ಟು ಸದಸ್ಯ ಸಂಖ್ಯೆಯನ್ನು ಹೊಂದಿದ್ದರೂ, ಅರ್ಧ ಭಾಗದಷ್ಟು ಪ್ರಾತಿನಿಧ್ಯ ಮಾರ್ಕೆಟ್‌ನಲ್ಲಿ ನಮಗಿದ್ದರೂ, ನಮ್ಮವರಿಗೆ ಪ್ರಾತಿನಿಧ್ಯ ಕೊಡಿ ಎಂದರೆ ಅದಕ್ಕೆ ನೀವು ತಯಾರಾಗಿಲ್ಲ : ಕಾಂಗ್ರೆಸ್ಸಿನವರೇ, ಬಹುಸಂಖ್ಯಾತರಾಗಿದ್ದರೂ ಕೂಡಾ ಈ ಕಮಿಟಿಗಳಲ್ಲಿ 4 ಜನ ನಮ್ಮವರೂ ಇದ್ದರೆ ಮನಸ್ಸಿಗೆ ಬಂದಂತೆ ಕೆಲಸಗಳು ನಡೆಯುವುದಿಲ್ಲ. ಒಳ್ಳೆಯ ಆಡಳಿತ ವಿದೆ, ಮೈಸೂರಿನಲ್ಲಿ ಒಳ್ಳೆಯ ಸರ್ಕಾರವಿದೆ ಎಂದು ಹೆಸರು ಬಂದರೆ ಅದು ಕಾಂಗ್ರೆಸ್‌ಗೆ ಗೌರವ ತರುವುದಕ್ಕಾಗಿ ಯಾದರೂ ಇತರ ಪಾರ್ಟಿಯವರಿಗೆ ಪ್ರಾತಿನಿಧ್ಯ ಕೊಡಿ, ನೀವು ಬೇಕಾದರೆ ಮೆಜಾರಿಟಿಯಲ್ಲಿಯೇ ಇದ್ದರೂ ಈ ರೀತಿ ಮಾಡುವುದರಿಂದ ಒಳ್ಳೆಯ ರೀತಿಯಲ್ಲಿ ಕೆಲಸ ನಡೆಯುವಂತೆ ಆಗುತ್ತದೆಂದು ನನ್ನ ಅಭಿಪ್ರಾಯ.

ಇನ್ನೊಂದು ವಿಷಯ; ಈಗ ಆಫೀಸುಗಳಲ್ಲಿ ಎಲ್ಲಿ ನೋಡಿದರೂ ಪ್ರಮೋಷನ್‌ಗಳು, ಫೇವರೇಟಿಸಮ್, ಕಾಸ್ಟೀಜಮ್ ಮೇಲೆ ನಡೆದಿದೆ. ಇದ್ನೇ ದೃಷ್ಟಿಯಲ್ಲಿಟ್ಟು ಕೊಂಡು ಒಬ್ಬರು ಆಫೀಸರನ್ನು ಯೋಗ್ಯರಲ್ಲವರೆಂದು ಹೇಳಿ ಮತ್ತೊಬ್ಬ ಆಫೀಸರನ್ನು ಅವರ ಮಲೆ ಹಾಕುವುದು ತಮ್ಮವರು, ತಮ್ಮ ಜಾತಿಯವರೆಂದು ಏನೂ ತಿಳಿಯದವರನ್ನು ಇತರರಿಗೆ ಅನ್ಯಾಯ ಮಾಡಿ ಪ್ರಮೋಷನ್ ಕೊಟ್ಟ ಮೇಲೆ ಕೊಡಿಸುವುದು. ಆಗ ಕೆಳ ನೌಕರರು ಆಫೀಸರರಿಗೆ ಏನು ಬರುತ್ತದೆ ಏನೆನ್ನುವುದು. ಇವೆಲ್ಲಾ ನಡೆಯುತ್ತಿವೆ. ಇದರ ಬಗ್ಗೆಯೂ ತಾವು ಗಮನ ಕೊಡಬೇಕೆಂದು ಹೇಳುತ್ತೇನೆ. ಉದಾಹರಣಾರ್ಥವಾಗಿ ಹೇಳುವುದಾದರೆ ನಮ್ಮ ಕೊಪ್ಪಲಿಗೆ ಬಂದಿರುವ ಲೇಬರ್ ಕಮಿಷನರನ್ನೇ ತೆಗೆದುಕೊಳ್ಳಿ. ಇದೊಂದು ಟೆಕ್ನಿಕಲ್ ಹುದ್ದೆ. ಅಂಥದರಲ್ಲಿ ಇವರಿಗೆ ಲೇಬರ್ ವಿಚಾರ ಎ.ಬಿ.ಸಿ.ಡಿ. ಗೊತ್ತಿಲ್ಲ. ಒಬ್ಬ ಸಾಮಾನ್ಯ ಮಜದೂರನಿಗೆ ಗೊತ್ತಿರುವುದೂ ಅವರಿಗೆ ತಿಳಿದಿಲ್ಲ. ಯಾವ ಉದ್ದೇಶದಿಂದ ಲೇಬರ್ ಕಮೀಶನ್ ರನ್ನಾಗಿ ಮಾಡಿದರೋ ಗೋತ್ತಿಲ್ಲ. ಇಂಥವರು ಬಂದ ಮೇಲೆ ಕೆಳಗಿನವರು ಹೇಗೆ ಕೆಲಸ ಮಾಡುತ್ತಾರೆ; ನೀವೆ ಯೋಚನೆ ಮಾಡಿ. ಇದೊಂದಲ್ಲ. ಇಂತಹ ಉದಾಹರಣೆಗಳು ಬೇಕಾದಷ್ಟಿವೆ. ಒಂದು ಇಲಾಖೆಯಲ್ಲಿ ಅನುಭವವಿಲ್ಲದವರನ್ನು ತಂದು ಕೆಳಗಿನವರ ಕೈಗೊಂಬೆಯಾಗಿ ಮಾಡುವುದು ಸರಿಯಲ್ಲಿವೆಂದು ನಾನು ಹೇಳುತ್ತೇನೆ.

ಇನ್ನೊಂದು ಸಲಹೆಯನ್ನು ನಾನು ಕೊಡಬಯಸುತ್ತೇನೆ. ಹೈದರಾಬಾದ್ ಸರ್ಕಾರದಲ್ಲಿ ಒಂದೊಂದು ಕೇಡರಿನಲ್ಲಿಯೂ ಕೆಲವು ವರ್ಷಗಳ ಅನುಭವ ಪಡೆದ ಮೇಲೆ ಮೇಲಿನ ಹುದ್ದೆಗೆ ನೇಮಿಸುತ್ತಿದ್ದರು. ಮೊದಲು ಲೋಕಲ್ ಅಡ್ಮಿನಿಸ್ಟ್ರೇಷನ್, ಆ ಮೇಲೆ ಲೇಬರ್ ಅಡ್ಮಿನಿಸ್ಟ್ರೇಷನ್, ರೆವಿನ್ಯೂ ಅಡ್ಮಿನಿಸ್ಟ್ರೇಷನ್‌ನಲ್ಲಿ ಕೆಲವು ಕಾಲ ಪೊಲೀಸ ಅಡ್ಮಿನಿಸ್ಟ್ರೇಷನ್‌ನಲ್ಲಿ ಕೆಲವು ದಿನ ಹೀಗೆ ನಾನಾ ಇಲಾಖೆಗಳಲ್ಲಿ ಅನುಭವ ಪಡೆದ ಮೇಲೆಯೇ ಮೇಲಿನ

ಪದವಿಗೆ ನೇಮಿಸುವ ಪದ್ಧತಿ ಇತ್ತು. ಈಗ ಇಲ್ಲಿ ನಡೆಯುವ ಮೈಸೂರು ಆಡಳಿತದಲ್ಲಿ ಅಂತಹದ್ದೇನೂ ಕಾಣುವುದಿಲ್ಲ. ಇಂದು ಇಲ್ಲಿ ಶಾಲಾ ಉಪಾಧ್ಯಾಯನಾಗಿರುವವನೂ, ನಾಳೆ ಪೊಲೀಸ್ ಸುಂಪರಿಂಟೆಂಡೆಂಟ್ ಆಗಿ ನೇಮಿಸಲ್ಪಡುತ್ತಾನೆ. ನಾಡಿದ್ದೂ ಸೆಕ್ರೆಟರಿಯೇಟ್‌ನಲ್ಲಿ ರೆವಿನ್ಯೂ ಸೆಕ್ರೆಟರಿಯಾಗುತ್ತಾನೆ.

ಶ್ರೀ ಸಿ.ಜೆ. ಮುಕ್ಕಣ್ಣಪ್ಪ: ನೀವು ಮೈಸೂರು ಅಧಿಕಾರಿಗಳನ್ನು ಏಕೆ ಅವಮಾನ ಮಾಡುವಿರಿ?

ಶ್ರೀ ಜೆ. ವೆಂಕಟಗೌಡ: ನನ್ನ ಸ್ನೇಹಿತ ಶ್ರೀ ಮುಕ್ಕಣ್ಣಪ್ಪನವರು ಅಪಾರ್ಥ ಮಾಡಿಕೊಂಡಿದ್ದಾರೆ. ಬೇರೆ ರಾಜ್ಯಗಳಲ್ಲಿರುವಂತೆ ಒಂದು ಪ್ರತ್ಯೇಕ ಕೇಡರ್‌ನ್ನು ಸೃಷ್ಟಿಸುತ್ತೇವೆ.

ಶ್ರೀ ಗಂಗಾಧರ ನಮೋಶಿ: ನಾನು ಮೈಸೂರು ಅಧಿಕಾರಿಗಳನ್ನು ಬ್ಲೇಮ್ ಮಾಡುತ್ತಿಲ್ಲ. ಆದರೆ ನಾನು ಮೈಸೂರಿನಲ್ಲಿ ಎಂಥ ವ್ಯವಸ್ಥೆ ಇದೆ ಎಂಬುದನ್ನು ಎತ್ತಿತೋರಿಸುತ್ತಿರುವೆ.

ಇನ್ನೊಂದು ವಿಷಯ. ನಮ್ಮ ಕಡೆ ಲೋಕಲ್ ಸೆಲ್ಫ್ ಗೌರ್ನ್‌ಮೆಂಟಿನಲ್ಲಿ ಟ್ರೈನಿಂಗ ಆಗಿರುವವನನ್ನು ಟ್ರೇಜರಿಯಲ್ಲಿ ಹಾಕಿದ್ದಾರೆ. ಅಂಥವರನ್ನು ರೆವಿನ್ಯೂ ಆಫೀಸಿನಲ್ಲಿ ಹಾಕುವುದು; ಸೂಕ್ತ. ಅದನ್ನು ಬಿಟ್ಟು ಟ್ರೇಜರಿಯಲ್ಲಿ ಹಾಕಿದರೆ, ಅವರು ಯಾವ ರೀತಿ ತಮ್ಮ ಕರ್ತವ್ಯವನ್ನು ಮಾಡಬೇಕು? ಈ ರೀತಿ ಅನೇಕ ಇಲಾಖೆಗಳಲ್ಲಿ ನಡೆದಿದೆ. ಅದನ್ನು ಕೂಡಲೇ ನಿಲ್ಲಿಸಬೇಕು.

ಇನ್ನೊಂದು ವಿಷಯವನ್ನು ಸರಕಾರದ ಗಮನಕ್ಕೆ ತರಬೇಕೆಂದಿದ್ದೇನೆ. ಮುಖ್ಯವಾಗಿ ಜವಾನರು ಮತ್ತು ಕಾನ್ಸ್‌ಟೇಬಲ್ ಇವರ ವಿಷಯ. ಈ ಜವಾನರನ್ನು ಮತ್ತು ಕಾನ್ಸ್‌ಟೇಬಲ್‌ರನ್ನು ಗುಲಬರ್ಗಾ ಮತ್ತು ಬೀದರ್ ಭಾಗಗಳಿಂದ ಮಂಗಳೂರಿಗೆ ಟ್ರಾನ್ಸ್‌ಫರ್ ಮಾಡುತ್ತಾರೆ. ಅವರು ಹೋಗುವುದಕ್ಕೂ ಬರುವುದಕ್ಕೂ ಅಷ್ಟು ದೂರಕ್ಕೆ ಸುಮಾರು 30-40 ರೂಪಾಯಿಗಳನ್ನು ಒಂದೊಂದು ಸಾರಿ ಖರ್ಚು ಮಾಡಬೇಕಾಗುತ್ತದೆ. ರೈಲ್ವೆ ಚಾರ್ಜ್ ಅಷ್ಟಾಗುತ್ತದೆ. ಆದ್ದರಿಂದ ದಯವಿಟ್ಟು ಪೊಲೀಸಿನವರು ಮತ್ತು ಜವಾನರು ಒಂದು ಜಿಲ್ಲೆಯಿಂದ ಇನ್ನೊಂದು ಜಿಲ್ಲೆಗೆ ಟ್ರಾನ್ಸ್‌ಫರ್ ಮಾಡಬಾರದು. ಎರಡನೆಯ ದರ್ಜೆಯ ಗುಮಾಸ್ತರನ್ನು ಕೇವಲ ಅಕ್ಕಪಕ್ಕದಲ್ಲಿರುವ ಭಾಗಗಳಿಗೆ ಟ್ರಾನ್ಸ್‌ಫರ್ ಮಾಡಬೇಕೆ ಹೊರತು ಬಹು ದೂರವಿರತಕ್ಕ ಪ್ರದೇಶಗಳಿಗೆ ಟ್ರಾನ್ಸ್‌ಫರ್ ಮಾಡಬಾರದು. ದೊಡ್ಡ ದೊಡ್ಡ ಆಫೀಸರುಗಳ ವಿಷಯ ಮಾತ್ರ ಬೇರೆ. ಈ ರೀತಿ ಮಾಡಿದರೆ ಆ ನೌಕರರ ಮಕ್ಕಳ ವಿದ್ಯಾಭ್ಯಾಸ ಅಭಿವೃದ್ಧಿ ಮತ್ತು ಇತರ ಸೌಕರ್ಯಗಳಿಗೆ ಬಹಳ ತೊಂದರೆಯಾಗುತ್ತದೆ. ಇಂತಹ ಕಾರಣಗಳಿಂದಲೇ ಪೊಲೀಸ್ ಕಾನ್ಸ್ಟೇಬಲ್ಸ್ ಲಂಚ ತಿನ್ನುವುದು ಸ್ವಾಭಾವಿಕವಾಗಿದೆ. ಇದನ್ನು ಸಾಮಾನ್ಯ ಆಡಳಿತ ಇಲಾಖೆಯವರು ಗಮನದಲ್ಲಿಡಬೇಕೆಂದು ನಾನು ಹೇಳುತ್ತೇನೆ.

ಇನ್ನು ಮಂತ್ರಿಗಳ ಟೂರ್ ವಿಷಯದಲ್ಲಿ ನಾನು ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ಸರ್ಕಾರದ ಕುರ್ಚಿ ಮೇಲೆ ಇಲ್ಲಿ ಕುಳಿತುಕೊಂಡು ಕೆಲಸ ಮಾಡಿ ಸಂಬಳ ತೆಗೆದುಕೊಳ್ಳುತ್ತಿರುವವರಿಗೆ ಬಡವರ ಕಷ್ಟ ಹೇಗೆ ತಿಳಿಯಬೇಕು? ಅವರಿಗೆ ಅಂಥಾದ್ದು ಯಾವ ತೊಂದರೆಯೂ ಇಲ್ಲ. ಆದರೂ ಇಂತಹ ಟೂರಿನಿಂದ ಸರ್ಕಾರಕ್ಕೆ ಬಹಳ ನಷ್ಟವಾಗುತ್ತಿದೆ. ಹೇಗೆಂದರೆ ಇವರು ಟೂರ್ ಏನಾದರೂ ಹಾಕಿಕೊಂಡರೆ ಯಾವ ಜಿಲ್ಲೆಗಾದರೂ ಬಂದರೆ ಡೆಪ್ಯುಟಿ ಕಮೀಷನರರ ಕೆಲಸ ಬಂದ್, ಡಿ.ಎಸ್.ಪಿ. ಕೆಲಸ ಬಂದ್ ಅವರಿಗೆ ಊಟ ಉಪಚಾರ ಮತ್ತು ಇತರ ಸೌಕರ್ಯಗಳ ಖರ್ಚು ಬಹಳ ಆಗುತ್ತದೆ. ಶ್ರೀಮಾನ್ ಮುಕ್ಕಣ್ಣನವರು ಹೇಳಿದ ಹಾಗೆ ಯಾವ ಹಳ್ಳಿಗೆ ಇವರು ಟೂರ್ ಹೋದರೂ ಈ ಆಫೀಸರುಗಳೆಲ್ಲಾ ಅವರ ಬೆನ್ನು ಹತ್ತಬೇಕು. ಇದರಿಂದ ಈ ಆಫೀಸುರಗಳನ್ನು ನೋಡಬೇಕೆಂದು ಬಂದಿರತಕ್ಕ ಜನರು ಇವರಿಗಾಗಿ ಗಂಟೆಗಳ ಕಾಲ, ದಿನಗಳ ಗಟ್ಟಲೆ, ತಿಂಗಳಾನುಗಟ್ಟಲೆ ಕಾದು ಕುಳಿತುಕೊಂಡಿದ್ದು ಅನಂತರ ಅವರ ಭೇಟಿ ಮಾಡಬೇಕಾಗಿದೆ. ಏನಾದರೂ ಒಂದು ಕೇಸು ಇಂತಹ ತಾರೀಖು ಅಡ್ಜರ್ನ್ ಆಗಿದೆಯೆಂದು ಹೇಳಿದರೆ ಆ ತಾರೀಖಿನಂದು ಡೆಪ್ಯುಟಿ ಕಮೀಷನರ್ ಮನೆಯಲ್ಲಿ ಕಾಯಲು ಮೈಸೂರಿನಲ್ಲಿದ್ದಾರೆ. ರಜೆ ತೆಗೆದುಕೊಂಡಿದ್ದಾರೆಂದು ಹೇಳುವುದು - ಹೀಗಾಗಿ ಆ ಕೇಸನ್ನು ಪುನ: ಇನ್ನೊಂದು ತಾರೀಖಿಗೆ ಅಡ್ಜರ್ನ್ ಮಾಡುವುದಾಗಿದೆ. ಹಾಗೆ ಮುಂದೆ ಹಾಕಿದ ತಾರೀಖಿನ ಹೊತ್ತಿಗೆ ಮತ್ತೊಬ್ಬ ಮಂತ್ರಿ ಟೂರ್ ಹಾಕಿಕೊಂಡು ಬರುತ್ತಾರೆ. ಅವರು ಏತಕ್ಕೆ ಬರುತ್ತಾರೆ. ಗೊತ್ತೇ ಗುಲಬರ್ಗಾದಲ್ಲಿ ಎಷ್ಟೋ ಸಾರಿ ಭಾರಿಕಲ್ಲು ಹಾಕುವುದಕ್ಕೆ ಬರುತ್ತಾರೆಯೋ ಹೊರತು ಮತ್ತೇನೂ ಇಲ್ಲ. ಇಲ್ಲಿಂದಲೇ ಒಂದು ಕಲ್ಲಿನ ಮೇಲೆ ನಿಮ್ಮ ಹೆಸರನ್ನು ಕೆತ್ತಿಸಿ ಅಲ್ಲಿ ಕಳುಹಿಸಿ ಸಾಕು. ಅದನ್ನು ಬಿಟ್ಟು ನೀವೇ ಅಲ್ಲಿಗೆ ಬಂದು ಏಕೆ ಕಲ್ಲು ಹಾಕುತ್ತೀರಿ. ಹತ್ತು ಇಂಜಿನಿಯರಿಂಗ್ ಕಾಲೇಜುಗಳಾಗಲಿ ಅಲ್ಲೆಲ್ಲಾ ಹತ್ತು ಕಲ್ಲುಗಳನ್ನು ಹಾಕುತ್ತೀರಿ. ನೀವು ಹಾಕಿ ಬಂದರೆ ಇನ್ನೊಬ್ಬರು ಬಂದು ಅದನ್ನು ತೆಗೆದು ಹಾಕುವುದು ಈಗ ಇಂತಹ ಕೆಲಸ ಕಾರ್ಯಗಳು ವಿಶೇಷವಾಗಿ ನಡೆಯುತ್ತಿವೆಯೇ ಹೊರತು ದೇಶಾಭಿಮಾನ ಕಾರ್ಯಗಳ ಕಡೆ ಸರ್ಕಾರ ಅಷ್ಟಾಗಿ ಗಮನ ಕೊಡುತ್ತಿಲ್ಲವೆಂದು ಹೇಳಿದರೆ ಅದೇನೂ ತಪ್ಪಾಗಲಾರದು. ಅಂತಹ ಕಲ್ಲಿನ ಮೇಲೆ ನಿಮ್ಮ ಹೆಸರುಗಳನ್ನು ಕೆತ್ತಿಸುವುದೇ ಒಂದು ದೊಡ್ಡ ಕೆಲಸ, ಡೆಪ್ಯುಟಿ ಕಮೀಷನರ್‌ನದು ಆಗಿದೆ. ಇದರಿಂದ ಅವರು ವಿಚಾರಣೆ ಮಾಡತಾ ಕೇಸುಗಳು ಆರಾರು - ಎಂಟೆಂಟು ತಿಂಗಳುಗಳಾದರೂ ವಿಚಾರಣೆಯಾಗದೆ ಉಳಿದಿವೆ. ಅದರಲ್ಲೂ ಮುಖ್ಯವಾಗಿ ರೆಂಟ್ ಕಂಟ್ರೋಲ್ ಕೇಸುಗಳು ವಿಪರೀತವಾಗಿ ತೀರ್ಮಾನವಾಗದೆ ಉಳಿದು ಹೋಗಿವೆ. ಇಲ್ಲಿ ಮನೆಯ ಕೆಲಸ; ಎಷ್ಟೋ ಸ್ಟೆ-ಆರ್ಡ್‌ರ್‌ಗಳನ್ನು ಕೊಟ್ಟಿರುತ್ತಾರೆ. ಆದ್ದರಿಂದ ಇನ್ನು ಮುಂದಾದರೂ ಮಂತ್ರಿಗಳು ಟೂರ್ ಮಾಡುವಾಗ ದಯವಿಟ್ಟು ಇಂತಹ ವಿಷಯಗಳನ್ನು ದೀರ್ಘವಾಗಿ ಪರಿಶೀಲನೆ ಮಾಡಬೇಕೆಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

### (3) ಮೈಸೂರು ಬಿಲ್ಡಿಂಗ್ ತೆರಿಗೆ ಮಸೂದೆ (1962) ಯ ಮೇಲಿನ ಚರ್ಚೆ*

ಸ್ವಾಮಿ, ಈ ಮಸೂದೆಯನ್ನು ಈ ಸಭೆಯ ಮುಂದೆ ಮಂಡಿಸುತ್ತಾ ಸರ್ಕಾರದವರು ಸ್ಟೇಟ್‌ಮೆಂಟ್ ಆಫ್ ಅಬ್ಜೆಕ್ಟ್ಸ್ ಅಂಡ್ ರೀಜನ್ಸ್ ಕೊಡುವ ಕಾಲಕ್ಕೆ, "ಆಲ್ ದ ಸ್ಟೇಟ್ಸ್ ಹ್ಯಾವ್ ಬೆಟರ್‌ಮೆಂಟ್ ಲೆವಿ ಆ್ಯಕ್ಟ್ಸ್ ಆನ್ ದೇರ ಸ್ಟ್ಯಾಟ್ಯೂಟ್ ಬುಕ್ಸ್ ಫಾರ್ ದ ರಿಕವರಿ ಆಫ್ ಆ ಪಾರ್ಟ್ ಆಫ್ ದ ಇನ್‌ಕ್ರಿಜಡ್ ವ್ಯಾಲ್ಯೂ ಆಫ್ ಲ್ಯಾಂಡ್ಸ್ ಡ್ಯೂಟು ಇರಿಗೇಷನ ಫ್ಯಾಸಿಲಿಟೀಸ್ " ["All the State have Betterment levy Acts on their Statute Books for the recovery of a part of the increased value lands due to irrigatoin facilities.All the State have Betterment levy Acts on their Statute Books for the recovery of a part of the increased value lands due to irrigatoin facilities.] ಎಂದು ಹೇಳಿದ್ದಾರೆ. ಇದನ್ನು ಯಾವ ಆಧಾರದ ಮೇಲೆ ಹೇಳಿದ್ದಾರೆಂಬುದು ನನಗೆ ಅರ್ಥವಾಗುವುದಿಲ್ಲ. ಬೆಟರ್‌ಮೆಂಟ್ ಲೆವಿ ಎಂದು ತೆಗೆದುಕೊಳ್ಳುತ್ತೇವೆ ಎಂದು ಹೇಳುವ ಕಾಲದಲ್ಲಿ ಮನೆಗಳನ್ನು ಕಟ್ಟುವವರಿಗೆ ಯಾವ ತರಹ ಸವಲತ್ತುಗಳನ್ನು (ಅನುಕೂಲತೆಗಳನ್ನು) ಕೊಡುತ್ತಾರೆಂಬುದನ್ನು ಹೇಳಲಿಲ್ಲ. ಮನೆಗಳನ್ನು ಕಟ್ಟುವವರಿಗೆ ಅನುಕೂಲತೆಗಳನ್ನು ಕೊಟ್ಟನಂತರ ಮುನಿಸಿಪಾಲಿಟಿಗಳವರು ಅವರಿಗೆ ಟ್ಯಾಕ್ಸ್‌ಗಳನ್ನು ಹಾಕಿಕೊಂಡು ಬಂದಿದ್ದಾರೆ. ಆದ್ದರಿಂದ ಮುನಿಸಿಪಾಲಿಟಿಗಳು ದಕ್ಷತೆಯಿಂದ ಕೆಲಸಗಳನ್ನು ಮಾಡಲು ಅವುಗಳಿಗೆ ಸರ್ಕಾರದವರು ರಕ್ಷಣೆಯನ್ನು ಕೊಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಇನ್ನೊಂದು ಬಿಲ್ಲು ಎಂದು ಇಮ್ಮೂವೆಬಲ್ ಪ್ರಾಪರ್ಟಿ ಟ್ಯಾಕ್ಸ್ ಬಿಲ್ ಬಂದನಂತರ ಈ ಮುನಿಸಿಪಾಲಿಟಿಗಳ ಗತಿಯೇನಾಗುತ್ತದೆಯೋ ದೇವರೇ ಬಲ್ಲ. ಈಗ ಮುನಿಸಿಪಾಲಿಟಿಗಳು ಎಂಟರ್‌ಟೈನ್‌ಮೆಂಟ್ ಟ್ಯಾಕ್ಸ್ ಇನ್‌ಕ್ರೀಜ್ ಮಾಡೋಣ ಎಂದರೆ ಅದನ್ನು ಈಗ ಸರ್ಕಾರದವರು ಇನ್‌ಕ್ರೀಜ್ ಮಾಡಿದ್ದಾರೆ. ಈಗಾಗಲೇ ಇಮ್ಮೂವೆಬಲ್ ಪ್ರಾಪರ್ಟಿ ಟ್ಯಾಕ್ಸ್ ಇನ್‌ಕ್ರೀಜ್ ಮಾಡಬೇಕೆಂದು ಅದನ್ನು ಸರ್ಕಾರದವರು ವಿಚಾರ ಮಾಡತ್ತಿದ್ದಾರೆ. ಈಗ ಗುಲ್ಬರ್ಗಾದಲ್ಲಿ ಕನ್‌ಸ್ಟ್ರಕ್ಷನ್ ಫೀ ಎಂದು ಕಲೆಕ್ಟ್ ಮಾಡುತ್ತಿದ್ದಾರೆ. ಇಂಥಾದೆಲ್ಲಾ ಆಗುವ ಕಾಲಕ್ಕೆ ಮನೆಗಳನ್ನು ಕಟ್ಟಲು ಯಾರು ಮುಂದೆ ಬರುತ್ತಾರೆಂಬುದನ್ನು ವಿಚಾರ ಮಾಡಬೇಕಾಗಿದೆ. ಕೆಲವರಲ್ಲಿ ಹಣ ಉಳಿದಿದೆ ಎಂದು ಪಟ್ಟಣಗಳಲ್ಲಿ ಈ ರೀತಿ ಹಣವನ್ನು ತೆಗೆದುಕೊಳ್ಳುವುದಕ್ಕೆ ಬಂದಿರುವುದನ್ನು ನೋಡಿದರೆ ನನಗೆ ಸಂಶಯ ಬರುತ್ತದೆ. ಈ ಹಣವನ್ನು ಬೇರೆ ರೀತಿಯಲ್ಲಿ ತೆಗೆದುಕೊಳ್ಳುವುದಕ್ಕೆ ಬರುತ್ತಿತ್ತು. ಇದನ್ನು ಮುನಿಸಿಪಾಲಿಟಿಗಳವರಿಗೇ ಬಿಟ್ಟಿದ್ದರೆ ಚೆನ್ನಾಗಿತ್ತು. ಬೆಟರ್‌ಮೆಂಟ್ ಲೆವಿ ಮತ್ತು ಮುನಿಸಿಪಲ್ ಇವುಗಳನ್ನು ಜನಗಳು ಕೊಡಬೇಕಾಗುತ್ತದೆ. ಈಗ ಪಟ್ಟಣಗಳಲ್ಲಿ ಮನೆಗಳ ಕೊರತೆ ಇದೆ. ಅವುಗಳನ್ನು ಕಟ್ಟಿಸುವ ಜವಾಬ್ದಾರಿಯನ್ನು ಸರ್ಕಾರದವರು

* ವಿಧಾನಸಭೆಯ ನಡವಳಿಕೆಯ ದಿನಾಂಕ. 20ನೇ ನವೆಂಬರ್, 1962

ತೆಗೆದುಕೊಳ್ಳುತ್ತಾರೆಯೇ ಎಂದು ನಾನು ಕೇಳುತ್ತೇನೆ. ಕಾರ್ಮಿಕರು ಮತ್ತು ಆಫೀಸುಗಳಲ್ಲಿ ಕೆಲಸ ಮಾಡತಕ್ಕ ಎನ್.ಜಿ.ಓ. ಗಳಿಗೆ ಮನೆಗಳನ್ನು ಕಟ್ಟಿಸಿಕೊಡುವ ಜವಾಬ್ದಾರಿಯನ್ನು ಸರ್ಕಾರದವರು ವಹಿಸಿಕೊಳ್ಳುತ್ತಾರೆಂದು ಗ್ಯಾರಂಟಿಯನ್ನು ಕೊಡುತ್ತಾರೆಯೇ ಎಂದು ನಾನು ಸರ್ಕಾರದವರನ್ನು ಕೇಳುತ್ತೇನೆ. ಈಗ ಲೋ ಇನ್‌ಕಂ ಗ್ರೂಪ್‌ನಲ್ಲಿ ಹೌಸಿಂಗ್ ಸ್ಕೀಮಿನಲ್ಲಿ ಸರ್ಕಾರದವರು ಮನೆಗಳನ್ನು ಕಟ್ಟಿಕೊಳ್ಳಲು ಸಾಲವನ್ನು ಕೊಡುತ್ತಿದ್ದಾರೆ. ಅವರು ಎಂಥವರಿಗೆ ಸಾಲವನ್ನು ಕೊಡುತ್ತಿದ್ದಾರೆಯೆಂದರೆ ಬೇರೆ ಬೇರೆಯವರ ಹೆಸರಿನಲ್ಲಿ ಅನೇಕ ಮನೆ ಗಳನ್ನು ಇಟ್ಟು ಕೊಂಡಿರುವವರಿಗೆ, ಎಕ್ಸ್ ಮಿನಿಸ್ಟರಿಗೆ, ಎಂ.ಎಲ್.ಎ. ಗಳಿಗೆ ಇಂಥವರಿಗೆ ಮಾತ್ರ ಮನೆಗಳನ್ನು ಕಟ್ಟಿಕೊಳ್ಳಲು ಸಾಲವನ್ನು ಕೊಡುತ್ತಿದ್ದಾರೆ. ಹೌಸ್ ಬಿಲ್ಡಿಂಗ್ ಸೊಸೈಟಿಯ ರೂಲ್ಸ್ ಪ್ರಕಾರ ಸ್ವಂತವಾಗಿ ಮನೆಯನ್ನು ಉಪಯೋಗಿಸುವವರಿಗೆ ಮಾತ್ರ ಮನೆಯನ್ನು ಕಟ್ಟಲು ಸಾಲವನ್ನು ಕೊಡಬೇಕೆಂದಿದೆ. ಆದರೆ ಈಗ ಕೆಲವರು ಸರ್ಕಾರದವರಿಂದ ಸಾಲವನ್ನು ತೆಗೆದುಕೊಂಡು ಮನೆಯನ್ನು ಕಟ್ಟಿಸಿ ಸರ್ಕಾರದವರಿಗೆ 200-300 ರೂಪಾಯಿಗಳ ಬಾಡಿಗೆಗೆ ಕೊಟ್ಟಿದ್ದಾರೆ. ಇಂಥವರಿಗೆಲ್ಲಾ ಲೋ ಇನ್‌ಕಂ ಗ್ರೂಪ್ ಹೌಸಿಂಗ್ ಸ್ಕೀಮಿನಲ್ಲಿ ಮನೆಗಳನ್ನು ಕಟ್ಟಲು ಸಾಲವನ್ನು ಕೊಟ್ಟಿದ್ದಾರೆ. ಈ ರೀತಿ ಸರ್ಕಾರದವರು ಬಿಲ್ಡಿಂಗ್ ಟ್ಯಾಕ್ಸ್, ಇಮ್ಮೂವೆಬಲ್ ಪ್ರಾಪರ್ಟಿ ಟ್ಯಾಕ್ಸ್ ಇತ್ಯಾದಿಗಳನ್ನು ಹಾಕುವುದಾದರೆ ಈಗ ಯಾರು ಯಾರು ಮನೆಗಳನ್ನು ಕಟ್ಟಿಸಿ ಬಾಡಿಗೆಗೆ ಕೊಟ್ಟಿದ್ದಾರೆಯೋ ಅವರೆಲ್ಲರೂ ಕೂಡ ಇನ್ನು ಮುಂದೆ ಮನೆ ಕಟ್ಟುವುದನ್ನು ಬಂದ್ ಮಾಡಿ ಬೇರೆ ಉದ್ಯೋಗವನ್ನು ಶುರು ಮಾಡುತ್ತಾರೆ. ಒಟ್ಟಿನಲ್ಲಿ ಈ ಬಿಲ್ಡಿಂಗ್ ಟ್ಯಾಕ್ಸ್ ಹಾಕುವುದರಿಂದ ಮಧ್ಯಮ ವರ್ಗದ ಜನಗಳಿಗೆ ಬಹಳ ತೊಂದರೆ ಯಾಗುತ್ತದೆ. ಅದಕ್ಕೋಸ್ಕರ ಈ ಮಸೂದೆಯನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ನಾನು ವಿನಂತಿ ಮಾಡುತ್ತೇನೆ.

ಈ ಟ್ಯಾಕ್ಸ್‌ನಲ್ಲಿ ಶೇಕಡ 10 ತೆಗೆದುಕೊಳ್ಳುತ್ತೀರಿ. ಅದು ಹೆಚ್ಚಾಗುತ್ತದೆ. ಇದರಲ್ಲಿ ಶೇಕಡ 5 ತೆಗೆದುಕೊಂಡು ಬಾಕಿಯನ್ನು ಮುನಿಸಿಪಾಲಿಟಿಗೆ ಕೊಡಬೇಕು. ಇಲ್ಲದೇ ಇದ್ದರೆ ಅದು ಬೆಳೆಯುವುದಿಲ್ಲ. ಉತ್ತರ ಕರ್ನಾಟಕ, ಹೈದರಾಬಾದ್ ಕರ್ನಾಟಕದಲ್ಲಿರುವ ಮುನಿಸಿಪಾಲಿಟಿಗಳ ಪರಿಸ್ಥಿತಿ ನೋಡಿದರೆ ರಸ್ತೆಗಳು ಚೆನ್ನಾಗಿಲ್ಲ. ಸ್ಯಾನಿಟೇಷನ್ ಕಂಡೀಷನ್ ಚೆನ್ನಾಗಿಲ್ಲ. ನೀರಿನ ಸೌಕರ್ಯ ಇಲ್ಲ; ದೀಪದ ಸೌಕರ್ಯವಿಲ್ಲ. ಯಾವುದೂ ಇಲ್ಲ. ಅಂದಮೇಲೆ ಯಾವ ಆಧಾರದ ಮೇಲೆ ಬೆಟರ್‌ಮೆಂಟ್ ಲೆವಿ ಹಚ್ಚಲಿಕ್ಕೆ ಅವಕಾಶವಿದೆ? ಈಗ ನೀವು ಯಾವ ಟ್ಯಾಕ್ಸ್ ಹಚ್ಚುತ್ತೇವೆ ಎಂದು ಹೇಳುತ್ತೀರಿ? ಇದು ಯಾವುದೇ ನೀತಿ, ಧರ್ಮದ ಮೇಲೆ ಅವಲಂಬಿಸಿಲ್ಲ. ಮತ್ತು ನಾನು ನಮ್ಮ ಮುನಿಸಿಪಲ್ ಮಿನಿಸ್ಟರಿಗೆ ಮನವಿ ಮಾಡಿಕೊಳ್ಳುವುದೇನೆಂದರೆ ಅಲ್ಲಿರತಕ್ಕ ಇಬ್ಬರು ಮಿನಿಸ್ಟರುಗಳೂ ಸಹ ಬರೀ ಸರ್ಕಾರದಲ್ಲಿ ಇದ್ದಾರೆ ಅಷ್ಟೇ ಹೊರತು. "ದೇ ಆರ್ ಮೋರ್ ಇಂಟರೆಸ್ಟೆಡ್ ಇನ್ ಗವರ್ನಮೆಂಟ್ ಅಫೇರ್ಸ್ ದ್ಯಾನ್ ಇನ್ ಮುನ್ಸಿಪಲ್ ಅಫೇರ್ಸ್." ["They are more interested in

Government Affairs than in Municiple Affairs."]. ಅದಕ್ಕೇ ನಾನು ಒಂದು ಸಲಹೆ ಕೊಡಬೇಕೆಂದು ಇದ್ದೇನೆ. ಅದೇನೆಂದರೆ ಮುನಿಸಿಪಲ್ ಮೆಂಬರ್ ಆಗಿದ್ದು ಮುನಿಸಿಪಾಲಿಟಿಗಳಲ್ಲಿ ಸೇವೆ ಸಲ್ಲಿಸುತ್ತಿರತಕ್ಕವರ ಪೈಕಿ ಎಂ.ಎಲ್.ಎ. ಆಗಿರುವವರು ಮಿನಿಸ್ಟರ್ ಆಗಿದ್ದರೆ ಅವರಿಗೆ ಎಲ್ಲಾ ವಿಷಯ ಗೊತ್ತಿರುತ್ತದೆ. ಅಂಥವರು ಮಿನಿಸ್ಟರ್ ಆಗಬೇಕು. ಮೊನ್ನೆ ಮುನಿಸಿಪಲ್ ಕಾನ್‌ಫರೆನ್ಸ್ ಆಯಿತು. ಸರ್ಕಾರದವರು ಮುನಿಸಿಪಾಲಿಟಿಗಳಿಗೆ ಕೊಡಬೇಕಾದ ಡ್ಯೂಸ್ ಎಷ್ಟೋ ವರ್ಷಗಳಿಂದ ಬಾಕಿ ಇದೆ. ಗುಲ್ಬರ್ಗಾದಲ್ಲಿ 8 ವರ್ಷ ಆಯಿತು. ಆ ಪ್ರಶ್ನೆಗೆ ಉತ್ತರ ಹೇಳಲಿಕ್ಕೆ ಬರಲಿಲ್ಲ. ಆದ್ದರಿಂದ ಈ ಇಮ್ಮೂವಬಲ್ ಪ್ರಾಪರ್ಟಿ ಟ್ಯಾಕ್ಸ್ ಮತ್ತು ಬಿಲ್ಡಿಂಗ್ ಟ್ಯಾಕ್ಸ್ ಈ ಎರಡು ಟ್ಯಾಕ್ಸುಗಳನ್ನು ನಮ್ಮ ಮುನಿಸಿಪಲ್ ಮಿನಿಸ್ಟರು ಒತ್ತಾಯ ಪಡಿಸಿ ಶೇಕಡಾ 5 ಮಾತ್ರ ಸರ್ಕಾರದವರು ಇಟ್ಟುಕೊಂಡು ಬಾಕಿದೆಲ್ಲಾವನ್ನು ಮುನಿಸಿಪಾಲಿಟಿಗಳಿಗೆ ಕೊಡುವಂತೆ ಮಾಡಬೇಕೆಂದು ಹೇಳಿ ಇಷ್ಟು ಅವಕಾಶ ಕೊಟ್ಟಿದ್ದಕ್ಕಾಗಿ ಅಧ್ಯಕ್ಷರನ್ನು ವಂದಿಸುತ್ತೇನೆ.

## (4) 1962-63ರ ಸಾಲಿನ ಬೇಡಿಕೆಗಳ ಮೇಲಿನ ಚರ್ಚೆ

ಅಧ್ಯಕ್ಷರೇ, ಇದುವರೆಗೂ ನಮ್ಮ ಬೇರೆ ಬೇರೆ ಪಕ್ಷಗಳ ಸದಸ್ಯರು ಮಾತನಾಡುತ್ತಾ ಇದ್ದರು. ಇವತ್ತು ತಮ್ಮ ಮಂಡಲ 14ಕ್ಕೆ ಹೋಗುತ್ತದೆಯೋ 16ಕ್ಕೆ ಹೋಗುತ್ತದೆಯೋ, 20ಕ್ಕೆ ಹೋಗುತ್ತದೆಯೋ ಗೊತ್ತಿಲ್ಲ. ಈಗ ಈ ಸಭೆಯಲ್ಲಿ ಮಾತ್ರ ಇಲ್ಲಿ ಇಬ್ಬರು ಮಂತ್ರಿಗಳು ಇದ್ದಾರೆ. ಅವರು ಕೇಳುವ ಹೇಳುವ ಎಲ್ಲಾ ವಿಷಯಗಳಿಗೂ ಹೇಗೆ ಉತ್ತರ ಕೊಡುತ್ತಾರೆ ಎಂಬ ಸಂಶಯ ನಮ್ಮ ಮುಂದೆ ಇದೆ.

ಡಿಮ್ಯಾಂಡ್ ನಂ.20 ಪ್ರತಿಯೊಂದು ಜಿಲ್ಲೆಯಲ್ಲೂ ಕೂಡ ಡಿಸ್ಟ್ರಿಕ್ಟ್ ಅಗ್ರಿಕಲ್ಚರಲ್ ಆಫೀಸ್ ಎಂಬುದು ಇದೆ. ಇದು ಯಾವ ಕೆಲಸ ಮಾಡುತ್ತದೆ, ಯಾವ ಕೆಲಸ ಮಾಡುತ್ತಿಲ್ಲ ಎನ್ನುವುದನ್ನು ಯಾರು ನೋಡುವುದಿಲ್ಲ ಎಂಬುದು ನನ್ನ ಭಾವನೆ. ನಮ್ಮಲ್ಲಿ ಎಳ್ಳು ಬಹಳ ಬೆಳೆಯುತಾರೆ. ಒಂದೊಂದು ಜಿಲ್ಲೆಯಲ್ಲಿ ಸುಮಾರು ಪ್ರತಿವರ್ಷ 50 ಲಕ್ಷಟನ್‌ಗಳಷ್ಟು ಎಳ್ಳಿನ ಬೆಳೆ ಬರುತ್ತದೆ. ಅದರಲ್ಲಿ 40 ಲಕ್ಷ ಸೇರು ಹುಳು ತಿಂದು ಬಿಡುತ್ತದೆ. ಒಂದು ವೇಳೆ ಅಗ್ರಿಕಲ್ಚರಲ್ ಆಫೀಸರ್ ಹತ್ತಿರ ಹೋಗಿ ಪರಿಹಾರ ಕೇಳಿದರೆ ಅದರ ಸಲುವಾಗಿ ನಮ್ಮ ಸರಕಾರದವರು ಔಷಧಿಯನ್ನೇ ಕಂಡು ಹಿಡಿದಿಲ್ಲ, ತಲೆಯೊಳಗಿನ ಹೇನನ್ನು ತೆಗೆದು ಹಾಕಿದ ಹಾಗೆ ತೆಗೆಯಬೇಕಾಗುತ್ತದೆ ಎಂದು ಹೇಳಿದ್ದಾರೆ. ಆದ್ದರಿಂದ ಅಗ್ರಿಕಲ್ಚರಲ್ ಡಿಪಾರ್ಟಮೆಂಟಿನವರಲ್ಲಿ ನಾನು ವಿನಂತಿ ಮಾಡುವುದೇನೆಂದರೆ ಇಷ್ಟು ದೊಡ್ಡ ಪ್ರಮಾಣದಲ್ಲಿ ಹಾಳಾಗುವ ಈ ಬೆಳೆ ಬಡವರಿಗೆ ಸೇರಿದ್ದು ಇದಕ್ಕೆ ತಕ್ಕ ಔಷಧಿಯನ್ನು ಕಂಡು ಹಿಡಿದು ಹುಳು ತಿಂದು ಹಾಕುವುದನ್ನು ನಿವಾರಣೆ ಮಾಡಬೇಕೆಂದು ಹೇಳುತ್ತೇನೆ.

ಎರಡನೆಯದು ಪಶುಪಾಲನೆಯ ವಿಷಯ

ನಾವು ಮೈಸೂರಿಗೆ ಬಂದ ಕೂಡಲೇ ದೊಡ್ಡ ದೊಡ್ಡ ಆಕಳುಗಳನ್ನು ನೋಡುತ್ತೇವೆ. ಬಹಳ ದಪ್ಪವಾಗಿ ಇವೆ. ಆದರೆ ನಮ್ಮ ಕಡೆ ನೋಡಿದರೆ ಅದರ ಸ್ಥಿತಿ ಬಹಳ ಚಿಂತಾಜನಕವಾಗಿದೆ. ಪಶು ಸಂಗೋಪನಾ ಕೇಂದ್ರ ಎಂದು ಪ್ರತಿಯೊಂದು ಜಿಲ್ಲಾ ಕೇಂದ್ರದಲ್ಲೂ ಮಾಡಿಕೊಂಡಿದ್ದಾರೆ. ಅಲ್ಲಿಗೆ ಹೋದರೆ ಕೋಳಿ ಮೊಟ್ಟೆಗಳು ಮಾತ್ರಸಿಗುತ್ತದೆ. ಅಲಿರತಕ್ಕ ಜವಾನರು ಅಲ್ಲಿಗೆ ಬರತಕ್ಕ ಮಿನಿಸ್ಟರುಗಳೇ ಕೋಳಿಗಳನ್ನು ತಿಂದು ಹಾಕುತ್ತಾರೆ. ಮತ್ತೇನೂ ಉಪಯೋಗವಾಗುವುದಿಲ್ಲವೆಂದು ಹೇಳುತ್ತಾರೆ. ಈ ರೀತಿಯಿಂದ ಪಶುಪಾಲನೆಯ ಸ್ಥಿತಿ ನಡೆದಿದೆ; ಸರಿಯಾದ ರೀತಿಯಲ್ಲಿ ಈ ಪಶುಪಾಲನೆಯ ಕಾರ್ಯ ಎಲ್ಲಾ ಜಿಲ್ಲೆಗಳಲ್ಲೂ ನಡೆಸಬೇಕೆಂದು ಆ ಸಂಬಂಧ ಇರತಕ್ಕ ಮಂತ್ರಿಗಳನ್ನು ಕೇಳಿಕೊಳ್ಳುತ್ತೇನೆ.

ಮೂರನೆಯದಾಗಿ, ವಿದ್ಯಾಭ್ಯಾಸದ ವಿಷಯ

ನಂತರ ವಿದ್ಯಾಭ್ಯಾಸದ ವಿಚಾರವಾಗಿ ಬಹಳವಾಗಿ ಹೇಳಿದ್ದಾರೆ. ನಾನು ಹೇಳುವುದೇನೆಂದರೆ, ಅಭ್ಯಾಸವನ್ನು ಪ್ರತಿ ವರ್ಷ ಬದಲಾಯಿಸುತ್ತಾ ಇರುತ್ತಾರೆ. ಅದು

ಯಾವ ಕಾರಣದಿಂದಲೋ ಇಲ್ಲ. ನಾನೊಂದು ಮಾತನ್ನು ಸ್ಪಷ್ಟವಾಗಿ ಹೇಳುವುದಾದರೆ ನನ್ನ ತಂದೆಯವರು ಓದಿದ ಪುಸ್ತಕವನ್ನು ನಾನು ಓದಿದ್ದೇನೆ. ಗಣಿತದ ಪುಸ್ತಕದಲ್ಲಿ ಎಷ್ಟು ವ್ಯತ್ಯಾಸ ವಿರುತ್ತದೆಯೋ ಗೊತ್ತಿಲ್ಲ. ಅದನ್ನು ಬದಲಾವಣೆ ಮಾಡುತ್ತಾ ಇರುತ್ತಾರೆ. ವಿದ್ಯಾ ಮಂತ್ರಿಗಳಲ್ಲಿ ವಿನಂತಿ ಮಾಡಿಕೊಳ್ಳುವುದೇನೆಂದರೆ 6 ವರ್ಷಗಳಿಗೆ ಮುಂಚಿತವಾಗಿ ಪುಸ್ತಕದ ಬದಲಾವಣೆ ಆಗಬಾರದು ಎಂದು ಒಂದು ನಿರ್ಧಾರಕ್ಕೆ ಬರಬೇಕು. ಇದರಂತೆಯೇ ಮಹಾರಾಷ್ಟ್ರ ಏಕೀಕರಣ ಸಮಿತಿಯೂ ಕೂಡಾ ಮರಾಠಿಯಲ್ಲಿ ಪುಸ್ತಕ ಸಿಗುವುದಿಲ್ಲ ಎಂದು ಹೇಳಿದ್ದಾರೆ. ಅದೇ ಒಂದು ತೊಂದರೆ ನಮ್ಮ ಪುಸ್ತಕಗಳ ವಿಚಾರದಲ್ಲಿ ಇದೆ. ಹೈದರಾಬಾದ್‌ನಲ್ಲಿರತಕ್ಕ ಉರ್ದು ಪುಸ್ತಕ ಅನುಕರಣೆ ಮಾಡಿಕೊಂಡು ಬಂದಿದ್ದರೆ ಚೆನ್ನಾಗಿತ್ತು. ನಾನು ಈ ವಿಚಾರವಾಗಿ ಬರೆದು ಸರ್ಕಾರದವರ ಗಮನಕ್ಕೆ ತಂದಿದ್ದೇನೆ. ಕೊನೆಗೆ ಪರೀಕ್ಷೆಯ ಕಾಲಕ್ಕೆ ಪುಸ್ತಕ ಪ್ರಿಂಟ್ ಆಗುತ್ತದೆ ಎಂದು ಕಾಣುತ್ತದೆ. ಇದನ್ನು ತಪ್ಪಿಸುವ ಸಲುವಾಗಿ ಐದು ವರ್ಷಗಳಿಗೊಮ್ಮೆ ಪುಸ್ತಕಗಳನ್ನು ಬದಲಾಯಿಸಬೇಕೆಂದು ನನ್ನ ವಿನಂತಿ. ಟ್ರೈನಿನಲ್ಲಿ ಹೊರಟಾಗ ಒಬ್ಬರೂ ಅವರು ಯಾರೋ ಗೊತ್ತಿಲ್ಲ, ನೀವು ಯಾವ ಪುಸ್ತಕ ಪ್ರಿಸ್‌ಕ್ರೈಬ್ ಮಾಡುತ್ತೀರಿ, ಯಾವುದೋ ಮಾಡುತ್ತೀರಂತಲ್ಲಾ; ಏನು ಸಮಾಚಾರ ಎಂದು ನನ್ನನ್ನು ಕೇಳಿದರು. ಮಂತ್ರಿಗಳನ್ನು ಕೇಳಿಕೊಂಡು ಬಂದು ಪ್ರತಿ ಹಾಕಿಸುತ್ತೇನೆ ಎಂದು ಹೇಳಿದೆ. ಹೊಸ ಪುಸ್ತಕ ಬರೆಯುವುದು ಎಂದರೆ ಹೊಸದೇನೂ ಇರುವುದಿಲ್ಲ. ಹಳೇ ಪುಸ್ತಕಗಳನ್ನು ಇಟ್ಟುಕೊಂಡು ಅದರಲ್ಲಿಯ ಒಂದು ಪಾಠ, ಇದರಿಂದ ಒಂದು ಪಾಠ ಸೇರಿಸಿ ಹೊಸ ಪುಸ್ತಕ ಎಂದು ಗೊತ್ತು ಮಾಡಿದರೆ ಆಯಿತು. ಅದರ ಮೇಲೆ ಮಂತ್ರಿಗಳ ಹತ್ತಿರ ಮಾಡಬೇಕಾದ ರೆಪ್ರಸೆಂಟೇಷನ್ ಮಾಡಿದರೆ ಅದು ಮಂಜೂರ ಆಗುತ್ತದೆ; ಪುಸ್ತಕ ಪ್ರಿಂಟ್ ಆಗುತ್ತದೆ ಎಂದು ಆಫೀಸನಲ್ಲಿ ನಾನು ಕೇಳಿದ ಮಾತು ಇದು. ಆನಂತರ ಅದಕ್ಕೆಲ್ಲಾ ಬೇರೆ ಬೇರೆ ಕಮಿಟಿಗಳು ಉಂಟು. ಆ ಕಮಿಟಿಗಳಲ್ಲೂ ಕೂಡಾ ಕಾಂಗ್ರೆಸ್‌ನವರೇ ಇದ್ದಾರೆ. ಚುನಾವಣೆಗಳಲ್ಲಿ ಸೋತವರನ್ನು ಹೇಗೆ ಗವರ್ನರುಗಳು ಅಥವಾ ಲೆಜಿಸ್‌ಲೇಟಿವ್ ಕೌನ್ಸಿಲ್ ಮೆಂಬರುಗಳಾಗಿ ಮಾಡುತ್ತಾರೋ ಹಾಗೆ ಅಲ್ಲೂ ಕೂಡಾ ತಮ್ಮ ಅನುಯಾಯಿಗಳನ್ನು ನಾನ್ ಅಫಿಷಿಯಲ್ ಮೆಂಬರ್ಸ್ ಎಂದು ನೇಮಕ ಮಾಡುವುದು ಉಂಟು. ಇಂಥ ಒಂದು ಪುಸ್ತಕದ ಕಮಿಟಿಯಲ್ಲಿ ಒಬ್ಬರು ನಾಲ್ಕನೇ ತರಗತಿಯವರೆಗೆ ಓದಿದ ನಾನ್ ಅಫಿಷಿಯಲ್ ಮೆಂಬರು ಇದ್ದಾರೆ. ಇದು ಚಿಂತಾಜನಕವಾದ ಪರಿಸ್ಥಿತಿಯೆಂದು ಅನಿಸುತ್ತದೆ.

ಇದೇ ಪ್ರಕಾರ ಪ್ರೈವೆಟ್ ಸ್ಕೂಲುಗಳಿಗೆ ಪ್ರೋತ್ಸಾಹ ಕೊಡುವುದು ಬಹಳ ಉಂಟು. ಪ್ರೈವೆಟ್ ಸ್ಕೂಲುಗಳಲ್ಲಿ ಯಾವ ತರಹ ಹಣ ವ್ಯಯವಾಗುತ್ತದೆ. ಎಂಬುದು ದೊಡ್ಡ ಮಾತಲ್ಲ. ಕೇರಳದಲ್ಲಿ ಒಂದು ದೊಡ್ಡ ಚಳುವಳಿಯೇ ನಡೆಯಿತು. ದುರ್ದೈವದಿಂದ ಏನೇ ಆಗಲಿ ಆ ವಿಷಯ ನಮ್ಮ ಮುಂದೆ ಇಲ್ಲ. ಪ್ರೈವೇಟ್ ಮ್ಯಾನೇಜಮೆಂಟ್‌ನವರು ಏನೇ ತಪ್ಪು ಮಾಡಿದರೂ ಅಲ್ಲಿರತಕ್ಕ ಉಪಾಧ್ಯಾಯರು ಅದಕ್ಕೆ ಗುರಿಯಾಗಬೇಕು, ಅವರಿಗೆ

ಸಂಬಳ ಸಿಕ್ಕುವುದಿಲ್ಲ. ತಪ್ಪು ಮಾಡುವವರಿಗೆ ಏನೂ ಶಿಕ್ಷೆ ಇಲ್ಲ. ಸ್ಕೂಲ್ ನಡೆಸತಕ್ಕ ಪ್ರೈವೇಟ್ ಕಮಿಟಿ ಏನಿದೆ ಆ ಕಮಿಟಿಯ ಕಾರ್ಯ ಕರ್ತರಿಗಾಗಲೀ, ಬೇರೆಯವರಿಗಾಗಲೀ ಯಾವ ತರಹದ ಶಿಕ್ಷೆಯೂ ಇಲ್ಲ. ಶಾಲೆ ನಡೆಸತಕ್ಕ ಉಪಾಧ್ಯಾಯರು ಮತ್ತು ಇತರ ಸಿಬ್ಬಂದಿ ವರ್ಗದವರಿಗೆ 6-6 ತಿಂಗಳು ಸಂಬಳ ಸಿಕ್ಕುವುದಿಲ್ಲ. ಆದ್ದರಿಂದ ಸರ್ಕಾರದವರು ಕ್ರಮ ತೆಗೆದುಕೊಂಡು ಯಾವ ಸ್ಕೂಲ್‌ನಲ್ಲಿ ಏನೇ ತಪ್ಪು ಮಾಡಿದರೂ ಆ ಸ್ಕೂಲಿನ ಮ್ಯಾನೇಜ್‌ಮೆಂಟಿನವರ ಮೇಲೆ ಜವಾಬ್ದಾರಿ ಹೊರಿಸಿ ಉಪಾಧ್ಯಾಯರುಗಳಿಗೆ ನಾಲ್ಕು ನಾಲ್ಕು ತಿಂಗಳು ಸಂಬಳ ಸಿಕುದಂತೆ ಮಾಡುವುದನ್ನು ತಡೆಗಟ್ಟಬೇಕೆಂದು ತಮ್ಮ ಮುಂದೆ ವಿನಂತಿ ಮಾಡಿಕೊಳ್ಳುತ್ತೇನೆ.

### ದವಾಖಾನೆ:

ಅನಂತರ, ನಮ್ಮಲ್ಲಿನ ದವಾಖಾನೆಗಳ ವಿಷಯವನ್ನು ಹೇಳಬೇಕಾಗಿದೆ. ಅಲ್ಲಿ ಯಾರಿಗೂ ಸರಿಯಾಗಿ ಔಷಧಿ ಸಿಕ್ಕುವುದಿಲ್ಲ; ಸರಿಯಾದ ಇಂಜೆಕ್ಷನ್ ಸಿಕ್ಕುವುದಿಲ್ಲ. ಒಂದು ನಿದರ್ಶನವನ್ನು ಹೇಳುತ್ತೇನೆ. ಒಬ್ಬ ಹೆಣ್ಣು ಮಗಳಿಗೆ ಹೆರಿಗೆ ಆಗಿತ್ತು. ಅರ್ಧಭಾಗ ನಿಂತಿತ್ತು ಬಹಳ ತೊಂದರೆಯಾಗಿತ್ತು. ಅರ್ಧರಾತ್ರಿಯಲ್ಲಿ ಆಸ್ಪತ್ರೆಗೆ ಕರೆದುಕೊಂಡು ಹೋದರು, ಅಲ್ಲಿ ಡಾಕ್ಟರು ನೋಡಲಿಲ್ಲ. ಮುಂಜಾನೆ ಎಂಟು ಗಂಟೆಯಾದರೂ ಡಾಕ್ಟರು ಬರಲಿಲ್ಲ. ನಾನು ಹೋದನಂತರವೂ ಆ ಡಾಕ್ಟರು ಹೆಣ್ಣು ಮಗಳು ಹೊರಗೆ ಬರಲಿಲ್ಲ. ಆಮೇಲೆ ಬಂದು ಅಪರೇಷನ್ ಮಾಡಿ ಮಗುವನ್ನು ತೆಗೆದರು. ಹೀಗಿದೆ ಆಸ್ಪತ್ರೆಗಳ ವಿಷಯ.

ನಾಲ್ಕನೆಯದಾಗಿ, ಪೊಲೀಸ್ ಅಧಿಕಾರಿಗಳ ವಿಷಯ

ಪೊಲೀಸ್ ಅಧಿಕಾರಿಗಳ ವಿಷಯವನ್ನು ಎಷ್ಟೋ ಜನರು ಹೇಳಿದ್ದಾರೆ. ನಾನು ಕೆಲವೇ ಮಾತುಗಳನ್ನು ಹೇಳುತ್ತೇನೆ. ಪೊಲೀಸ್ ಇಲಾಖೆಯ ಮೇಲೆ ದಿನದಿನಕ್ಕೆ ಖರ್ಚು ಹೆಚ್ಚಾಗುತ್ತಿದೆ. ಇದು ಯಾರ ಮೇಲೆ ಖರ್ಚಾಗುತ್ತದೆಯೋ ಗೊತ್ತಾಗುವುದಿಲ್ಲ ಒಬ್ಬ ಪೊಲೀಸ್ ಕಾನ್‌ಸ್ಟೇಬಲ್ ಹಳ್ಳಿಯಿಂದ ಹಳ್ಳಿಗೆ ಹೋದರೆ ಅವನಿಗೆ ಭತ್ಯೆ ಸಿಕ್ಕುವುದಿಲ್ಲ. ಪೊಲೀಸ್ ಇನ್ಸ್‌ಪೆಕ್ಟ್‌ರ್ ಬಸ್ಸುಗಳಲ್ಲಿ ಪುಕ್ಕಟೆ ಹೋಗುತ್ತಾರೆ ಅವರಿಗೇನೂ ಹಣ ಖರ್ಚಾಗುವುದಿಲ್ಲ. ಹೀಗಿದ್ದರೂ ಯಾರಿಗಾಗಿ ಇಷ್ಟು ಹಣ ಖರ್ಚಾಗುತ್ತದೆಯೋ ಗೊತ್ತಾಗುವುದಿಲ್ಲ. ಈ ಹಣ ಯಾರಿಗೆ ಹೋಗುತ್ತದೆಯೋ ಗೊತ್ತಾಗುವುದಿಲ್ಲ. ಎಷ್ಟೋ ಜನ ಪೊಲೀಸಿನವರು ತಮಗೆ ಭತ್ಯೆ ಸಿಕ್ಕುವುದಿಲ್ಲವೆಂದು ಹೇಳಿದ್ದಾರೆ. ಅವರಿಗೆ ಯಾವಾಗ ಕಾಗದ ಬೇಕಾಗುತ್ತದೆ. ಆಗ ಯಾರೋ ಟಾಂಗಾದವರನ್ನೋ ಸೈಕಲ್‌ನವರನ್ನೋ ಹಿಡಿದು ಅವರಿಂದ ಕಾಗದ ಪಡೆಯುತ್ತಾರೆ.

ಐದನೆಯದಾಗಿ, ಪಾನ ನಿರೋಧದ ವಿಷಯ

ಪಾನನಿರೋಧದ ವಿಷಯದಲ್ಲಿ ನಮ್ಮ ಮಿತ್ರರು ಸಾಕಷ್ಟು ಹೇಳಿದ್ದಾರೆ. ನಾನೊಂದು ವಿಷಯವನ್ನು ಹೇಳುವುದಾದರೆ, ಪಾನ ನಿರೋಧ ಕಾರ್ಯದಲ್ಲಿ ಆಳುವ ಪಕ್ಷದವರು ಏನೋ

ಒಂದು ತಮ್ಮ ಚುನಾವಣೆಗೆ ಉಪಯೋಗವಾಗುವಂತಹ ಯಂತ್ರವನ್ನು ಮಾಡಿಕೊಂಡಿದ್ದಾರೆಂದು ಕಾಣುತ್ತದೆ. ಮನೆಯಲ್ಲಿ ಭಟ್ಟಿ ತೆಗೆಯುವುದು ಒಂದು ಸಣ್ಣ ಕೈಗಾರಿಕೆಯಂತೆ ನಡೆಯುತ್ತಿದೆ. ಶಿಕ್ಷಣ ಕೊಟ್ಟು ಎಷ್ಟೋ ಜನರು ಕೂಲಿಗಾರರನ್ನಿಟ್ಟು ಮನೆಗಳಲ್ಲಿ, ನಡೆಸುತ್ತಿದ್ದಾರೆ. ಬಿದರೆಯಲ್ಲಿ ಎಷ್ಟೋ ಜನ ಹೆಣ್ಣು ಮಕ್ಕಳು ಈ ವಿಷಯವನ್ನು ಹೇಳುತ್ತಿದ್ದಾರೆ. ಪಾನ ನಿರೋಧ ಜಾರಿ ಮಾಡಿದ್ದಾರೆ. ಆದರೆ ಮನೆಮನೆಗೂ ಭಟ್ಟಿ ತೆಗೆಯುವ ಕಾರ್ಯಕ್ರಮವನ್ನು ಜಾರಿಗೆ ತಂದಿದ್ದಾರೆ. ಇದನ್ನು ನೋಡಿದರೆ ಈ ಪಾನ ನಿರೋಧವನ್ನು ತೆಗೆದು ಹಾಕಿದರೆ ಒಳ್ಳೆಯದೆಂದು ನನ್ನ ಅಭಿಪ್ರಾಯ.

ಆರನೇಯದಾಗಿ, ಖಾದಿ ವಿಷಯ

ಖಾದಿ ವಿಷಯದಲ್ಲಿ ಮಾನ್ಯ ಮಿತ್ರರಾದ ಶ್ರೀ ಗೋಪಾಲ್ ಗೌಡರು ಹೇಳಿದ್ದಾರೆ. ಒಂದು ಕಾಲದಲ್ಲಿ ನಾನು ಖಾದಿ ತೊಡುತ್ತಿದ್ದೆ. ಆಮೇಲೆ ನಮ್ಮ ದೇಶ ಸ್ವತಂತ್ರವಾದ ಮೇಲೆ ಖಾದಿ ತೊಡುವುದರಿಂದ ಪ್ರಯೋಜನವಿಲ್ಲವೆಂದು ನನಗನಿಸಿತು. ಇಷ್ಟೇ ಅಲ್ಲ, ಖಾದಿ ಧರಿಸುವುದರಿಂದ ದೇಶ ದ್ರೋಹವಾಗುತ್ತದೆಯೋ ಎನಿಸುತ್ತದೆ. ಏಕೆಂದರೆ, ನಮ್ಮ ದೇಶದಲ್ಲಿ ಬೇಕಾದಷ್ಟು ಅರಳೆ ಸಿಗುವುದಿಲ್ಲ. ಹೊರ ದೇಶಗಳಿಂದ ತರಿಸುತ್ತೇವೆ. "ವಿದೇಶಿ ವಿನಿಮಯ" ಬೇಕು. ಅಲ್ಲದೆ ಜಾಗ್ರತೆ ಖಾದಿ ಬಟ್ಟೆ ಹರಿದು ಹೋಗುತ್ತದೆ. ಹೊರ ದೇಶಗಳಿಂದ ತರಿಸುವ ಅರಳೆಯಿಂದ "ವಿದೇಶಿ ವಿನಿಮಯ" ದ ಪರಿಸ್ಥಿತಿ ಕಷ್ಟವಾಗುತ್ತದೆ. ಇದರಿಂದ ದೇಶ ದ್ರೋಹ ವಾಗುತ್ತದೆಂದು ನನ್ನ ಅಭಿಪ್ರಾಯ. ಖಾದಿ ಬೋರ್ಡ್‌ನ ಚೇರಮನ್ ಶ್ರೀ ಸಿದ್ಧವೀರಪ್ಪನ್‌ನವರು ಎಂಟು ಕೋಟಿ ರೂಪಾಯಿ ಬೆಲೆಯ ಖಾದಿ ಮಾರಾಟವಾಗದೆ ಹಾಗೆಯೇ ಬಿದ್ದಿದೆ ಎಂದು ಹೇಳಿದ್ದಾರೆ. ಇದು ಪತ್ರಿಕೆಗಳಲ್ಲಿ ಬಂದಿದೆ. ಹೀಗೆ ಎಂಟು ಕೋಟಿ ರೂಪಾಯಿಗಳಷ್ಟು ಸರ್ಕಾರದ ಹಣ ಎಲ್ಲಿಯೋ ಮೂಲೆಯಲ್ಲಿ ಬ್ಲಾಕ್ ಆಗಿರುವುದರ ಅರ್ಥವೇನು? ನಮ್ಮ ಸರ್ಕಾರಕ್ಕೆ ಆಗತ್ಯವಾದಷ್ಟು ಹಣವಿಲ್ಲದ ಅಲ್ಪ ಉಳಿತಾಯ ಯೋಜನೆ ಎಂದು ಮಾಡುತ್ತಿರುವಾಗ ಹೀಗಾಗ ಬಹುದೆ ಎಂದು ಕೇಳಬೇಕಾಗಿದೆ. ಖಾದಿಯ ಪ್ರಾಮುಖ್ಯತೆ ಒಂದು ಕಾಲದಲ್ಲಿತ್ತು. ಖಾದಿ ಬಡವರನ್ನು ಉದ್ಧಾರ ಮಾಡುತ್ತದೆಂದು ಬಿಜಾಪೂರದ ಸದಸ್ಯರು ಹೇಳಿದರು. ಹಿಂದೆ ಚರಕದಿಂದ ನೂಲು ತೆಗೆದು ಮಾಡುತ್ತಿದ್ದರು. ಅವರಿಗೆ ಅದರಿಂದ ಹಣ ಬರುತ್ತಿತ್ತು. ಆದರೆ ಈಗ ಯಾರು ಕೈಯಾರ ಮಾಡುತ್ತಾರೋ ಅವರಿಗಿಂತ ಹೆಚ್ಚಾಗಿ ಬೇರೆಯವರಿಗೆ ಲಾಭ ದೊರಕುತ್ತದೆ. ಖಾದಿ ಮಾಡುವವರಿಗೇನೂ ಲಾಭ ಸಿಕ್ಕುವುದಿಲ್ಲ. ಯಾರಿಗೆ ಖಾದಿಯಲ್ಲಿ ವಿಶ್ವಾಸವಿದೆಯೋ ಅವರು ಬೇಕಾದರೆ ಅದನ್ನು ಧರಿಸಬಹುದು. ಆದರೆ ಸರ್ಕಾರದವರು ಇದನ್ನು ಧರಿಸಬೇಕೆಂದು ಜನರಿಗೆ ಒತ್ತಾಯ ಮಾಡಬಾರದು. ಈಗ ಜವಾನರುಗಳ ಉಡುಪಿಗಾಗಿ ಖಾದಿಯನ್ನು ತರಿಸುತ್ತಿದ್ದಾರೆ. ಖಾದಿ ಬಟ್ಟೆಯನ್ನು ಬೇಗ ಬೇಗ ಒಗೆಯಬೇಕಾಗುತ್ತದೆ. ಆದ ಕಾರಣ ಎರಡು ದಿನಕ್ಕೊಂದು ಸಾಬೂನಬೇಕಾಗಿ ಇದಕ್ಕಾಗಿ ಹಣ ಹಾಳಾಗುತ್ತದೆ. ಅಲ್ಲದೆ ಖಾದಿಗೆ ಕೊಡುವ ಸಬ್ಸಿಡಿ

ಬಂದಾಗಬೇಕು. ಬಡವ ವಕೀಲನ ಹತ್ತಿರ ತನ್ನ ಕೇಸಿನ ಸಂಬಂಧವಾಗಿ ಹೋದರೆ ಖಾದಿ ಹುಂಡಿಯನ್ನು ಕೊಂಡು ಕೊಳ್ಳುವಂತೆ ಒತ್ತಾಯ ಮಾಡುತ್ತಾನೆ. ಹತ್ತು ರೂಪಯಿಗೆ ಖಾದಿ ಹುಂಡಿಯನ್ನು ಕೊಂಡು ಅದನ್ನು ಆರು ರೂಪಾಯಿಗೆ ಬೇರೆ ಜನರಿಗೆ ಎಷ್ಟೋ ಕಡೆ ಮಾರಿದ್ದಾರೆ. ಈ ಖಾದಿಯ ಬಗ್ಗೆ ಅಭಿಮಾನ ವಿರಬೇಕು. ಅವಮಾನ ವಿರಬಾರದು. ಒಂದು ಕಡೆ ನಾವು ಗೃಹ ಕೈಗಾರಿಕೆಗಳನ್ನು ಬೆಳೆಸೋಣ. ನಮ್ಮ ದೊಡ್ಡ ದೊಡ್ಡ ಕೈಗಾರಿಕೆಗಳು ಬೆಳೆಯಬೇಕೆಂದು ಹೇಳುವ ಕಾಲದಲ್ಲಿ, ಖಾದಿಯನ್ನೇ ಇಟ್ಟುಕೊಳ್ಳಬೇಕೆಂದು ಹೇಳುವುದರಲ್ಲಿ ಅರ್ಥವಿಲ್ಲ. ನಮಗೆ ಸ್ವಾತಂತ್ರ್ಯ ಬಂದ ನಂತರ ಮಹಾತ್ಮಾಗಾಂಧೀಜಿ ಕಾಂಗ್ರೆಸ್ ಸಂಸ್ಥೆಯನ್ನು ತೆಗೆದು ಹಾಕಿ, ಎಂದು ಹೇಳಿದರು. ಈಗ ಅವರು ಬದುಕಿದ್ದರೆ ಖಾದಿಯನ್ನು ತೆಗೆದು ಹಾಕಿ, ಬ್ರಿಟಿಷನವರ ಮೇಲೆ ಹೋರಾಟ ಮಾಡುವಾಗ ಇದರ ಅಗತ್ಯವಿತ್ತು, ಈಗ ಇದು ಬೇಕಾಗಿಲ್ಲ ಎಂದು ಸಾರ್ವಜನಿಕ ಹಣದಿಂದ ಇದಕ್ಕೆ ರಿಬೇಟ್ ಕೊಟ್ಟು ಹಣ ಉಳಿಸುವ ಪ್ರಯತ್ನ ಮಾಡಬಾರದೆಂದು ಹೇಳುತ್ತಿದ್ದರು. ಇಷ್ಟು ಮಾತನ್ನು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ.

## (5) 1962-63ನೇ ಸಾಲಿನ ಆಯವ್ಯಯದ ಮೇಲಿನ ಸಾಮಾನ್ಯ ಚರ್ಚೆ

ಸ್ವಾಮಿ ಈ ಸರ್ಕಾರ ಮಂಡಿಸಿರುವ ಬಜೆಟ್‌ನ್ನು ನೋಡಿದರೆ, ಇದು ಜನರಿಗೆ ಉತ್ಸಾಹ ತರುವ ಬಜೆಟ್ ಅಲ್ಲವೆಂಬುದು ಕಾಣುತ್ತದೆ. "ಸೋಸಿಯಲಿಸ್ಟಿಕ್ ಪ್ಯಾಟರ್ನ್ ಆಫ್ ಸೊಸೈಟಿ" ಎಂದು ಹೇಳಿ ಜನರ ಮೇಲೆ ಹೊರಿಸಿರುವ ತೆರಿಗೆ, ಇದರಲ್ಲಿ ನೇರ ತೆರಿಗೆ ಪರೋಕ್ಷ ತೆರಿಗೆಗಳು, ಇವುಗಳನ್ನು ನೋಡಿದರೆ ಇದು ಅರ್ಥವಾಗುತ್ತದೆ. ಪ್ರತಿ ವರ್ಷವೂ ಮೂರು ನಾಲ್ಕು ಕೋಟಿ ರೂಪಾಯಿಗಳಷ್ಟು ಜನರಿಗೆ ಹಾಕಿದುದೂ ಅಲ್ಲದೆ, ನೂರು ನೂರೈವತ್ತು ಕೋಟಿ ರೂಪಾಯಿಗಳ ವರೆಗೆ ಸಾಲ ಪಡೆದಿದ್ದಾರೆ. ಹೀಗೆ ಒಂದು ಕಡೆ ತೆರಿಗೆ, ಒಂದು ಕಡೆ ಸಾಲ, ಮತ್ತೊಂದು ಕಡೆ ಏರುತ್ತಿರುವ ಬೆಲೆಗಳು ಇವನ್ನೆಲ್ಲಾ ನೋಡಿದರೆ, ಯಾವ ವ್ಯಾಪಾರಸ್ಥನಾಗಲೀ ಒಂದು ಸಣ್ಣ ಎಲೆಯ ಅಂಗಡಿಯವನಾಗಲೀ ಹೀಗೆ ವ್ಯವಹಾರ ಮಾಡುವುದಿಲ್ಲವೆಂದು ಹೇಳಬಹುದು. ಈ ಸಾಲದಿಂದ ಬಹಳ ಅಪಾಯವಾಗುವುದಷ್ಟೇ ಅಲ್ಲ, ಹೀಗೆ ತೆರಿಗೆ ಹೇರಿದರೆ, ಸಾಲ ತರುತ್ತಿದ್ದರೆ ಮೂರನೆಯ ಪಂಚವಾರ್ಷಿಕ ಯೋಜನೆ ಪೂರ್ತಿಯಾಗುತ್ತದೆಯೋ, ಇಲ್ಲವೋ ಎಂದು ಸಂದೇಹವಾಗುತ್ತದೆ. ಈ ಸರ್ಕಾರ ನಮ್ಮ ಕೇಂದ್ರ ಸರ್ಕಾರದ ಮೇಲೆ ಅಷ್ಟು ಪ್ರಭಾವ ಇಲ್ಲ. ಅಲ್ಲಿಂದ ನಮಗೆ ಬರಬೇಕಾದ ಆದಾಯವನ್ನು ಎಷ್ಟು ಪಡೆಯಬೇಕೋ ಅಷ್ಟನ್ನು ಪಡೆದಿಲ್ಲವೆಂದು ಸ್ಪಷ್ಟವಾಗಿ ಹೇಳಬೇಕಾಗಿದೆ. ನಮ್ಮ ರಾಜ್ಯಕ್ಕೆ ಬರತಕ್ಕ 6 ಕೋಟಿ ರೂಪಾಯಿಗಳ ಬದಲು ನಮ್ಮಿಂದ 6.75 ಕೋಟಿ ರೂಪಾಯಿ ಹೋಗಿದೆ. ಅದೇ ಮದರಾಸು, ಕೇರಳ ಸರ್ಕಾರಗಳನ್ನು ನೋಡಿದರೆ ಎರಡರಷ್ಟು ಪಡೆದಿವೆ. ನಮ್ಮ ರಾಜ್ಯದಿಂದ ಕೊಡ್ಡತಕ್ಕ ಕಾಫಿ, ಟೀ ಮುಂತಾದ ಬೇರೆ ಬೇರೆ ಪದಾರ್ಥಗಳಿಂದ ವಿದೇಶಿ ವಿನಿಮಯಗೇ ಎಷ್ಟೋ ಅನಕೂಲವಾಗಿದೆ. ಸಿಮೆಂಟ್, ಸಕ್ಕರೆ ಇತ್ಯಾದಿಗಳ ಮೇಲಣ ಡ್ಯೂಟಿಯಿಂದ ನಮಗೆಷ್ಟು ಬರಬೇಕೋ ಅಷ್ಟನ್ನು ಪಡೆಯುವುದಕ್ಕೆ ಕೇಂದ್ರ ಸರ್ಕಾರದ ಮೇಲೆ ಎಷ್ಟು ನಮ್ಮ ಪ್ರಭಾವ ಇರಬೇಕೋ ಅಷ್ಟು ಪ್ರಭಾವ ಬೀರಿ ಅವರಿಂದ ಪಡೆದಿಲ್ಲವೆಂದು ಕಾಣುತ್ತದೆ. ಅಷ್ಟೇ ಅಲ್ಲ ಈ ಸರ್ಕಾರ ಕೇಂದ್ರ ಸರ್ಕಾರದ ಆಜ್ಞಾಧಾರವಾಗಿದೆ ಎಂದರೆ ಅತಿಶಯೋಕ್ತಿಯಲ್ಲ. ಅವರು ಏನು ಹೇಳುತ್ತಾರೋ ಅದನ್ನು ಕೇಳಿಕೊಂಡು ಸುಮ್ಮನೆ ಕುಳಿತಿರುವುದು ನಮ್ಮ ಸರ್ಕಾರದ ಕೆಲಸವಾಗಿದೆ. ನಮ್ಮ ಚಿನ್ನದ ಗಣಿಯಿಂದ "ಅಂತರ ರಾಷ್ಟ್ರೀಯ ಹಣಕಾಸು ನಿಧಿ" ಗೆ ಕೊಡಲು ವಿದೇಶಿ ವಿನಿಮಯ ತಂದು ಕೊಡುತ್ತಿದ್ದಾರೆ. ಆದರೆ ನಮ್ಮ ಹೈಡ್ರೋ ಎಲೆಕ್ಟ್ರಿಕ್ ಯೋಜನೆಗಳಿಗೆ, ಕೈಗಾರಿಕೆಗಳಿಗೆ ಹಣ ಕೊಡುವ ಪ್ರಶ್ನೆ ಬಂದಾಗ, ನಮಗೆ ಯಾವ ರೀತಿಯಾದ ನ್ಯಾಯವನ್ನು ಕೊಡಬೇಕೋ ಅದನ್ನು ಕೊಡುವುದಿಲ್ಲ. ಈ ಬಗ್ಗೆ ಕೇಂದ್ರದ ಮೇಲೆ ಪ್ರಭಾವ ಬೀರಿ ನಮಗೆ ಬರಬೇಕಾದುದನ್ನು ಪಡೆಯಲು ನಮ್ಮ ಸರ್ಕಾರ ಪ್ರಯತ್ನ ಪಡುವುದಿಲ್ಲ. ಇದಕ್ಕೆ ಸಕ್ಕರೆ ಕಾರ್ಖಾನೆಗಳಂಥ ಉದಾಹರಣೆಯೇ ಸಾಕು. ಮೂರನೆಯ ಯೋಜನೆಯಲ್ಲಿ ಕೊಟ್ಟಿರುವ ಅಂಕಿ ಅಂಶಗಳನ್ನು ನೋಡಿದರೆ, ಮೈಸೂರಿನಲ್ಲಿ ಎಕರೆಗೆ ಇಪ್ಪತ್ತೇಳು ಟನ್ ಕಬ್ಬನ್ನು

ಬೆಳೆಯುತ್ತೇವೆ. ಇದೇ ಅಖಿಲ ಭಾರತದ ಅಂಕಿಯನ್ನು ನೋಡಿದರೆ 16 ಟನ್ ಇದೆ. ಹೀಗಿದ್ದರೂ ಉತ್ತರ ಪ್ರದೇಶದಲ್ಲಿ ಸಕ್ಕರೆ ಕಾರ್ಖಾನೆಗಳು ಏಕೆ ಹೆಚ್ಚಾಗಿವೆ? ಅಲ್ಲದೆ ಅಲ್ಲಿ ಬೆಳೆಯುವ ಕಬ್ಬು ಇಲ್ಲಿ ಬೆಳೆಯುವ ಕಬ್ಬಿನಷ್ಟು ರುಚಿಯಾಗಿಲ್ಲ. ಆದರೂ ಅಲ್ಲ ಕಾರ್ಖಾನೆಗಳು ಬೆಳೆಯುತ್ತಿವೆ. ಅಲ್ಲಿ ಕಬ್ಬಿನ ಚಾರ್ಜು ಭಾರತ ಸರ್ಕಾರ ಅವರಿಗೆ ಸಬ್ಸಿಡಿ ಕೊಡುತ್ತಿದೆ. ಆದರೆ ನಮ್ಮ ಕೋಲಾರ ಚಿನ್ನದ ಗಣಿಗೆ ಸಬ್ಸಿಡಿ ಕೊಡುವುದಕ್ಕೆ ಬದಲು ಅಂತರ ರಾಷ್ಟ್ರೀಯ ಹಣಕಾಸು ನಿಧಿಗೆ ಕೊಡುತ್ತೇವೆಂದು ಹೇಳುತ್ತಾರೆ. ಈ ವಿಷಯದಲ್ಲಿ ಎಷ್ಟೋ ಜನ ಮಾನ್ಯ ಸದಸ್ಯರು ಮಾತನಾಡಿದ್ದಾರೆ, ನಾನು ಹೆಚ್ಚು ಹೇಳುವುದಿಲ್ಲ.

ಶ್ರೀ ಬಿ.ಡಿ. ಜತ್ತಿ: ಮಾನ್ಯ ಸದಸ್ಯರೇ, ಸಕ್ಕರೆ ಕಾರ್ಖಾನೆಯ ವಿಚಾರವಾಗಿ ಮಾತನಾಡಬಹುದು, ಅವರಿಗೆ ಅನುಭವವಿರಬಹುದು. ಆದರೆ ಅವರಲ್ಲಿ ಚಿನ್ನದ ಗಣಿಯ ವಿಚಾರದಲ್ಲಿ ಹೆಚ್ಚು ಮಾಹಿತಿ ಇದ್ದಂತೆ ಕಾಣುವುದಿಲ್ಲ. ಚಿನ್ನದ ಗಣಿಯ ವಿಚಾರದಲ್ಲಿ ಅವರು ಹೇಳುತ್ತಿರುವುದು ಸರಿಯಾಗಿಲ್ಲ. ತಪ್ಪಾಗಿ ತಿಳಿದುಕೊಂಡಿದ್ದಾರೆ.

ಶ್ರೀ ಗಂಗಾಧರ ನಮೋಶಿ: ಇದನ್ನೆಲ್ಲಾ ನೋಡಿದರೆ ನಮ್ಮ ಕಾಂಗ್ರೆಸ್ ಮಿತ್ರರ ಹೇಗೆ ಪ್ರಭಾವಕ್ಕೆ ಬಲಿ ಬೀಳುತ್ತಾರೆಂಬುದು ಗೊತ್ತಾಗುತ್ತದೆ. ಇದಕ್ಕೆ ಒಂದು ಉದಾಹರಣೆಯನ್ನು ಹೇಳುವುದಾದರೆ ತುಮಕೂರಿನಲ್ಲಿ ನಡೆದ ಚುನಾವಣೆಯಲ್ಲಿ ಕೇಂದ್ರದಲ್ಲಿ ಮಂತ್ರಿಯಾಗಿದ್ದವರನ್ನು ನಿಲ್ಲಿಸಿ ನಮ್ಮ ಮಂತ್ರಿಗಳು ಅವರ ಪರವಾಗಿ ಮಾತನಾಡುತ್ತಾ ನಿಮಗೆ ಏನು ಅನುಕೂಲಗಳ ಬೇಕೋ ಅವನ್ನೆಲ್ಲಾ ಅವರು ಒದಗಿಸುತ್ತಾರೆಂದು ಜನರಿಗೆ ಹೇಳಿದರು. ಎಂದ ಮೇಲೆ, ನಮಗೆ ಬೇಕಾದುದನ್ನು ಮಂತ್ರಿಗಳು ಕೇಳಿದರೆ ಕೇಂದ್ರ ಸರ್ಕಾರ ಕೊಡುವುದಿಲ್ಲವೆಂದು ಒಪ್ಪಿಕೊಂಡಂತಾಯಿತು. ಈ ಕಾರಣದಿಂದ ಜೈನ್ ಅವರನ್ನು ಇಲ್ಲಿ ನಿಲ್ಲಿಸಿ ಚುನಾಯಿಸಬೇಕೆಂದು ಹೇಳಿದ ಹಾಗಾಯಿತು. ಉತ್ತರ ಹಿಂದುಸ್ತಾನ್‌ದವರು ಇಲ್ಲಿ ಬಂದು ಚುನಾಯಿತರಾಗಬಹುದು. ನಾವು ಅಲ್ಲಿಗೆ ಹೋಗಬಹುದು ಎಂದು ಹೇಳಿದರು. ಆದರೆ ಒಂದೊಂದು ಸಮಯದಲ್ಲಿ ಒಂದೊಂದು ರೀತಿ ತಮಗೆ ಅನುಕೂಲ ಕಂಡಂತೆ ಹೇಳುತ್ತಾರೆ. ನಮ್ಮ ಮಂತ್ರಿಗಳು, ಇದು ಜವಾಬ್ದಾರಿಯಿಂದ ಮಾಡುವ ಕೆಲಸವಲ್ಲವೆಂದು ನನಗನಿಸುತ್ತದೆ. ಇಂಥ ಸರ್ಕಾರ ಜವಾಬ್ದಾರಿ ಸರ್ಕಾರವಲ್ಲವೆಂದು ಕಾಣುತ್ತದೆ.

ಕೇಂದ್ರ ಸರ್ಕಾರದವರು ಹೇಗೆ ಮೈಸೂರಿಗೆ ಕೊಡಬೇಕಾದುದನ್ನು ಕೊಡದೆ ಅನ್ಯಾಯ ಮಾಡುತ್ತಿದೆಯೋ ಹಾಗೆ ಮೈಸೂರಿನ ಮಂತ್ರಿಗಳು ಹೈದರಾಬಾದ್ ಕರ್ನಾಟಕಕ್ಕೆ ಅನ್ಯಾಯ ಮಾಡುತ್ತಿದ್ದಾರೆ. 1945ರಲ್ಲಿ ಆದ ತುಂಗಭದ್ರಾ ಯೋಜನೆ ಇನ್ನೂ ಪೂರ್ತಿಯಾಗಿಲ್ಲ. ವಿದ್ಯುಚ್ಛಕ್ತಿ, ದೀಪಗಳನ್ನು ಪ್ರತಿ ವರ್ಷವೂ ಕೇಳುತ್ತಿದ್ದರೂ, ಇನ್ನೊಂದು ವರ್ಷದಲ್ಲಿ ಕೊಡುತ್ತೇವೆಂದು ಹೇಳುತ್ತಾ ಬಂದು ಇನ್ನೂ ಕಾರ್ಯಗತ ಮಾಡಿಲ್ಲ. ಆ ಪ್ರದೇಶದವರು ವಿದ್ಯಾಭ್ಯಾಸದಲ್ಲಿ ಹಿಂದಿದ್ದೇವೆಂದು ಹೇಳಿದರೆ, ಅಲ್ಲಿ ವಿಶ್ವವಿದ್ಯಾಲಯ ಸ್ಥಾಪನೆ ಮಾಡುತ್ತೇವೆ, ಮೆಡಿಕಲ್ ಕಾಲೇಜು ಮಾಡುತ್ತೇವೆ ಎಂದು ಹೇಳುತ್ತಾ ಯಾವುದೋ ರಾಜಕೀಯ

ಕಾರಣಗಳಿಂದ ಬೇರೆ ಕಡೆ ಮೆಡಿಕಲ್ ಕಾಲೇಜು ಪ್ರಾರಂಭ ಮಾಡಿದ್ದಾರೆ. ಅಲ್ಲಿ ನಮ್ಮ ಹೈದರಾಬಾದ್ ಕರ್ನಾಟಕದವರಿಗೆ ಶೇಕಡಾವಾರು ಎಷ್ಟು ಸೀಟುಗಳು ಸಿಗಬೇಕೋ ಅಷ್ಟು ಸಿಗುವುದಿಲ್ಲ. ಹೀಗೆ ಸರಕಾರದವರು ಹೈದರಾಬಾದ್ ಕರ್ನಾಟಕದವರ ಹಿತರಕ್ಷಣೆಗೆ ಈ ಹೊತ್ತಿನವರೆಗೂ ಗಮನಕೊಟ್ಟಿಲ್ಲ. ಇನ್ನಾದರೂ ಕೊಡಬೇಕೆಂದು ಪ್ರಾರ್ಥಿಸುತ್ತೇನೆ. ಗುಲಬರ್ಗಾದಲ್ಲಿ ವಿದ್ಯುಚ್ಛಕ್ತಿ ಸರಿಯಾಗಿ ಪೂರೈಕೆ ಮಾಡುವುದಿಲ್ಲ. ಮಂತ್ರಿಗಳಿಗೆ ಹೇಳಿದರೆ ಏನೂ ಮಾಡಿಲ್ಲ. ವಿದ್ಯುಚ್ಛಕ್ತಿ ಇಲಾಖೆಯನ್ನು ವಿಕೇಂದ್ರಿಕರಣ ಮಾಡಿದ್ದಾರೆ. ಆ ಇಲಾಖೆಯವರನ್ನು ಕೇಳಿದರೆ ಏನೂ ಮಾಡಿಲ್ಲ ಅಲ್ಲಿ ಒಬ್ಬರು ಏಗ್ಜಿಕ್ಯೂಟಿವ್ ಇಂಜಿನೀಯರ್ ಇದ್ದಾರೆ. ಅವರು ಯಾವಾಗಲೂ ಕಾಯಿಲೆಯಿಂದಿರುತ್ತಾರೆ.

ಜನರಲ್ ಅಡ್ಮಿನಿಸ್ಟ್ರೇಷನ್‌ನಲ್ಲಿ ಫೇವರಿಟಿಸಂ, ರೆಡ್ ಟೇಪಿಸಂ ಮತ್ತು ಕಾಸ್ಟೀಸಂ ಇವೆಲ್ಲಾ ಹೆಚ್ಚಿವೆ. ಒಬ್ಬ ಬಹಳ ವಯಸ್ಸಾದ ಎಗ್ಜಿಕ್ಯೂಟಿವ್ ಇಂಜಿನಿಯರ್ ಇದ್ದಾರೆ. ಅವರು ಯಾವಾಗಲೂ ಕಾಯಿಲೆಯಿಂದಿರುತ್ತಾರೆ. ಅವರಿಗೆ ರಜೆ ಬೇಡಿದರೆ ಕೊಡುವುದಿಲ್ಲ. ಅದಕ್ಕೆ ಒಂದು ಕಾರಣ ಅದೇನೆಂದರೆ, ಬ್ರಾಹ್ಮಣ ಇದ್ದಾರೆ; ಎಂಬುದು. ಈ ರೀತಿ ಜಾತಿ ಮತಗಳ ಆಧಾರದ ಮೇಲೆ ಆಡಳಿತ ನಡೆಸುವುದು ಸರಿಯೇ? ಪ್ರಜಾಪ್ರಭುತ್ವವಿದೆ, ಇದು ಕ್ಯಾಸ್ಟ್ ಲೆಸ್ ಸ್ಟೇಟ್ ಆಗಬೇಕು. ಸೋಷಿಯಲ್ಲಿಸ್ಟಿಕ್ ಪ್ಯಾಟರ್ನ್ ಸೊಸೈಟಿ ನಿರ್ಮಿಸಬೇಕು. ಎಂದು ಮುಂತಾಗಿ ಹೇಳುತ್ತಿರುವಾಗ ಸರಕಾರದ ನಡವಳಿಕೆ ಅರ್ಥವೇ ಆಗುವುದಿಲ್ಲ. ಇಷ್ಟೇ ಅಲ್ಲ ಇನ್ನೊಂದು ಉದಾಹರಣೆಯನ್ನು ಹೇಳುವುದಾದರೆ, ನನ್ನ ಸ್ನೇಹಿತರೊಬ್ಬರು ಏಜ್ ಸರ್ಟಿಫಿಕೇಟ್ ಸಲುವಾಗಿ ಹೋದ ಬುಧವಾರ ಇಲ್ಲಿಗೆ ಬಂದರು. ಈ ವಿಚಾರ ಮಾನ್ಯ ಅರ್ಥ ಮಂತ್ರಿಗಳಿಗೆ ಗೊತ್ತಿದೆ. ಒಂಭತ್ತು ದಿವಸಗಳಾದರೂ ಇನ್ನೂ ಏಜ್ ಸರ್ಟಿಫಿಕೇಟ್ ಸಿಕ್ಕಿಲ್ಲ. ಕಾಲೇಜಿಗೆ ಇದರಿಂದ ತೊಂದರೆಯಾಗಿದೆ. ಎಜುಕೇಷನ್ ಸೆಕ್ರೆಟರಿಗಳು ಯಾವುದನ್ನೂ ನೋಡುವುದಿಲ್ಲ.

ಎಷ್ಟೋ ಆಫೀಸಗಳಲ್ಲಿ ಕೆಲಸ ಬಹಳ ನಿಧಾನವಾಗುತ್ತಿದೆ. ನಾನು ಗುಲಬರ್ಗಾ ಮುನಿಸಿಪಾಲಿಟಿಯಲ್ಲಿ ಹನ್ನೊಂದು ವರ್ಷಗಳಿಂದ ಸದಸ್ಯನಾಗಿದ್ದೇನೆ. ಮುನ್ಸಿಪಾಲಿಟಿಯವರು ಒಂದು ಶಿಫಾರಸ್ಸು ಕಳಿಸಿದರೆ ಮೂರು ನಾಲ್ಕು ವರ್ಷಗಳಾದರೂ ಜವಾಬು ಬರುವುದಿಲ್ಲ. ಮುನಿಸಿಪಲ್ ಆ್ಯಕ್ಟ್ ಸುಧಾರಣೆಯಾಗಬೇಕೆಂದು ಮಂತ್ರಿಗಳೆಲ್ಲರೂ ಹೇಳುತ್ತಿದ್ದಾರೆ. ಹೊಸ ಆ್ಯಕ್ಟ್ ಬರಬೇಕು. ಎಲ್ಲಾ ಸದಸ್ಯರು ಹೇಳಿದರೂ ಕೂಡಾ ಇಲ್ಲಿಯವರೆಗೂ ಏನೂ ಆಗಿಲ್ಲ. ಒಂದು ರಸ್ತೆಯನ್ನು ಮಾಡಬೇಕಾದರೆ, ಎಸ್ಟೀಮೆಟ್ ಮಾಡಿ ಕಳಿಸಬೇಕು. ಅದು ಮಂಜೂರು ಆಗಿ ಬರಬೇಕು ಬರುವ ಹೊತ್ತಿಗೆ ಸಾಮಾನುಗಳ ಬೆಲೆ ಏರಿರುತ್ತದೆ. ಹತ್ತು ಸಾವಿರ ರೂಪಾಯಿಗಳ ಅಂದಾಜು ಎಂಭತ್ತು ಸಾವಿರ ರೂಪಾಯಿಗಳಿಗೆ ಬದಲಾವಣೆಯಾಗಬೇಕಾಗುತ್ತದೆ. ಹೀಗಾಗಿ ಕೆಲಸಗಳು ಬೇಗ ನಡೆಯಲು ಸಾಧ್ಯವಿಲ್ಲದಂತಾಗಿದೆ.

ಬಸ್ಸುಗಳ ವಿಷಯವಾಗಿ ಎಷ್ಟೋ ಹೇಳಿದ್ದಾರೆ ನಮ್ಮ ಸರ್ಕಾರ ಬಸ್ಸುಗಳನ್ನು ಕೊಳ್ಳಬೇಕಾದರೆ ಮಂದಿ ನೋಡಿ ಅವರ ಮೇಲೆ ಅವಲಂಬನೆಯಾಗುತ್ತದೆ. ಖರೀದಿ ಮಾಡುವಾಗ ಕಮೀಷನ್ ವಿಚಾರಕ್ಕೆ ಪ್ರಾಮುಖ್ಯತೆ ಕೊಡುವುದರಿಂದ ಬ್ರೆಕ್ ಇತ್ಯಾದಿ ಸಾಮಾನುಗಳು ಸರಿಯಾಗಿವೆಯೇ ಎಂಬುದನ್ನು ಸರಿಯಾಗಿ ನೋಡುವುದಿಲ್ಲ. ಏನಾದರೂ ತೊಂದರೆಯಾದರೆ ಬಡ ಡ್ರೈವರ್ ಮೇಲೆ ತಪ್ಪನ್ನು ಹೊರಿಸುತ್ತಾರೆ. ಇದಕ್ಕೆ ಅವಕಾಶ ವಿರಬಾರದು; ಮತ್ತು ದಯವಿಟ್ಟು ಎಲ್ಲಾ ಆಫೀಸುಗಳಲ್ಲಿ ಕಾಗದ ಪತ್ರಗಳ ವಿಲೇವಾರಿ ಮುಂತಾದ್ದು ನಿಧಾನವಾಗದಂತೆ ನೋಡಿಕೊಳ್ಳಬೇಕೆಂದು ಸರ್ಕಾರವನ್ನು ಕೇಳಿಕೊಳ್ಳುತ್ತೇನೆ.

ಹೈದರಾಬಾದ್ ಕರ್ನಾಟಕದ ನೌಕರರಿಗೆ, ಮೊದಲು ಮತ್ತು ಎರಡನೆಯ ದರ್ಜೆ ಗುಮಾಸ್ತರು ಮತ್ತು ಇತರ ಆಫೀಸರುಗಳಿಗೆ, ಅನ್ಯಾಯವಾಗಿದೆ. ಅಲ್ಲಿ ಫಸ್ಟ್ ಡಿವಿಜನ್ ಕೆಲಸ ಮಾಡಿದ ಜನ ಈ ಆಫೀಸಗಳಲ್ಲಿ ಅಸಿಸ್ಟೆಂಟ್ ಕಮೀಷನರ್‌ರಾಗಿದ್ದಾರೆ. ಅಲ್ಲಿ ಅಸಿಸ್ಟೆಂಟ್ ಕಮೀಷನರ್‌ರಾಗಿದ್ದವರು ಇಂದಿಗೂ ಹಾಗೇ ಉಳಿದಿದ್ದಾರೆ. ಉದಾಹರಣೆಗಾಗಿ ಮುನಿಸಿಪಾಲಿಟಿ ಎಗ್ಜಿಕ್ಯೂಟಿವ್ ಆಫೀಸರ್ ರಾಗಿದ್ದವರು ಇಂದು ಕೂಡಾ ಡೆವಲೆಪ್‌ಮೆಂಟ್ ಕೌನ್ಸಿಲ್ ಸೆಕ್ರೆಟರಿಗಳಾಗಿ ಹಾಗೆಯೇ ಉಳಿದಿದ್ದಾರೆ. ಇಷ್ಟೇ ಅಲ್ಲ, ಹೈದರಾಬಾದ್ ಕರ್ನಾಟಕದಿಂದ ಬರತಕ್ಕವರಿಗೆ ಇಲ್ಲಿ ಸರ್ಕಾರದಲ್ಲಿ ಎಷ್ಟು ಭಾಗದಷ್ಟು ಕೆಲಸ ಸಿಕ್ಕ ಬೇಕೋ ಅಷ್ಟು ಸಿಕ್ಕುವುದಿಲ್ಲ. ಹೋದಸಲ 120 ಜನರು ಡ್ರಾಫ್ಟ್‌ಮನ್‌ಗಳ ಹುದ್ದೆಗಾಗಿ ಅರ್ಜಿ ಹಾಕಿ ಕೊಂಡಿದ್ದರು. ಅವರಲ್ಲಿ ಒಬ್ಬರು ಕೂಡಾ ಸೆಲೆಕ್ಟ್ ಆಗಿಲ್ಲ ಇದರಿಂದಾಗಿ ಅಲ್ಲಿರತಕ್ಕಂಥ ವರಿಗೆ ಎಷ್ಟು ಕೆಟ್ಟ ಭಾವನೆ ಉಂಟು ಮಾಡುತ್ತದೆ ಎಂಬುದನ್ನು ನೀವೇ ಯೋಚನೆ ಮಾಡಿ. ನಾನೇನು ಕಮ್ಯುನಿಸ್ಟ್ ಮತದವನಾಗಿ ವಿಶ್ವ ಭ್ರಾತೃತ್ವದಲ್ಲಿ ನಂಬಿಕೆ ಇರುವವನಾದರೂ ಅಲ್ಲಿನ ಜನರು ಹೇಗೆ ಹೇಳುತ್ತಾರೆಂಬುದನ್ನು ತಾವು ನೋಡಬೇಕು. ಹೈದರಾಬಾದ್ ಕರ್ನಾಟಕದಲ್ಲಿ ಕಾಂಗ್ರೆಸ್ಸಿನವರೂ ಕೂಡಾ ಇದನ್ನೇ ಹೇಳುತ್ತಿದ್ದಾರೆ. ಮಿಕ್ಕ ಎಲ್ಲಾ ಭಾಗಗಳಿಂದಲೂ ಜಿಲ್ಲಾವಾರು ನಾಲ್ಕು- ನಾಲ್ಕು ಮಂತ್ರಿಗಳು ತೆಗೆದುಕೊಂಡಿದ್ದಾರೆ. ನಮ್ಮ ಹೈದರಾಬಾದ್- ಕರ್ನಾಟಕದಿಂದ ಮೂರು ಜನರನ್ನು ಕೂಡಾ ತೆಗೆದುಕೊಂಡಿಲ್ಲ. ನಿಮ್ಮ ಪಾರ್ಟಿಯಲ್ಲಿ ಕೂಡಾ ಪ್ರಶ್ನೆ ಎದ್ದಿರಬಹುದು. ಅವರ ಪರವಾಗಿಯೇ ನಾನು ಹೇಳುತ್ತಿದ್ದೇನೆ. ಹೇಳುವುದರ ತಾತ್ಪಾರ್ಯ ಇಷ್ಟೇ. ತಾವು ಹೈದರಾಬಾದ್ - ಕರ್ನಾಟಕವನ್ನು ನೆಗ್‌ಲೆಕ್ಟ್ ಮಾಡುತ್ತಿದ್ದೀರಿ ಎಂಬುದನ್ನು ತಮ್ಮ ಗಮನಕ್ಕೆ ತರುವುದೇ ನನ್ನ ಉದ್ದೇಶ. ಸರಕಾರಿ ಹುದ್ದೆಗಳ ವಿಷಯದಲ್ಲಿ ಅಲ್ಲ; ವಿದ್ಯಾಭ್ಯಾಸದಿಂದಲೂ ಈ ಭಾಗ ಹಿಂದುಳಿದಿದೆ. ಆಂಧ್ರ ಪ್ರದೇಶದಲ್ಲಿದ್ದಾಗ ನಮ್ಮ ಗತಿ ಏನಿತ್ತೋ ಈಗಲೂ ಅದೇ ಆಗಿದೆ. ಹೀಗಾಗಿ ಅಲ್ಲಿರತಕ್ಕ ಜನರಿಗೆ ಈ ಸರಕಾರದಲ್ಲೇ ವಿಶ್ವಾಸ ಕಡಿಮೆಯಾಗುತ್ತಿದೆ ಎಂದರೂ ಹೆಚ್ಚಲ್ಲ. ಅಲ್ಲದೆ ಅಲ್ಲಿರುವ ಕೆಲವು ಜನರು ಇದಕ್ಕಾಗಿ ಬೇರೊಂದು ಚಳುವಳಿಯನ್ನೇ ಶುರು ಮಾಡುವುದನ್ನು ಕೂಡಾ ಯೋಚನೆ ಮಾಡುತ್ತಿದ್ದಾರೆ. ಅದಕ್ಕೆ ಅವಕಾಶ ಕೊಡಬೇಡಿ ಎಂದು ನಾನು ವಿನಂತಿ ಮಾಡಿಕೊಳ್ಳುತ್ತೇನೆ.

## (6) ಪೊಲೀಸ್ ಮಸೂದೆಯ ಬಗ್ಗೆ *

ಅಧ್ಯಕ್ಷರೇ, ಈ ಪೊಲೀಸ್ ಮಸೂದೆ ನಾನು ಕೇಳಿದ್ದಾಗ ಸೆಲೆಕ್ಟ್ ಸಮಿತಿಗೆ ಹೋಯಿತು. ಆ ಕಾಲಕ್ಕೆ ನಮಗೆ ಇದು ಸೆಲೆಕ್ಟ್ ಕಮಿಟಿಯಿಂದ ಉತ್ತಮ ರೀತಿಯಲ್ಲಿ ಬರುತ್ತದೆಂದು ವಿಶ್ವಾಸವಿತ್ತು. ಆದರೆ ಇದು ಮೊದಲಿಗಿಂತ ಸ್ವಲ್ಪ ಕಡಿದಾಗಿ ಬಂದಿದೆ ಎಂದು ನನಗನಿಸುತ್ತದೆ. ಬ್ರಿಟಿಷರು ತಮ್ಮ ರಾಜ್ಯವನ್ನು ಉಳಿಸುವ ಸಲುವಾಗಿ ಯಾವ ರೀತಿಯಿಂದ ಒಂದು ಕಾಯಿದೆಯನ್ನು ಮಾಡಿಕೊಂಡು ಬಂದರೋ ಅದಕ್ಕಿಂತ ಕಠಿಣವಾಗಿ ಈ ಕಾಯಿದೆ ನಮ್ಮ ಮುಂದೆ ಬರುತ್ತಿದೆ. ಮಾನ್ಯ ಮಂತ್ರಿಗಳು ಅನುಭವಸ್ಥರು ಇದರಲ್ಲಿ ಏನೇನು ನ್ಯೂನತೆಗಳಿವೆ ಎಂದು ಗೊತ್ತಿದ್ದರೂ ಎಲ್ಲರ ಸಂಪರ್ಕದಿಂದ, ಖಾದಿ ಬಟ್ಟೆಯ ಸಂಪರ್ಕದಿಂದ ಈ ತರಹ ಬಂದಿದೆಯೆಂದು ನನಗನ್ನಿಸುತ್ತದೆ.

ಕ್ಲಾಸ್ 53ರ ವಿಷಯವಾಗಿ ಹೇಳಬೇಕಾದರೆ ಹಿಂದೆ ಬ್ರಿಟಿಷರು ಇಲ್ಲಿ ರಾಜಕೀಯ ಚಟುವಟಿಕೆಗಳು ಏಳಬಾರದು ಎಂದು, ರಾಷ್ಟ್ರೀಯ ಜಾಗೃತಿ ಬೆಳೆಯಬಾರದು ಎಂದು ಮೊದಲು ಇಲ್ಲಿಯ ಕಾಯಿದೆಯನ್ನು ಮುಂಬೈ ರಾಜ್ಯದಲ್ಲಿ ತಂದರು. ಸೋಲಾಪುರದಲ್ಲಿ ಮಲ್ಲಪ್ಪ ಧನಶೆಟ್ಟಿ, ಮತ್ತು ಸಾರ್ಡ್, ಇಕ್ಬಾಲ್ ಹುಸೇನ್ ಎಂಬ ಒಟ್ಟು ನಾಲ್ಕು ಜನರು ಬಂಡು ಎದ್ದರು, ದೇಶದ ಸ್ವಾತಂತ್ರ್ಯದ ಸಲುವಾಗಿ. ಆ ಕಾಲಕ್ಕೆ ಇಂಥ ಕಾಯಿದೆಯನ್ನು ತಂದರು. ದೇಶದಲ್ಲಿ ಜನಜಾಗೃತಿ ಬೆಳೆಯುವುದಕ್ಕೆ ಅವಕಾಶ ಕೊಡಬಾರದೆಂದು, ಕಲೆಕ್ಟಿವ್ ಫೈನ್ ಹಾಕಿ, (ಸಾಮೂಹಿಕ ದಂಡವನ್ನು ಹಾಕಿ) ರಾಜಕೀಯ ಚಟುವಟಿಕೆಗಳು ಹೆಚ್ಚಾಗಬಾದೆಂದು ತಿಳಿದು ಮುಂಬೈ ಪ್ರಾಂತ್ಯದಲ್ಲಿ ಇಂಥ ಕಾಯಿದೆಯನ್ನು ತಂದರು. ಆ ಕಾಲಕ್ಕೆ ಹೈದರಾಬಾದ್ ಭಾಗದಲ್ಲಿ ಮುಸಲ್ಮಾನರು ನಮ್ಮ ಮೇಲೆ ಬಿದ್ದು ಗಲಭೆ ಮಾಡುತ್ತಿದ್ದಾರೆ ಎಂದು ಜನರು ಹೇಳಿದರು. ಬ್ರಿಟಿಷ್ ಸರಕಾರ, ಹಿಂದು ಮುಸಲ್ಮಾನರಲ್ಲಿ ಪೇಡ್ ಗುಂಡಾಸನ್ನು ಸೇರಿ ಮತೀಯ ಗಲಭೆಯನ್ನು ಮಾಡಿದಾಗ ಅದರಲ್ಲಿ ಭಾಗವಹಿಸಿದವರಿಗೆ ಮಾತ್ರ ಸಾಮೂಹಿಕ ದಂಡವನ್ನು ವಿಧಿಸುತ್ತಾರೆಯೇ ಹೊರತು ರಾಷ್ಟ್ರೀಯ ದೃಷ್ಟಿಯಿಂದ ಮಾಡುವುದಿಲ್ಲವೆಂದು ಹೇಳಿದ್ದಾರೆ. ಕಾಂಗ್ರೆಸ್ ಅಹಿಂಸಾವಾದ ತತ್ವದ ಮೇಲೆ ನಡೆಯುವುದು ಎಂದು ಹೇಳುವಾಗ ಸಾಮೂಹಿಕ ದಂಡವನ್ನು ಹಾಕುವುದಕ್ಕೆ ಅವಕಾಶವನ್ನು ಕೊಡುವಂಥ ಕಾಯಿದೆಯನ್ನು ತಂದಿರುವುದನ್ನು ನೋಡಿದರೆ, ಆಶ್ಚರ್ಯವಾಗುತ್ತದೆ.

ಯಾವ ಉದ್ದೇಶದಿಂದ ಬ್ರಿಟಿಷರು ಮಾಡಿದರೋ ಅದನ್ನು ಸ್ವಾತಂತ್ರ್ಯ ಬಂದ 15 ವರ್ಷ ನಂತರ ಕಾಂಗ್ರೆಸ್ ಬಗ್ಗೆ ಜನರ ವಿಶ್ವಾಸ ಕಡಿಮೆಯಾಗುತ್ತ ಬಂದ ನಂತರ ಇದನ್ನು ತಂದು ಜನರ ಮೇಲೆ ದಬ್ಬಾಳಿಕೆ ನಡೆಸುತ್ತೀರೆಂಬ ಅಂಜಿಕೆ ಇದೆ. ಏಕೆಂದರೆ ಈ ದೇಶದಲ್ಲಿ ಕಾರ್ಮಿಕ ವರ್ಗ ಬಹಳ ಜಾಗೃತವಾಗಿ ಕೂಲಿಕಾರ ಜನರು ಬಹಳ ಜಾಗೃತರಾಗಿದ್ದಾರೆ.

* ವಿಧಾನಸಭೆಯ ನಡವಳಿಕೆಯ ದಿನಾಂಕ ಸೆಪ್ಟೆಂಬರ್, 1963

ನಾಳೆ ಕೆ.ಜಿ.ಎಫ್. ನಲ್ಲಾಗಲೀ ಗುಲ್ಬರ್ಗಾದಲ್ಲಾಗಲಿ ಯಾರಾದರೂ ಜನರು ತಮ್ಮ ಕಾರ್ಮಿಕ ಹಿತಾಸಕ್ತಿ ಸಲುವಾಗಿ ನಮಗೆ ಹೆಚ್ಚು ಸಂಬಳ ಕೊಡಿ, ತುಟ್ಟಿ ಭತ್ಯೆ ಬೇಕು ಎಂದರೆ ಮ್ಯಾನೇಜಮೆಂಟಿನವರು ಕೆಲವು ಗುಂಡಾಗಳನ್ನು ನೇಮಿಸಿಕೊಂಡು ಅವರ ಜೊತೆಯಲ್ಲಿ ದಂಗೆ ಎಬ್ಬಿಸಿದರೆ ಆ ನಂತರ ಸರಕಾರ ಸಾಮೂಹಿಕ ದಂಡ ಹಾಕುತ್ತಾರೆಂದೂ, ಅದಕ್ಕಾಗಿ ಇದನ್ನು ತಂದಿದ್ದಾರೆ ಎನ್ನುವ ಭಯ ಬರುತ್ತದೆ.

ಇದರ ಸಲುವಾಗಿ ತಂದಿರಬಹುದು ಎಂದು ಅನಿಸುತ್ತದೆ. ಆದ ಕಾರಣ ತಾವು ದಯವಿಟ್ಟು ಇದನ್ನು ವಾಪಸ್ಸು ತೆಗೆದುಕೊಂಡು 'ಡಿಲಿಟ್' ಮಾಡಿದರೆ ಒಳ್ಳೆಯದಾಗುತ್ತದೆ ಎಂದು ನಾನು ತಮ್ಮಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ಅಸಾಮಾಜಿಕ ಅಂಶಗಳು ಇರುತ್ತವೆ; ಸಾಕ್ಷಿ ಸಿಗುವುದಿಲ್ಲ ಎಂದು ಮಾನ್ಯ ಮಂತ್ರಿಗಳು ಹೇಳಿದರು. ಆ ರೀತಿ ಏನೂ ಇಲ್ಲ ಬಹಳ ಒಳ್ಳೆಯ ಜನ ಇದ್ದಾರೆ ಎಂದು ಹೇಳುತ್ತೇನೆ. ಏಕೆಂದರೆ ಹಿಂದೆ ಬ್ರಿಟಿಷರ ಕಾಲದಲ್ಲಿ ದೇಶದ ಸಲುವಾಗಿ ತ್ಯಾಗ ಮಾಡತಕ್ಕ ಜನರ ಮೇಲೆ ಕೇಸು ಹಾಕತಕ್ಕ ಕಾಲಕ್ಕೆ ಸಾಕ್ಷಿ ಸಿಗುತ್ತಿರಲಿಲ್ಲ. ಆದರೆ ಈಗಿನ ರೀತಿ ಇಲ್ಲ. ಅಸಾಮಾಜಿಕ ಅಂಶಗಳ ಬಗ್ಗೆ ಸಾಕ್ಷಿ ಕೊಡತಕ್ಕ ಜನರು ಸಿಗುತ್ತಾರೆ. ಹಿಂದೆ ನಡೆಯುತ್ತಿದ್ದಕ್ಕೆ ತದ್ವಿರುದ್ಧವಾಗಿ ಈಗ ಪೊಲೀಸ್‌ನವರಿಗೂ ಅವರಿಗೂ ಸಂಬಂಧ ಇರುತ್ತದೆ; ಉದಾಹರಣೆಗೆ ಪ್ರೋಹಿಬಿಷನ್ ಮತ್ತು ಗ್ಯಾಂಬ್ಲಿಂಗ್ ಡೆನ್‌ಗಳಲ್ಲಿ ಅವರವರಿಗೆ ಯಾವ ಸಂಬಂಧವಿರುತ್ತದೆ ಎಂಬುದನ್ನು ನೋಡಬಹುದು.

ಶ್ರೀ ಆರ್.ಎಂ. ಪಾಟೀಲ್: ಕಾರಣ, ಪರಿಸ್ಥಿತಿಯನ್ನು ನಿಯಂತ್ರಿಸಲು ಈ ತರಹದ ವ್ಯವಸ್ಥೆಗಳು ತಮಗೆ ಬೇಕಾಗಿಲ್ಲ. ಅದೇ ತಮ್ಮ ಅಂದಾಜಿನ ಸಾರಾಂಶವಾಗಿರುತ್ತದೆ.

ಶ್ರೀ **ಗಂಗಾಧರ** ನಮೋಶಿ ಅದಕ್ಕೆ ಬೇರೆ ರೀತಿಯಲ್ಲಿ ಮಾಡತಕ್ಕ ಅಧಿಕಾರ ಈಗಾಗಲೀ ನಿಮ್ಮ ಹತ್ತಿರ ಇದೆ.

ಶ್ರೀ ಆರ್.ಎಂ. ಪಾಟೀಲ್: ಆ ವ್ಯವಸ್ಥೆಗಳು ಸೂಕ್ತ ಎಂಬುದನ್ನು ತಾವು ಸೂಚಿಸಿರಿ. ಅದಕ್ಕಾಗಿಯೇ ಈ ವ್ಯವಸ್ಥೆಯನ್ನು ತರಲಾಗಿದೆ. ತಾವು ಒಂದು ವೇಳೆ ತಿದ್ದುಪಡಿ ಸೂಚಿಸಿದರೆ, ಅದು ಯಾವಾಗಲೂ ಸ್ವಾಗತಾರ್ಹ.

ಶ್ರೀ **ಗಂಗಾಧರ** ನಮೋಶಿ: ಬರೀ ವರ್ಕಿಂಗ್ ಕ್ಲಾಸ್ ಮೇಲೆ ಹಾಕಬಹುದು ಎಂದು ನಮಗೆ, ಭಯ, ಸಂಶಯ ಇದೆ ಎಂಬುದನ್ನು ಸರಕಾರದ ಗಮನಕ್ಕೆ ತರುತ್ತಾ ಇದ್ದೇನೆ. ಮುಂಬೈನಂಥ ಜಾಗದಲ್ಲಿ ಸರಕಾರ ಯಾವ ಕಾಯಿದೆಯನ್ನು ಮಾಡಿದರೂ ಅದನ್ನು ಮುಂಬೈ ಬಂದ್ ಕರೆ ಕಾಲದಲ್ಲಿ ಜಾರಿ ಮಾಡುವುದಕ್ಕೆ ಆಗಲಿಲ್ಲ. ಮೈಸೂರಿನಲ್ಲಿ ವರ್ಕಿಂಗ್ ಕ್ಲಾಸ್ ಜಾಗೃತಿ ಮಾಡುತ್ತೀರಿ ಎಂದು - ಇದರ ಸಲುವಾಗಿ ಇದನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ಹೇಳುತ್ತೇನೆ. ವಾಪಸ್ ತೆಗೆದುಕೊಳ್ಳಲಿಲ್ಲ ಎಂದರೆ ಈ ಹೌಸಿನಲ್ಲಾದರೂ ಅವರ ಮೇಲೆ ಉಪಯೋಗ ಮಾಡುವುದಿಲ್ಲ ಎಂದು ಗ್ಯಾರಂಟಿ ಕೊಡಬೇಕು?

ಆರ್.ಎಂ. ಪಾಟೀಲ್: ಎಲ್ಲಿಯವರೆಗೆ, ಕಾರ್ಮಿಕರಾರನ್ನು ಅಥವಾ ಯಾರಾದರುನ್ನು, ಒಳ್ಳೆಯ ರೀತಿಯಿಂದ ಪರಿಗಣಿಸಿದರೆ, ಈ ವ್ಯವಸ್ಥೆಗಳು ಅನ್ವಯವಾಗುವುದೇ ಇಲ್ಲ.

ಗಂಗಾಧರ ನಮೋಶಿ: ನಮಗೆ ಅದರ ಅನುಭವ ಇದೆ. ಇವತ್ತು ಯಾರು ಮಂತ್ರಿಗಳಾಗಿದ್ದಾರೆ ಅವರು ಬ್ರಿಟಿಷರ ಕಾಲದಲ್ಲಿ ವಿರೋಧ ಪಕ್ಷದಲ್ಲಿದ್ದರು. ಆಗ ಅವರು ಇದೇ ರೀತಿ ಮಾತನಾಡುತ್ತಿದ್ದರೇ ಎಂದು ಕೇಳಬೇಕಾಗುತ್ತದೆ.

ಚಾಪ್ಟರ್ 3ರಲ್ಲಿ ಬ್ರಿಟಿಷರ ಕಾಲಕ್ಕೆ ಏನಿತ್ತೋ ಅದೇ ಇವತ್ತೂ ಇದೆ. ಪೋಲೀಸ್ ಆಫೀಸರು ತಪ್ಪು ಮಾಡಿದರೆ ಜನರ ಅರ್ಜಿ ಹೋದನಂತರ ಎನ್‌ಕ್ವೆಯರಿ ನಡೆಯಿತು, ಅವರನ್ನು ಸಸ್‌ಪೆನ್‌ಷನ್‌ನಲ್ಲಿ ಇಟ್ಟರು ಅಥವಾ ಇಡಬೇಕು ಎನ್ನುವುದಕ್ಕೆ ಅವಕಾಶವಿಲ್ಲ. ಎಲ್ಲಿಯವರೆಗೆ ಪೋಲೀಸರನ್ನು ಸಸ್‌ಪೆಂಡ್ ಮಾಡುವುದಿಲ್ಲವೋ ಅಲ್ಲಿಯವರೆಗೂ ವಿಟನೆಸ್ ಸಿಕ್ಕುವುದಿಲ್ಲ. ವಿಚಾರಣೆ ಯಾಗುವುದಿಲ್ಲ. ಆದಕಾರಣ ದಯಮಾಡಿ ಅದನ್ನೂ ಕೂಡ ಇದರಲ್ಲಿ ಸೇರಿಸಬೇಕು. ಒಳ್ಳೆಯ ಜನರಾಗಲೀ ಕೆಟ್ಟ ಜನರಾಗಲೀ ಅರ್ಜಿ ತಮ್ಮ ಹತ್ತಿರ ಕೊಟ್ಟರೆ ಅದರ ಮೇಲೆ ವಿಚಾರಿಸತಕ್ಕ ಸುದ್ದಿ ಮಾಡಿದರೆ ಅಂತಹ ಕಾಲದಲ್ಲಿ ಪೋಲೀಸ್ ಆಫೀರಸ್ ಆ ಪರ್ಟಿಕ್ಯುಲರ್ ಪ್ಲೇಸ್‌ನಲ್ಲಿ ಬರಬಾರದು ಎಂದು ಇದರಲ್ಲಿ ಸೇರಿಸಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ.

ಸೆಕ್ಷನ್‌ಸಿ 170ರಲ್ಲಿ " Suits or prosecutions in respect of Acts done under of duty as afore said not to be entertained without sanction of Government" "ಸೂಟ್ಸ ಆರ್ ಪ್ರೋಸೆಕ್ಯುಷನ್ಸ್ ಇನ್ ರೆಸ್ಪೆಕ್ಟ್ ಆಫ್ ಆಕ್ಟ್ಸ ಡನ್ ಅಂಡರ್ ಆಫ್ ಡ್ಯೂಟಿ ಆ್ಯಜಿ ಅಫೋರಸೇಡ್ ನಾಟ್‌ಟು ಬಿ ಎಂಟರ್‌ಟೈನ್ಡ್ ವಿತೌಟ್ ಸ್ಯಾಂಕ್ಷನ್ ಆಫ್ ಗೌರ್ನಮೆಂಟ್" ಎಂದು ಇದೆ. ಯಾವುದೇ ಆಫೀಸರು ನಮ್ಮ ಮೇಲೆ ಏನೇ ಮಾಡಿದರೂ ಅಂಥವರ ಮೇಲೆ ಕ್ರಮ ತೆಗೆದುಕೊಳ್ಳಬೇಕೆಂದು ಸೂಚಿಸಿದರೆ ಸರಕಾರದ ಪರವಾನಿಗೆ ಇಲ್ಲದೆ ಕೋರ್ಟಿಗೆ ಹೋಗುವ ಹಾಗಿಲ್ಲ. ಕೋರ್ಟಿಗೆ ಇದ್ದ ಅಧಿಕಾರವನ್ನು ಸರ್ಕಾರದವರು ತೆಗೆದುಕೊಂಡಿದ್ದಾರೆ ಎಂದು ನನಗೆ ಅನಿಸುತ್ತದೆ. ನನ್ನ ಮೇಲೆ ಅಪಚಾರ ಮಾಡಿರುತ್ತಾರೆ ಅವರ ಮೇಲೆ ಪೆಟೀಷನ್ ಕೇಸು ಹಾಕಬೇಕೆಂದು ಸರಕಾರದ ಪರವಾನಿಗೆ ತೆಗೆದುಕೊಳ್ಳಬೇಕು; ನನಗೆ ಸ್ವಂತ ಅಧಿಕಾರವಿದೆ, ನಾನು ಜೈಲಿನಲ್ಲಿದ್ದಾಗ ಎಷ್ಟೇ ಬರೆದರೂ ಸಹ ಒಂದು ಸರ್ಕ್ಯುಲರ್ ಕಾಪಿ ಇರುತ್ತದೆ. "ಯುವರ್ ಮ್ಯಾಟರ್ ಇಜ್ ಅಂಡರ್ ಕನ್‌ಸಿಡರೇಷನ್, ವ್ಹಿ ವಿಲ್ ಲುಕ್ ಇನಟು ದ ಮ್ಯಾಟರ್" ಎಂದು ತಿಳಿಸುತ್ತಾರೆ. ಸರಕಾರದವರಿಗೆ ಬರೆದು ಇಂಥ ಆಫೀಸರು ಹೀಗೆ ಮಾಡಿದ್ದಾರೆ ಕೋರ್ಟಿಗೆ ಹೋಗಬೇಕು. ಪರವಾನಿಗೆ ಕೊಡಿರಿ ಎಂದರೆ "ದ ಮ್ಯಾಟರ ಇಜ್ ಅಂಡರ್‌ಕನ್‌ಸಿಡರೇಷನ್" ಎಂದು ಹೇಳುತ್ತೀರಿ ಎಂ.ಎಲ್.ಎ. ಆದ ನನ್ನ ಕಾಗದಕ್ಕೇ ಈ ತರಹ ಆದರೆ ಬೇರೆಯವರಿಗೆ ಎಷ್ಟು ದಿವಸವಾಗುತ್ತದೆಯೋ ನನಗೆ ಗೊತ್ತಿಲ್ಲ. ಪರ್ಮಿಷನ್ ಎನ್ನುವುದನ್ನು ಹಾಕಿ ಕೋರ್ಟಿಗೆ ಹೋಗುವುದಕ್ಕೆ ಅವಕಾಶ ಕೊಡಬೇಕು. ಕೋರ್ಟಿಗೆ ಇರತಕ್ಕ ಹಕ್ಕು ಬಾಧ್ಯತೆಗಳನ್ನು ತಾವು ತೆಗೆದುಕೊಂಡಿದ್ದೀರಿ ಎಂದು ಇಷ್ಟು ಮಾತು ಹೇಳಿ ನನಗೆ ಮಾತನಾಡಲು ಅವಕಾಶ ಕೊಟ್ಟದ್ದಕ್ಕಾಗಿ ತಮ್ಮನ್ನು ವಂದಿಸುತ್ತೇನೆ.

## (8) ಫ್ಯಾಕ್ಟರಿ ಕಾಯ್ದೆ ಬಗ್ಗೆ *

ಅಧ್ಯಕ್ಷರೆ, ಮಾನ್ಯ ಕಾರ್ಮಿಕ ಮಂತ್ರಿಗಳು ಮಾಸೂದೆಯನ್ನು ಮಂಡಿಸುತ್ತಾ ಒಳ್ಳೆಯ ರೀತಿಯಲ್ಲಿ ವಿವರಗಳನ್ನು ಕೊಟ್ಟಿದ್ದಾರೆ. ಅಪ್ರೋಚ್ ಇಟ್ಟುಕೊಂಡು ಮಸೂದೆಗೆ ಅನುಮತಿ ಪಡೆಯಲು ನಮ್ಮ ಮುಂದಿಟ್ಟಿದ್ದಾರೆ. ಇದನ್ನು ಸ್ವಾಗತ ಮಾಡುತ್ತೇವೆ. ಆದರೆ ಇದನ್ನು ತರುವುದು ಸ್ವಲ್ಪ ತಡವಾಗಿದೆಯೆಂದು ನನಗಿಸುತ್ತದೆ. ಎಲ್ಲಾ ಬಿಲ್ಲುಗಳು ಸೆಲೆಕ್ಟ್ ಕಮಿಟಿಗೆ ಹೋಗಿ ಎರಡೆರಡು ವರ್ಷಗಳು ಹಿಂದಕ್ಕೆ ಸಭೆಗೆ ಬಂದಂತಹ ಅನುಭವ ನಮಗಿದೆ. ಆ ರೀತಿ ಈ ಮಸೂದೆಗೆ ಆಗಕೂಡದು. ಇದು ಬೇಗ ಸೆಲೆಕ್ಟ್ ಕಮಿಟಿಗೆ ಹೋಗಿ ಹಿಂದಕ್ಕೆ ಬಂದು, ಬಹಳ ತೀವ್ರವಾಗಿ ಅಮಲಾಗಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ.

ಅಷ್ಟರಲ್ಲಿ ಮಾನ್ಯ ಮಂತ್ರಿಗಳು ಇದನ್ನು ಸೆಂಟ್ರೆಲ್ ಆ್ಯಕ್ಟ್ ಆಗಿ ಬರುವ ಸಮಯದವರೆಗೆ ಬಲವಂತ ಮಾಡಬೇಕು. ಇದು ಸೆಂಟ್ರಲ್ ಆ್ಯಕ್ಟ್ ಆಗಿ ಬಂದರೆ ಒಳ್ಳೆಯ ರೀತಿಯಲ್ಲಿ ಫಲಕಾರಿಯಾಗಿ ಜಾರಿಗೆ ಬರುತ್ತದೆ. ಇಲ್ಲದೆ ಹೋದರೆ ಕೇರಳದವರು, ಮದ್ರಾಸ, ಸರ್ಕಾರ ಇದನ್ನು ಕೊಟ್ಟಿಲ್ಲವೆಂದು ಸ್ವಸ್ಥವಾಗಿರುತ್ತಾರೆ. ಮದ್ರಾಸಿನವರು, ಮೈಸೂರಿನವರು ಜಾರಿಯಲ್ಲಿದೆ ಎಂದು ಕಾಯಬಹುದು. ಮೈಸೂರಿನವರು ಒರಿಸ್ಸಾ ಸರಕಾರ ಮೊದಲು ಇದನ್ನು ಆಗಲಿ ಎಂದು ಸುಮ್ಮನಿರಬಹುದು. ಹೀಗೆ ಒಂದು ರಾಜ್ಯದವರು ಇನ್ನೊಂದು ರಾಜ್ಯ ಆ್ಯಕ್ಟನ್ನು ಮಾಡಲಿ ಎಂದು ನಿರೀಕ್ಷೆ ಮಾಡಿಕೊಂಡು ಮುಂದಕ್ಕೆ ಹಾಕುತ್ತಾ ಹಾಕುತ್ತಾ ಹೋಗುತ್ತಾರೆ; ಈ ಮಸೂದೆಯನ್ನು ಪ್ರಚಾರ ಮಾಡದಿದ್ದರೆ, ಇಂಪ್ಲಿಮೆಂಟ್ ಮಾಡುವುದನ್ನು ರಾಜ್ಯ ಸರಕಾರಗಳು ಪೆಂಡಿಂಗ್ ನಲ್ಲೇ ಇಡುತ್ತವೆ. ಆದ್ದರಿಂದ ಎಲ್ಲಾ ಲೇಬರ್ ಮಿನಿಸ್ಟರುಗಳ ಕಾನ್‌ಫರೆನ್ಸಿನಲ್ಲಾಗಲಿ ಅಥವಾ ಬೇರೆ ಯಾವುದಾದರೂ ಸಂದರ್ಭದಲ್ಲಾಗಲಿ, ಮಾನ್ಯ ಮಂತ್ರಿಗಳು ಇದನ್ನು ಸೆಂಟ್ರಲ್ ಆ್ಯಕ್ಟ್ ಆಗಿ ಬರುವಂತೆ ಕೇಂದ್ರದ ಮೇಲೆ ಒತ್ತಾಯ ಹಾಕಬೇಕೆಂದು ಸೂಚಿಸುತ್ತೇನೆ.

ಮಾನ್ಯ ಮಂತ್ರಿಗಳ ಹೇಳಿದರು, ಮಿನಿಮಮ್ ವೇಜ್ ಆಕ್ಟ ಇಂಪ್ಲಿಮೆಂಟ್ ಮಾಡಿದ ಮೇಲೆ, ಇದ್ದ ಸವಲತ್ತುಗಳು ಕಾರ್ಮಿಕರಿಗೆ ಆಗಿವೆಯೆಂದು ಮಾನ್ಯ ಮಂತ್ರಿಗಳು ಇಷ್ಟು ಕಡೆ ನೋಡಿಕೊಂಡು ಬಂದಿದ್ದಾರೆ. ನಮ್ಮಲ್ಲಿ ಆ ಕಾನೂನು ಜಾರಿಗೆ ಬಂದಿಲ್ಲ ಅನ್ನುವುದು ಗೊತ್ತಿಲ್ಲವೇನೋ. ಇದರಲ್ಲಿ ಮಿನಿಮಮ್ ವೇಜ್ ಎಷ್ಟಿರಬೇಕೆಂದು ನಿರ್ಧಾರ ಮಾಡಿದ್ದಾರೆ ಆದರೆ, ಸಂಬಂಧಪಟ್ಟ ಇನ್ಸ್‌ಪೆಕ್ಟರುಗಳು ಕಾನೂನು ಇಂಪ್ಲಿಮೆಂಟ್ ಮಾಡದಿದ್ದವರ ಮೆಲೆ, ಕೇಸು ಹಾಕಿ ಪ್ರಾಸಿಕ್ಯೂಟ್ ಮಾಡಿದ್ದಾರೆ; ಮಾಲಿಕರಿಗೆ 50 ರೂಪಾಯಿ ಜುಲ್ಮಾನೆ ಹಾಕಿದ್ದಾರೆ. ಈ ಜುಲ್ಮಾನೆ ಹಣ ತೀರ ಕಡಿಮೆ. ಆದ್ದರಿಂದ ಜುಲ್ಮಾನೆಗೆ ಯಾರೂ ಹೆದರುವುದಿಲ್ಲ. ಮತ್ತು ಮಿನಿಮಮ್ ವೇಜಸ್ ಆಕ್ಟನ್ನು ಸಹ ಮಾಡಲಿಕ್ಕೆ ತಯಾರಿಲ್ಲ. ಅದೂ ಅಲ್ಲದೇ ಈ ಕಾನೂನಿನ ಪ್ರಕಾರ ಪ್ರಾಸಿಕ್ಯೂಟ್ ಮಾಡಲಿಕ್ಕೂ ಇನ್ಸ್‌ಪೆಕ್ಟರುಗಳು

* ವಿಧಾನಸಭೆಯ ನಡವಳಿಕೆಯ ದಿನಾಂಕ 12ನೇ ಸೆಪ್ಟೆಂಬರ್, 1963

ತಯಾರಿಲ್ಲ. ಆ ಇಲಾಖೆಯ ರೆಕಾರ್ಡುಗಳನ್ನು ತೆಗೆದುನೋಡಿ, ಎಷ್ಟು ಕೇಸುಗಳನ್ನು ಹಾಕಿದ್ದಾರೆ ಎನ್ನುವುದಕ್ಕೆ ಮಾನ್ಯ ಮಂತ್ರಿಗಳಿಗೆ ವೇಳೆ ಇದ್ದು, ಆ ಇನ್‌ಫಾರಮೇಷನ್ ಇದ್ದರೆ, ಅದನ್ನು ಈ ಮಾನ್ಯ ಸಭೆಯ ಮುಂದಿಡಬೇಕು. ಇವತ್ತಿನವರೆಗೆ ಮಿನಿಮಮ್ ವೇಜಸ್ ಆ್ಯಕ್ಟ್ ಪ್ರಕಾರ ಎಷ್ಟು ಕೇಸುಗಳನ್ನು ಹಾಕಿದ್ದಾರೋ ಅವು ಅಷ್ಟು ಯಶಸ್ವಿಯಾಗಿಲ್ಲ; ಏಕೆಂದರೆ ಬಹಳ ಕಡಿಮೆ ಜುಲ್ಮಾನೆ ಹಾಕಿದ್ದಾರೆ. ಗುಲ್ಬರ್ಗಾ ಜಿಲ್ಲೆಯಲ್ಲಿ 10-15 ಸಾವಿರ ಬೀಡಿ ಕಾರ್ಮಿಕರಿದ್ದಾರೆಂದು ಹೇಳಿದರು; ಅವರ ಲೆಕ್ಕದ ಪ್ರಕಾರ ಇಡೀ ರಾಜ್ಯದಲ್ಲಿ ಅವರ ಸಂಖ್ಯೆ 80 ಸಾವಿರ ಇದ್ದದ್ದು ಒಂದೂವರೆ ಲಕ್ಷಕ್ಕೂ ಮೇಲಕ್ಕೆ ಹೋಗಬಹುದು? ಹಳ್ಳಿ ಹಳ್ಳಿಯಲ್ಲಿ 25-30ಜನ ಕೆಲಸಗಾರರಿರತಕ್ಕ ಫ್ಯಾಕ್ಟರಿಗಳಿವೆ; ಅವರು ಷಹರಗಳಲ್ಲಿರುವುದನ್ನು ಮಾತ್ರ ಲೆಕ್ಕ ಹಾಕಿದ್ದಾರೆ. ಬೀದರ್ ಟೌನನಲ್ಲಿಯೇ ಆರು ಸಾವಿರ ಜನ ಕೆಲಸ ಮಾಡುತ್ತಾರೆ. ಆದರೆ ಸರಕಾರಿ ಇನ್ಸ್‌ಪೆಕ್ಟರು ಅಲ್ಲಿ ಒಂದೂ ಕೇಸು ಹಾಕಿಲ್ಲ. ಇತರ ಮಾನ್ಯ ಸದಸ್ಯರುಗಳು ಹೇಳಿದ ಹಾಗೆ ಆ ನಿಯಮವನ್ನು ಅವರಿಗೆ ಕೊಡತಕ್ಕ ಮಶಿನರಿ, ಎಂದರೆ ಸ್ಟ್ಯಾಫ್ ಏನಿದೆ, ಅದನ್ನು ಹೆಚ್ಚು ಮಾಡುವ ಅವಶ್ಯಕತೆಯಿದೆ ಎಂದು ನಾನು ಒತ್ತಾಯ ಮಾಡಿ ಮಾನ್ಯ ಮಂತ್ರಿಗಳಿಗೆ ಹೇಳುತ್ತೇನೆ.

ಆನಂತರ ಇಂಡಸ್ಟ್ರೀಯಲ್ ಪ್ರಿಮಿಸಸ್ ಎಂದು ಡಿಕ್ಲೇರ್ ಮಾಡುವ ಅಧಿಕಾರವನ್ನು ಈ ಕಾನೂನಿನ ಪ್ರಕಾರ ಹೊಂದಿದ್ದಾರೆ. ಆದರೆ ಕೆಲವು ಜನರನ್ನು ಇಟ್ಟುಕೊಂಡು ಬೀಡಿ ತಯಾರಿಸುತ್ತಿರುವ ಫ್ಯಾಕ್ಟರಿಗಳನ್ನು ಈ ಅರ್ಥ ವಿವರಣೆಯಿಂದ ಬಿಟ್ಟು ಬಿಡುತ್ತಾರೆ ಶಾಪ್ಸ್ ಎಸ್ಟಾಬ್ಲಿಷ್‌ಮೆಂಟ್ ಆಕ್ಟ್ ಲಾಗು ಆಗುವುದಿಲ್ಲ. ಇದರಲ್ಲಿ ಬೀಡಿಗೆ ಲೇಬಲ್ ಹಾಕತಕ್ಕಂಥ ಕ್ಲೆರಿಕಲ್ ಸ್ಟ್ಯಾಫ್, ಮುಂತಾದವರ್‍ಯಾರೂ ಬರುವುದಿಲ್ಲ. ಅವರನ್ನೂ ಇವರಲ್ಲಿ ಸೇರಿಸಬೇಕೆಂದು ಮಾನ್ಯ ಮಂತ್ರಿಗಳಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

ಸೆಲೆಕ್ಟ್ ಕಮಿಟಿಯಲ್ಲಿ ಕ್ಲಾಸು 9(1)ನ್ನು ಮತ್ತೊಮ್ಮೆ ಪರಿಶೀಲಿಸಿ ಅದನ್ನು ಬಲತ್ಕಾರವಾಗಿ ಜಾರಿಗೆ ಕೊಡುವಂತೆ ಮಾಡಬೇಕು.

ಇನ್ನು ಸದಸ್ಯರೆಲ್ಲರೂ ಮಾತನಾಡುತ್ತಾ ಎಲ್ಲ ಸಮಯದಲ್ಲಿಯೂ ಎಲ್ಲಾ ಫ್ಯಾಕ್ಟರಿಗಳಿಗೂ ಫ್ಯಾಕ್ಟರಿ ಆಕ್ಟ್ ಲಾಗು ಆಗುತ್ತದೆಂದು ಹೇಳಿದ್ದಾರೆ. ಆದರೆ ಈ ಕಾನೂನಿನಲ್ಲಿ 9 ಗಂಟೆಗಳ ಕಾಲಕ್ಕಿಂತ ಹೆಚ್ಚಾಗಿ ಕೆಲಸ ಮಾಡಲಾರದೆಂದು ಹೇಳಿದೆ, ಈ ನಿಯಮ ಸರಿಯಾದುದಲ್ಲ. ಈ ಕೆಲಸದ ಕಾಲವನ್ನು 8 ಗಂಟೆಗಳು ಎಂದು ನಿಗದಿ ಮಾಡಬೇಕೆಂದು ನಾನು ಮಂತ್ರಿಗಳಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

ಇನ್ನು 8ನೇ ಅಧ್ಯಾಯದಲ್ಲಿ ಕೂಲಿ ಸಹಿತ ಅದೇ ವಿಷಯವನ್ನು ಹೇಳಿದೆ; ಇದರಲ್ಲಿ ಫೆಸ್ಟಿವಲ್ ಹಾಲಿಡೇ ಗಳನ್ನೆಲ್ಲಾ ಸೇರಿಸಿಕೊಳ್ಳಬೇಕು.

ಶ್ರೀ ಡಿ. ದೇವರಾಜ ಅರಸ್: ಫೆಸ್ಟಿವಲ್ ಹಾಲಿಡೇ ಗಳಿಗೆ ಬೇರೆ ಕಾನೂನು ಮಾಡಿದೆ. ಇಂಡಸ್ಟ್ರೀಯಲ್ ಪ್ರಿಮಿಸೆಸ್ ಎಂದು ಡಿಕ್ಲೇರ್ ಮಾಡಿದ ಕೂಡಲೇ, ಆ ಕಾನೂನು ಅಲ್ಲೆಲ್ಲಾ ಅಕ್ಟ ಆಗುತ್ತದೆ.

ಶ್ರೀ ಗಂಗಾಧರ ನಮೋಶಿ ಸೆಕ್ಷನ್: 31 ನೋಟೀಸ್ ಆಫ ಡಿಸಮಿಸಲ್ ಬಗ್ಗೆ ಹೇಳಿದ ಕ್ಲಾಸು ಸರಿಯಾಗಿ ಡ್ರಾಫ್ಟ್ ಆಗಿ ಬಂದಿಲ್ಲ. ಇದು ನೌಕರರ ಹಿತಕ್ಕೆ ಅತೃಪ್ತಿಕರವಾಗಿ ಬಂದಿದೆ. ದಯವಿಟ್ಟು ಈ ಕ್ಲಾಸ್ನು ಕೂಲಿಗಾರ ಹಿತರಕ್ಷಣೆಗೆ ಏನೂ ಧಕ್ಕೆ ಬರದಂತೆ ಸರಿಯಾಗಿ ತಿದ್ದುಪಡಿ ಮಾಡಿಕೊಳ್ಳಬೇಕು. ಹೆಣ್ಣು ಮಕ್ಕಳು ಕೆಲಸ ಮಾಡುತ್ತಿದ್ದರೆ ಅವರ ಮೆಟರ್ನಿಟಿಯ ವಿಷಯ ಇದರಲಿಲ್ಲ; ಅದನ್ನು ಇದರಲ್ಲಿ ಸೇರಿಸಬೇಕು. ಕ್ಲಾಸು 40ರಲ್ಲಿ ಸರಕಾರದವರು ವಿನಾಯಿತಿ ಕೊಡುವ ಅಧಿಕಾರವನ್ನು ಪಡೆಯುತ್ತಾರೆ. ಇದನ್ನು ಬಿಟ್ಟು ಬಿಡಬೇಕು. ಮಾನ್ಯ ಮಂತ್ರಿಗಳ ಅಭಿಮಾನಿಗಳು ಬಂದು ಸ್ವಲ್ಪ ಸಹಾನುಭೂತಿ ತೋರುವವರಿದ್ದರೆ ಒಳ್ಳೆಯದಾಗುತ್ತದೆ. ಆದರಿಂದ ಕೆಳಗಿನ ಆಡಳಿತ ಯಂತ್ರದವರಿಂದ ಇದರ ದುರುಪಯೋಗವಾಗುವ ಸಂಭವವಿರುವುದು ಇಂಥದನ್ನು ದಯವಿಟ್ಟು ಹಾಕಬಾರದು.

ಕೆಲವು ಮಾನ್ಯ ಸದಸ್ಯರು ಈ ವಿಧೇಯಕದ ಬಗ್ಗೆ ಆಕ್ಷೇಪಣೆಯನ್ನು ತೆಗೆದುಕೊಂಡಿದ್ದಾರೆ ಶ್ರೀ ಧರ್ಮ ಸಾಮ್ರಾಜ್ಯ, ಶ್ರೀ ಕಾಶೀಮಠ ಮತ್ತು ಇತರ ಕೆಲವು ಸದಸ್ಯರು ಹೆಣ್ಣು ಮಕ್ಕಳ, ಘೋಷದಲ್ಲಿರುವ ಹೆಣ್ಣು ಮಕ್ಕಳು ಬೀಡಿ ಕಟ್ಟುವ ಸ್ಥಳಗಳಿಗೆ ಬರುವುದಿಲ್ಲ. ಅವರಿಗೆ ತೊಂದರೆಯಾಗುತ್ತದೆ ಎಂದು ಹೇಳಿದರು. ನಮ್ಮಲ್ಲಿ ಮುಸ್ಲಾನರ ಜನಸಂಖ್ಯೆ ಇದೆ. ಅದರಲ್ಲಿ ಬಹುತ್ತೇಕ ಬೀಡಿ ಕೆಲಸಗಾರರಿದ್ದಾರೆ. ಇವರಿಗೆಲ್ಲಾ ಈ ವಿಧೇಯಕದಿಂದ ಏನೂ ತೊಂದರೆ ಯಾಗಲಾರದು. ಅವರು ಇದರ ಮೇಲೆಯೇ ಅವಲಂಬಿಸಿರುವವರಿದ್ದಾರೆ. ಕೆಲವರು ಹೆಣ್ಣು ಮಕ್ಕಳು ತಮ್ಮ ಗಂಡಂದಿರು ಬೇರೆ ಉದ್ಯೋಗಗಳಲ್ಲಿದ್ದರೂ ತಮ್ಮ ಬಿಡುವಿನ ವೇಳೆಯಲ್ಲಿ ಮನೆಗಳಲ್ಲಿ ಬೀಡಿ ಕಟ್ಟಿ ಅದರಿಂದ ಬರುವ ಹಣದಿಂದ ತಮಗೆ ಬೇಕಾದ ಒಳ್ಳೆಯ ಬಟ್ಟೆ ಬರೆಗಳನ್ನು ತೆಗೆದುಕೊಳ್ಳಲು ಉಪಯೋಗಿಸಿಕೊಳ್ಳುತ್ತಾರೆ. ಇಂಥವರ ಸಲುವಾಗಿ ರಿಯಾಯಿತಿಯನ್ನು ಕೊಡಬಾರದೆಂದು ಹೇಳುತ್ತೇನೆ. ದೇಶದಲ್ಲಿ ಒಂದು ಹೊತ್ತು ತಿನ್ನುವುದಕ್ಕೂ ಇಲ್ಲದೆ ಉಪವಾಸ ಸಾಯತಕ್ಕ ಎಷ್ಟೊ ಜನರಿದ್ದಾರೆ. ಇಂತಹವರ ಸಲುವಾಗಿ ಈ ಕಾಯ್ದೆಗಳನ್ನು ತರತಕ್ಕದ್ದು. ಮಾನ್ಯ ಸದಸ್ಯರು ಕೆಲವರು ಹೇಳಿದ ಅಭಿಪ್ರಾಯಗಳಿಗೆ ಮಾನ್ಯ ಮಂತ್ರಿಗಳು ಮತ್ತು ಸೆಲೆಕ್ಟ್ ಕಮಿಟಿಯವರು ಆದ್ಯತೆ ಕೊಡಬಾರದು. ನಮಗೂ ಅನುಭವವಿದೆ. ಕೆಲವು ಕಡೆ ಮಾಲೀಕರ ಹಿತವನ್ನು ರಕ್ಷಣೆ ಮಾಡುವುದಕ್ಕೆ, ಇವರ ನೆಪ ತೆಗೆದುಕೊಂಡು ಅವರಿಗೆ ತ್ರಾಸವಾಗುತ್ತದೆಂದು ಹೇಳುತ್ತಾರೆಂದು ನನ್ನ ಅನುಭವದಿಂದ ಹೇಳುತ್ತಿದ್ದೇನೆ ಬೀಡಿ ಕಾರ್ಖಾನೆಗಳಲ್ಲಿ ಹೆಣ್ಣು ಮಕ್ಕಳಿಗೆ, ಪ್ರತ್ಯೇಕವಾಗಿ ಕುಳಿತುಕೊಳ್ಳುವ ವ್ಯವಸ್ಥೆ ಮಾಡಿ ಅಲ್ಲಿಗೆ ಗಂಡಸರು ಹೋಗತಕ್ಕದ್ದಲ್ಲವೆಂದು ಮಾಡಿದರೆ ಸರಿಹೋಗುತ್ತದೆಂದು ನನಗನ್ನಿಸುತ್ತದೆ.

ನಾನು ವಿನಂತಿ ಮಾಡಿಕೊಳ್ಳುವುದೇನೆಂದರೆ, ಇದನ್ನು ಆದಷ್ಟು ಬೇಗನೆ ತರಬೇಕು. ಇಲ್ಲಿ ಎಕ್ಸ್‌ಪ್ಲಾಯಿಟೇಷನ್ ಹೆಚ್ಚಾಗಿದೆ ಆದರ ಸಲುವಾಗಿ ಮಾನ್ಯ ಮಂತ್ರಿಗಳು ನಿಧಾನ ಮಾಡದೆ ಅದನ್ನು ಜಾರಿಯಲ್ಲಿ ತರಬೇಕು. ನಮ್ಮ ಸರ್ಕಾರದ ಭಾವನೆ ಸೆಲೆಕ್ಟ್ ಕಮಿಟಿಯಲ್ಲಿ ಸ್ವಲ್ಪ ವಿರೋಧವಾದರೂ ಇರಲಿ, ಒಳ್ಳೆಯದು ಮಾಡುವವರೂ ಇರಲಿ ಎಂದು ಇವರಿಬ್ಬರನ್ನೂ ಸೇರಿಸುವರೆಂದು ಕಾಣುತ್ತದೆ. ಇಂಥದ್ದು ಮಾಡಬಾರದು.

ಕನಿಷ್ಟ ದರ್ಜೆ ಜನರಿಗೆ ಕೊಡುವ ಕೂಲಿ ಒಂದು ರೂಪಾಯಿ ಹದಿಮೂರಾಣೆ ಇದ್ದರೆ ಬೀಡಿ ಕೆಲಸಗಾರರಿಗೆ 14 ಅಣೆ ಕೊಟ್ಟು ದುಡಿಸಿಕೊಳ್ಳುತ್ತಿದ್ದಾರೆ. ಇದನ್ನೆಲ್ಲ ಸರಿಪಡಿಸಬೇಕು. ಬೀಡಿ ಕೆಲಸ ಮಾಡುವವರಿಗೆ ಕ್ಷಯ ರೋಗ ಬಹಳ ಬೇಗ ಬರುತ್ತದೆ. ಕ್ಷಯ ರೋಗ ಬಂದವರಿಗೆ ಏನಾದರೂ ಪರಿಹಾರ ಕೊಡುವುದನ್ನು ವಿಚಾರ ಮಾಡಬೇಕು. ಸೆಲೆಕ್ಟ್ ಕಮಿಟಿಯವರು ಇದಕ್ಕೆ ಲಕ್ಷ ಕೊಡಬೇಕು. ಬೀಡಿ ಕೆಲಸ ಮಾಡುವವನಿಗೆ ಒಬ್ಬನಿಗೆ ಕ್ಷಯ ರೋಗ ಬಂತು. ಎಲ್ಲ ಕಡೆಯೂ ಸುತ್ತಿದ. ಅವನಿಗೆ ಎಲ್ಲೂ ಔಷಧಿ ಸಿಕ್ಕಲಿಲ್ಲ. ಕಡೆಗೆ ಯಾರೋ ದೇಶ ಭಕ್ತರು ಹೇಳಿದರಂತೆ ನೀರು ಷರಾಬು ಕುಡಿ. ಕೇಸಾಗುತ್ತದೆ ಜೈಲಿಗೆ ಹಾಕುತ್ತಾರೆ, ಅಲ್ಲಿ ಈ ರೋಗ ಗುಣವಾಗುತ್ತದೆ ಎಂದು. ಅವರು ಅದೇ ರೀತಿ ಮಾಡಿದ್ದಕ್ಕೆ ಅವನಿಗೆ ಜೈಲಿನಲ್ಲಿ ಒಳ್ಳೆಯ ಚಿಕಿತ್ಸೆ ನಡೆದು ಈಗಸ್ವಲ್ಪ ಮಟ್ಟಿಗೆ ಉತ್ತಮವಾಗಿದ್ದಾನೆ. ಪೂರ್ತಿ ಉತ್ತಮವಾಗಬೇಕಾದರೆ ಇನ್ನೂ ಒಮ್ಮೆ ಜೈಲಿಗೆ ಹೋಗಿ ಬರಬೇಕು ಎಂದು ಹೇಳುತ್ತಾರೆ. ಇಂಥ ಜನರ ಸಲುವಾಗಿ ಈ ವಿಧೇಯಕರನ್ನು ಒಳ್ಳೆಯ ರೀತಿಯಿಂದ ಆಲೋಚನೆ ಮಾಡಿ ಬೇರನೆ ತರಬೇಕೆಂದು ಹೇಳಿ ಇಷ್ಟು ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದನೆಗಳನ್ನರ್ಪಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## (9) ನೀರಾವರಿ ಅಣೆಕಟ್ಟುಗಳ ಬಗ್ಗೆ ವಿವರಣೆ *

**ಶ್ರೀ ಗಂಗಾಧರ ನಮೋಶಿ:** ಸನ್ಮಾನ್ಯ, ಅಧ್ಯಕ್ಷರೇ, ಈಗ ಸಭೆಯ ಮುಂದೆ ಚರ್ಚೆಗೆ ಬಂದಿರುವ ಈ ನಿರ್ಣಯದ ಬಗ್ಗೆ ಮಾತನಾಡುತ್ತಾ ನಮ್ಮ ಹೈದರಾಬಾದ್ ಕರ್ನಾಟಕದ ಜಿಲ್ಲೆಗಳ ಬಗ್ಗೆ ಎರಡು ಮಾತು ಹೇಳಲು ಬಯಸುತ್ತೇನೆ. ಗುಲಬರ್ಗಾ ಮತ್ತು ಬೀದರ್ ಜಿಲ್ಲೆಗಳಲ್ಲಿ ಯಾವ ದೊಡ್ಡ ಅಣೆಕಟ್ಟು ಇಲ್ಲ. ಕೆರೆಗಳನ್ನು ಎಷ್ಟು ಕಟ್ಟಿಸಬೇಕೋ ಅಷ್ಟು ಕಟ್ಟಿಸಿಲ್ಲ. ಹೈದರಾಬಾದ್ ಸಂಸ್ಥಾನದಲ್ಲಿದ್ದಾಗ ನಮ್ಮ ಜಿಲ್ಲೆಗಳಿಗೆ ಅನ್ಯಾಯವಾಯಿತು. ಮೈಸೂರು ರಾಜ್ಯಕ್ಕೆ ಬಂದ ಮೇಲೆ ನಮ್ಮ ಕಷ್ಟ ಪರಿಹಾರ ವಾಗುತ್ತದೆಂದು ನಾವು ತಿಳಿದು ಕೊಂಡಿದ್ದೇವು. ಬೀದರ್ ಜಿಲ್ಲೆಯಲ್ಲಿ ಯಾವ ದೊಡ್ಡ ಯೋಜನೆ ಮಾಡಿಲ್ಲ. ಈ ವರ್ಷ ಮಳೆ ಯಾಗದೆ ಇರುವುದರಿಂದ ಬಿತ್ತನೆ ಕೆಲಸ ಸರಿಯಾಗಿ ಆಗಿಲ್ಲ. ನಮ್ಮ ಜಿಲ್ಲೆ ಮಳೆಯ ಮೇಲೆಯೇ ಆಧರಿಸಿಕೊಂಡಿರುತ್ತದೆ. ವ್ಯವಸಾಯ ಇಲಾಖೆಯು ಯಾವ ರೀತಿ ನೋಡಿಕೊಳ್ಳಬೇಕೋ ಆ ರೀತಿ ನೋಡಿಕೊಳ್ಳುವುದಿಲ್ಲ. ಮಳೆ ಇಲ್ಲ ಎಂದ ಕೂಡಲೇ ಬರಗಾಲ ಪ್ರದೇಶವಾಗುತ್ತದೆ. ಫ್ಯಾಮಿನ್ ರಿಲೀಫ್ ವರ್ಕ್ಸ್ ಪ್ರಾರಂಭಿಸುತ್ತೀರಿ ಮಣ್ಣಿನ ರಸ್ತೆ ಕೆಲಸ ಮಾಡಲಾಗುವುದು. ಈ ವರ್ಷ ಮಣ್ಣು ಹಾಕಿಸಿದ ಕೆಲಸ ಮುಂದಿನ ವರ್ಷ ಮಳೆಯಾಗಲು ಎಲ್ಲಾ ಮಣ್ಣು ಹರಿದು ಹೋಗುತ್ತದೆ. ಈ ಮಣ್ಣಿನ ಕೆಲಸದಿಂದ ಏನೂ ಪ್ರಯೋಜನವಾಗುವುದಿಲ್ಲ. ಇಂಥ ಕೆಲಸಗಳಿಗೆ ದುಡ್ಡು ಕೊಡುತ್ತೀರಿ. ಇಲ್ಲ ಎನ್ನುವುದಿಲ್ಲ. ಆದರೆ ಕೊಡುವ ದುಡ್ಡು ಯಾರೋ ಇನ್‌ಫ್ಲುಯೆನ್ಸ್ ಇರತಕ್ಕ ದೊಡ್ಡ ದೊಡ್ಡ ಜನ ಎಂ.ಎಲ್.ಎ.ಗಳನ್ನು ಹಿಡಿದುಕೊಂಡು ಮಿನಿಸ್ಟರುಗಳ ಹತ್ತಿರ ಹೋಗಿ ಡಿ.ಸಿ.ಹತ್ತಿರ ಹೋಗಿ ದುಡ್ಡನ್ನು ತೆಗೆದುಕೊಂಡು ಹೋಗುತ್ತಾರೆ. ಭಾವಿ ಕೆಲಸಕ್ಕೆ ಅಂತಹವರಿಗೆ ದುಡ್ಡು ಸಿಕ್ಕುತ್ತದೆ. ಅಂತಹವರ ಹತ್ತಿರ ಬೇಕಾದಷ್ಟು ದುಡ್ಡು ಇದೆ. ಈ ದುಡ್ಡು ತಂದು ಬಡ್ಡಿ ವ್ಯವಹಾರ ಮಾಡುತ್ತಾರೆ. ಭಾವಿ ಹೊಂಡ ತೆಗೆದು ಹಾಕಲು ಇಂತಹವರಿಗೆ ದುಡ್ಡು ಸಿಗುತ್ತದೆ. ವಂಡ ಹಾಕಿಸುವುದಕ್ಕೆ ಮೊದಲು ಮಾಡುವ ಕೆಲಸ ಸರಕಾರ ತೆಗೆದುಕೊಳ್ಳಬೇಕು. ಹೊಲಗಳಿಗೆ ವಂಡ ಹಾಕಿಸಿ ನೀರು ನಿಲ್ಲುವಂತೆ ಮಾಡಿ ಅನ್ನ ಹೆಚ್ಚು ಬೆಳೆಸಬೇಕು. ಒಂದು ಪ್ಲಾನು ಮಾಡಿ 4-5 ಹಳ್ಳಿಗಳಿಗೆ ಬಾವಿಗಾಗಿ ಕೊಡುವ ಹಣವನ್ನು ಒಟ್ಟು ಗೂಡಿಸಿ ಸಹಕಾರ ಪದ್ಧತಿಯ ಮೇಲೆ ಒಂದು ಬಾವಿಯನ್ನು ಮಧ್ಯದಲ್ಲಿ ಮಾಡಿಸಿಕೊಟ್ಟು ಸುತ್ತು ಮುತ್ತು ಇರುವ ನಾಲ್ಕು ಹೊಲಗಳಿಗೆ ನೀರು ದೊರೆಯುವ ಹಾಗೆ ಮಾಡಬೇಕು. ಏಕೆಂದರೆ 3 ಸಾವಿರ ರೂಪಾಯಿಯಲ್ಲಿ 1 ಬಾವಿ ನಮ್ಮ ಕಡೆ ಆಗುವುದಿಲ್ಲ. 4 ಬಾವಿಗಳ ಹಣ ಒಟ್ಟು ಗೂಡಿಸಿ 12 ಸಾವಿರ ರೂಪಾಯಿಗಳಲ್ಲಿ ಒಂದು ಒಳ್ಳೆಯ ಬಾವಿಯಾಗುತ್ತದೆ. ಅಂತಹ ಬಾವಿಯನ್ನು ಸರಕಾರದವರೇ ಕಟ್ಟಿಸಿಕೊಡಬೇಕು. ಏಕೆಂದರೆ ಕೆಲವರು ದುಡ್ಡು ತೆಗೆದುಕೊಂಡು ಬೇರೆ ವ್ಯವಹಾರದಲ್ಲಿ ಉಪಯೋಗಿಸುತ್ತಾರೆ. ಆದುದರಿಂದ ಮಾನ್ಯ ಮಂತ್ರಿಗಳಿಗೆ ನಾನು

---

* ವಿಧಾನಸಭೆಯ ನಡವಳಿಕೆಯು ದಿನಾಂಕ 23ನೇ ಸೆಪ್ಟೆಂಬರ್, 1963

ವಿನಂತಿ ಮಾಡಿಕೊಳ್ಳುತ್ತೇನೆ. ಇನ್ನು ಮುಂದೆ ಬರಗಾಲ ಕಾಮಗಾರಿ ಕೆಲಸ ಅಂದರೆ ರಿಲೀಫ್ ವರ್ಕ್ಸ್ ಮಾಡಿಸುವ ಹಾಗೆ ವರ್ಕ್ ಅಂದರೆ ಈ ಮಣ್ಣಿನ ಕೆಲಸ ಮಾಡಿಸಬಾರದು. ಬಾವಿ ತೆಗೆಯಿಸುವುದು ವಂಡ ಹಾಕುವ ಕೆಲಸ ಮಾಡಿಸಬೇಕು.

ಸರಕಾರ ಪ್ರತಿವರ್ಷ ಮಾಡುವ ಕ್ಷಾಮ ನಿವಾರಣೆ ಕೆಲಸ ಅಂದರೆ ನೀರಡಿಕೆಯಾದಾಗ್ಗೆ ಭಾವಿ ತೋಡಿಸಿದ ಹಾಗೆ ಆಗುತ್ತದೆ. ಆದ್ದರಿಂದ ಒಂದು ಪ್ಲಾನು ಹಾಕಬೇಕು. ಲ್ಯಾಂಡ್ ರಿಫಾರ್ಮನ್ನು ಜಾರಿಗೆ ಬರುವುದರಿಂದ ಹಳ್ಳಿಗಳಲ್ಲಿ ಕೂಲಿ ಜನ ಸಿಕ್ಕುವುದಿಲ್ಲ ಎಂದು ಒಬ್ಬರು ಮಾತನಾಡುತ್ತಾ ಹೇಳಿದರು. ಕೂಲಿ ಸಿಕ್ಕುವುದಿಲ್ಲ, ವ್ಯವಸಾಯ ಮಾಡುವ ಯೋಗ್ಯತೆ ಇಲ್ಲದಿದ್ದರೆ ಭೂಮಿಯನ್ನು ಭೂದಾನ ಮಾಡಿಬಿಡಬೇಕು. ಯಾರು ಭೂಮಿ ಉಳುತ್ತಾರೆಯೋ ಅವರಿಗೆ ಭೂಮಿ ಕೊಟ್ಟುಬಿಡಬೇಕು.

ಅದು ಆಗುವವರೆಗೂ ಈ ದೇಶ ಅನ್ನದ ಪರಿಸ್ಥಿತಿಯನ್ನು ಸುಧಾರಿಸುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ರೆವಿನ್ಯೂಮಂತ್ರಿಗಳಲ್ಲಿ ಲ್ಯಾಂಡ್ ರಿಫಾರ್ಮ್ಸ್ ಅನ್ನು ಒಂದು ಒಳ್ಳೆಯ ರೂಪದಲ್ಲಿ ತರಬೇಕೆಂದು ವಿನಿಂತಿ ಮಾಡಿಕೊಳ್ಳುತ್ತೇನೆ. ಅಷ್ಟೇ ಅಲ್ಲ ಚೈನಾದವರು ನಮ್ಮಲ್ಲಿ ಮಾಡಿದ ವೇಳೆಗೆ ನಮಗೆ ಒಳ್ಳೆಯ ಸಂದರ್ಭ ಬಂದಿತ್ತು. ಅದೇನೆಂದರೆ ಜನರು ಯಾವ ಕೆಲಸ ಮಾಡುವುದಕ್ಕೂ ತಯಾರಾಗಿದ್ದರು. ಯಾವ ಒಂದು ಒಳ್ಳೆಯ ಕೆಲಸ ಬೇಕಾಗಿದ್ದರೂ ಪೊಲಿಟಿಕಲ್ ಪಾರ್ಟಿ ಮತ್ತು ಸರಕಾರ ಎರಡೂ ಕೂಡಿ ಸೇರಿ ಅಭಿವೃದ್ಧಿ ಕೆಲಸಗಳನ್ನು ಸರ್ಕಾರದವರು ಅಷ್ಟೇ ಮಾಡಿದರೆ ಸಾಕಾಗುವುದಿಲ್ಲ. ಬಾವಿ ಕಟ್ಟುವ ಪ್ರೋಗ್ರಾಮಗಳನ್ನು ಮಾಡಬೇಕೆನ್ನುವ ಪ್ರೊಗ್ರಾಂ, ಪಾಲಿಸಿ ರೆಕಾರ್ಡ್‌ನಲ್ಲಿರಬಹುದು. ಆದರೆ ಅಲ್ಲಿ ಹೋದಾಗ ಸರ್ಕಾರವನ್ನು ಟೀಕೆ ಮಾಡುವುದಿಲ್ಲ ಗೊಬ್ಬರ ಹೇಗೆ ಮಾಡಬೇಕೆಂಬುವುದನ್ನು ತಿಳಿದುಕೊಳ್ಳಬೇಕು. ಚುನಾವಣೆಯ ಕಾಲದಲ್ಲಿ ನಮಗೆ ಓಟು ಕೊಡಿ ಅದು ಮಾಡಿದ್ದೇವೆ ಇದು ಮಾಡಿದ್ದೇವೆ ಎಂದು ಹೇಳುತ್ತಾ ಇದ್ದೀರೇ ಹೊರತು ತಾವು ಏನು ಕಾರ್ಯತಃ ಮಾಡುತ್ತಾ ಇದ್ದೀರೋ ಇಲ್ಲವೋ ಎಷ್ಟೋ ಜನರಿಗೆ ಗೊತ್ತಿಲ್ಲ. ಸಗಣಿಯನ್ನು ಹಳ್ಳಿಕಡೆ ಕುರುಳು ಅಂತ ನೆಲಈ ಮೇಲೆ ಬಡಿದು ಒಣಗಿಸಿ ಒಲೆಗೆ ಹಚ್ಚಿ ಉರಿಸುತ್ತಾರೆ. ಅದು ಒಳ್ಳೆಯ ಗೊಬ್ಬರ ಮಾಡುವುದಕ್ಕೆ ಉಳಿತಾಯವಾಗುತ್ತದೆ. ಸಗಣಿ ಗೊಬ್ಬರ ಮಾಡುವುದರ ಬಗ್ಗೆ ಪ್ರಚಾರ ಕಾರ್ಯ ಮಾಡಬೇಕಾಗುತ್ತದೆ. ಪೊಲಿಟಿಕಲ್ ಮತ್ತು ಎಕನಾಮಿಕ್ ಆರ್ಗನೈಜೇಷನ್ ಎರಡೂ ಕೂಡ ಈ ಕೆಲಸ ಮಾಡಬೇಕಾದದ್ದು ನಾನು ತಮ್ಮಲ್ಲಿ ಹೇಳುತ್ತಾ ಇದ್ದೇನೆ. ವ್ಯವಸಾಯದ ಇಲಾಖೆಯವರು ಬಾವಿಯನ್ನು ತೋಡುವುದರಲ್ಲಿ ಒಂದು ರೀತಿ ಹೇಳುತ್ತಾ ಇದ್ದಾರೆ. ಕೆಲವು ಕಡೆ ಮಳೆ ಆಗುವುದಿಲ್ಲ. ಗುಲಬರ್ಗಾದಲ್ಲಿ ಒಳ್ಳೆಯ ಜಮೀನು ಉಂಟು. ಈ ಕಡೆ ಗುಡ್ಡಗಾಡು ಬಹಳ ಹೆಚ್ಚಾಗಿದೆ. ನಮ್ಮ ಕಡೆ ಎಲ್ಲಾ ಸಮತಟ್ಟಾದ ಪ್ರದೇಶ ಇದೆ. ಬೇಕಾದಷ್ಟು ಜಮೀನು ಇದೆ. ಆದರೆ ಇದಕ್ಕೆ ಬೇಕಾದ ಗೊಬ್ಬರ ಮತ್ತು ನೀರಾವರಿಯನ್ನು ವ್ಯವಸಾಯದ ಇಲಾಖೆಯವರು ನೀವು ಎಷ್ಟು ನಿಮ್ಮ

ಭಾಗದ ಕಾಂಟ್ರೀಬ್ಯುಷನ್ ಬರಬೇಕೋ ಅದು ಬರುವವರೆಗೂ ಚಾನಲ್ ನಿಮ್ಮ ಭಾಗಕ್ಕೆ ಬರುವುದಿಲ್ಲ ಎಂದು ಹೇಳುತ್ತಾರೆ. ನಮ್ಮಲ್ಲಿ ಗೊಬ್ಬರ ಇಲ್ಲ, ನೀರಿನ ಸೌಕರ್ಯವಿಲ್ಲ, ಆದಕಾರಣ, ಆ ಜಮೀನುಗಳಲ್ಲಿ ಬೆಳೆ ಬೆಳೆಯುವುದಕ್ಕೆ ಸಾಧ್ಯವಾಗುತ್ತಿಲ್ಲ. ಆದ್ದರಿಂದ ಈ ಅಂಶಗಳನ್ನೆಲ್ಲಾ ಗಮನಿಸಿ ಸರಕಾರದವರು ಸೂಕ್ತ ಕಾರ್ಯಕ್ರಮಗಳನ್ನ ತೆಗೆದುಕೊಳ್ಳಬೇಕೆಂದು ಹೇಳಿ ಅಧ್ಯಕ್ಷರನ್ನು ವಂದಿಸಿ ನಾನು ನನ್ನ ಮಾತನ್ನು ಮುಗಿಸುತ್ತೇನೆ.



## (10) ಬಂದೀಖಾನೆ ಮಸೂದೆಯ ಬಗ್ಗೆ *

ಸ್ವಾಮಿ ಅಧ್ಯಕ್ಷರೇ, ಬೇರೆ ಬೇರೆ ಪ್ರಾಂತ್ಯಗಳಲ್ಲಿರತಕ್ಕಂಥ ಪ್ರಿಸನ್ಸ್ ವಿಧೇಯಕಗಳನ್ನು ಒಟ್ಟು ಗೂಡಿಸಿ, ಈ ಪ್ರಿಸನ್ಸ್ ಮಸೂದೆಯನ್ನು ತಂದಿದ್ದೀರಿ. ಈ ಪ್ರಿಸನ್ಸ್‌ಗಳು ಇಂಪ್ರೂ ಆಗಿಲ್ಲ, ಸುಧಾರಿಸಿಲ್ಲ ಎಂದು ಎಷ್ಟೋ ಸದಸ್ಯರು ಹೇಳಿದ್ದಾರೆ. ಆ ಸದಸ್ಯರ ಜೊತೆಯಲ್ಲಿ ನಾನು ಒಪ್ಪುತ್ತೇನೆ. ಈಗಿರುವ ಬಂದೀ ಖಾನೆಗಳು ಬ್ರಿಟಿಷರ ಕಾಲಕ್ಕಿಂತಲೂ ಸ್ವಲ್ಪ ಉತ್ತಮವಿದೆ ಎಂದು ಕೆಲವು ಸದಸ್ಯರು ಹೇಳಿ ಮಾತನಾಡಿದರು; ಕೆಲವು ಉದಾಹರಣೆಗಳನ್ನು ಕೊಟ್ಟರು. ಆದರೆ ನಾನು ಈಗ ತಾನೇ ಜೈಲಿಗೆ ಹೋಗಿ ಬಂದವನು ನನ್ನ ಅನುಭವವನ್ನು ಹೇಳುತ್ತೇನೆ. ಅಲ್ಲಿ ನಡೆಯುತಕ್ಕಂಥ ಅನ್ಯಾಯ ಅತ್ಯಾಚಾರ ನೋಡಿದರೆ ಜೈಲು ಸುಧಾರಣೆಯಾಗುವುದಕ್ಕಿಂತ ಜೈಲುಗಳನ್ನು ತೆಗೆದು ಹಾಕಿಬಿಡುವುದು ಮೇಲು ಅನಿಸುತ್ತದೆ. ಇಲ್ಲಿ ಆಚರಣೆಯಲ್ಲಿ ನಡೆಯುತ್ತಿರುವುದು ಬೇರೆ, ಇಲ್ಲಿ ಬರೆದಿರತಕ್ಕಂಥದ್ದೇ ಬೇರೆ. ಅಲ್ಲಿ ನಡೆದಿರತಕ್ಕಂಥ ಸಂಗತಿ ಘಟನೆಗಳು ನಿಮ್ಮ ತತ್ವಕ್ಕೆ ವಿರೋಧವಾಗಿದೆ. ಅಲ್ಲಿ ನಡೆಯುತ್ತಾ ಇರತಕ್ಕ ವಿಷಯಗಳನ್ನು ಈ ಸಭೆಯ ಮುಂದೆ ಇಡುತ್ತೇನೆ. ಶಿಸ್ತು ಸ್ಥಿತಿ ಜೈಲಿನಲ್ಲಿ ಹೇಗಿದೆ ಎಂದು ನೋಡಿ.

ಜೈಲಿನೊಳಗೆ ಎಲ್ಲಾ ಸೌಲಭ್ಯಗಳನ್ನು ಮಾಡಿಕೊಟ್ಟಿದ್ದೇವೆ, ಆದರೆ ಅಲ್ಲಿ ಪಂಚರಂಗಿ ಜನರಿದ್ದಾರೆಂದು ಕೆಲವರು ಆಪಾದಿಸಿದರು. ಆದರೆ, ಈ ಪಂಚರಂಗಿ ಜನರನ್ನು ಸೃಷ್ಟಿ ಮಾಡಿ ಅವರ ಸಂಖ್ಯೆ ಜಾಸ್ತಿ ಮಾಡುವವರು ಯಾರು? ಪೋಲೀಸನವರೇ, ಪಂಚರಂಗಿ ಜನರು ಹೇಗಾಗುತ್ತಾರೆಂದರೆ, ಪೋಲೀಸನವರು ನಿರ್ಮಿಸಿರುತ್ತಾರೆ. 16-17-18 ವರ್ಷದ ಸಣ್ಣ ಹುಡುಗರು, ತಂದೆ ತಾಯಿ ಇಲ್ಲದ ಅನಾಥರು, ಬೆಂಗಳೂರು ಸಿಟಿಯಂಥ ದೊಡ್ಡ ಸ್ಥಳಗಳಿಗೆ ಕೂಲಿ ಕೆಲಸ ಹುಡುಕಿಕೊಂಡು ಬಂದರೆ, ಅಂಥವರನ್ನು ಕೇಸುಗಳಲ್ಲಿ ಅಪಾರಾಧಿಗಳನ್ನಾಗಿ ಮಾಡುತ್ತಾರೆ, ಪೋಲೀಸನವರು ಕೇಸುಗಳನ್ನು ಹಾಕಬೇಕು, ಇಷ್ಟು ಕನಿವಿಕ್ಷನ್ ತೋರಿಸಬೇಕು ಎಂದು ನಿಬಂಧನೆ ಇದೆ. ಅದಕ್ಕೆ ಅಂಕಿ ಅಂಶಗಳನ್ನು ರಚಿಸಿಕೊಳ್ಳಬೇಕು. ಅದಕ್ಕೋಸ್ಕರ ನಿರಪರಾಧಿಗಳಾದ ಬೀದಿ ಭಿಕಾರಿಗಳನ್ನು ಖೈದು ಮಾಡಿ ಸುಳ್ಳು ಆಪಾದನೆ ಹೊರಿಸಿ ಸೆರೆ ಮನೆಗೆ ಕಳುಹಿಸುತ್ತಾರೆ. ಕೋರ್ಟ್‌ನವರು ಪೋಲೀಸಿನವರು ಹಾಜರಿ ಮಾಡಿದ ಸಾಕ್ಷ್ಯದ ಮೇಲೆ ಅಪರಾಧಿಗಳನ್ನು ಶಿಕ್ಷೆಗೆ ಗುರಿಪಡಿಸಬೇಕಾಗುತ್ತದೆ, ಅವರು ಇನ್ನೇನು ಮಾಡುವುದಕ್ಕಾಗುವುದಿಲ್ಲ. ಸೆರಮನೆಯಿಂದ ಬಿಡುಗಡೆಯಾಗಿ ಹೊರಗೆ ಬಂದ ನಂತರ ಈ ಜನಗಳಿಗೆ ಯಾವ ಕೆಲಸವೂ ಸಿಗುವುದಿಲ್ಲ. ಅಲ್ಲಿ ಇಲ್ಲಿ ಅಲಿಯುತ್ತಿರುತ್ತಾರೆ ಸರಿ ಅಷ್ಟರಲ್ಲಿ ಕಳ್ಳತನಗಳಾದರೆ ಹಿಂದೆ ಕನವಿಕ್ಷನ್ ಇರುವವರೆ ಅವುಗಳಿಗೆ ಕಾರಣವಿರಬೇಕೆಂದು ಸಂದೇಹದ ಮೇಲೆ ಅವರನ್ನು ಪೊಲೀಸ್‌ನವರು ಖೈದು ಮಾಡಿ ಕ್ರಿಮಿನಲ್ ಕೇಸು ಹಾಕುತ್ತಾರೆ. ಈ ಕೀಳು ಸ್ಥಿತಿಯಲ್ಲಿರುವ ಜನಗಳ ಪರವಾಗಿ ವಾದಿಸಲು ಲಾಯರ್‌ಗಳು ಇರುವುದಿಲ್ಲ. ಅವರಿಗೆ ರಕ್ಷಣೆ ಕೊಡಲು ಯಾರು ಇಲ್ಲದಿರುವುದರಿಂದ, ಪೊಲೀಸ್‌ನವರು ಹೊರಿಸಿದ

* ವಿಧಾನಸಭೆಯ ನಡವಳಿಕೆಯ ದಿನಾಂಕ 26ನೇ ಸೆಪ್ಟೆಂಬರ್, 1963

ಆಪಾದನೆಗೆ ಮಾನ್ಯತೆ ದೊರಕುತ್ತದೆ. ಪುನ: ಶಿಕ್ಷೆಗೆ ಒಳಗಾಗುತ್ತಾರೆ. ಹೀಗೆ ಎರಡು ಮೂರು ಸಾರೆ ಸೆರೆಮನೆ ವಾಸ ಅನುಭವಿಸಿದ ನಂತರ ಈ ಶಿಕ್ಷೆ ವಿಧಿಸಲ್ಪಟ್ಟ ನಿರಪರಾಧಿ ಜನಗಳಿಗೆ ಪಂಚರಂಗಿ ಎಂಬ ಲೇಬಲ್ ಕಟ್ಟುತ್ತಾರೆ. ಇದು ಅವರ ದುರ್ದೈವ. ಕೋರ್ಟಿನವರು ತಮ್ಮ ಕಾನೂನಿನ ಪ್ರಕಾರ ಅವರಿಗೆ ನಾಲ್ಕು - ಆರು ತಿಂಗಳು ಪ್ರತಿ ಸಲ ಸಜಾ ಹಾಕುವರು ಸಜಾ ಮುಗಿದು ಹೋರ ಬಂದ ನಂತರ ಅವರಿಗೆ ಕೆಲಸ ಸಿಗದೇ ಇರುವುದು, ಅವರನ್ನು ಗುಮಾನಿ ಮೇಲೆ ಪೊಲೀಸಿನವರು ಪುನ: ಬಂಧಿಸಿ ಕೇಸು ಹಾಕುವುದು, ಇಂಥ ಪರಿಸ್ಥಿತಿಗಳಿಗೆ ಈ ಬಡಜನ ಮೇಲಿಂದ ಮೇಲೆ ಆಹುತಿಯಾಗಿ, ಈ ರೀತಿ "ಪಂಚರಂಗಿ" ಯಾಗಿದ್ದಾರೆ.

ಈ ಪಂಚರಂಗಿ ಜನಗಳಿಗೆ ಒಳ್ಳೆಯ ತರಬೇತಿ ಕೊಟ್ಟು ಅವರನ್ನು ಒಳ್ಳೆಯ ಮನುಷ್ಯರನ್ನಾಗಿ ಮಾಡಿ, ಅವರಿಗೆ ಒಳ್ಳೆಯ ಕೆಲಸಗಳನ್ನು ಒದಗಿಸಿಕೊಟ್ಟು ನಾಗರೀರನ್ನಾಗಿ ಮಾಡುವ ಒಂದು ಹೊಣೆಗಾರಿಕೆ ಸರಕಾರದ್ದು ಎಂದು ಹೇಳುವ ವಿಧಿ ಈ ಬಿಲ್ಲಿನಲ್ಲಿಲ್ಲ. ಈಗ ನಾವು ಎಷ್ಟೋ ಸಲ ನಾವು ನೋಡಿದ್ದೇವೆ, ಪ್ರತಿಸಲ ಸೆರೆಮನೆಯಿಂದ ಹೊರಗೆ ಬಂದವನು ತಿರುಗ ಸೆರಮನೆಗೆ ಹೋಗುತ್ತಾನೆ. ಅವನನ್ನು ಸನ್ಮಾರ್ಗಕ್ಕೆ ತರಲು ಯಾವ ಅವಕಾಶವನ್ನು ಸರಕಾರ ಒದಗಿಸುವುದಿಲ್ಲ. ಖೈದಿಗಳು ಜೈಲಿನಲ್ಲಿದ್ದಾಗ ಕಾರ್ಪೆಂಟರಿ, ಜಂಖಾನ ನೇಯುವುದು ಮುಂತಾದ ಕಸುಬುಗಳನ್ನು ಅವರಿಂದ ಮಾಡಿಸಿದ್ದಾಗ್ಯೂ ಅವರು ಬಿಡುಗಡೆಯಾಗಿ ಹೊರಗೆ ಬಂದನಂತರ ಅವರಿಗೆ ಕಲಿಸಿರುವ ಉದ್ಯೋಗಗಳಲ್ಲಿ ತೊಡಗಿ ಜೀವನ ನಡೆಸಲು ನೀವು ಅವಕಾಶ ಕಲ್ಪಿಸಿಲ್ಲ. ಅವರಿಗೆ ಜೈಲಿನಿಂದ ಹೊರಗೆ ಬಂದ ನಂತರ ಪ್ರಾಮಾಣಿಕ ಜೀವನ ನಡೆಸಲು ಸಾಧ್ಯತೆಗಳನ್ನು ಏರ್ಪಡಿಸಿದ್ದರೆ ಅವರು ಪಂಚರಂಗಿ ಹೇಗಾಗುತ್ತಾರೆ. ಜೈಲಿನೊಳಗೂ ಅವರನ್ನು ಸುಧಾರಿಸುವ ವಾತಾವರಣ ಇರಬೇಕು. ಮಹಾತ್ಮಾ ಗಾಂಧಿಯವರು ಜೈಲಿಗೆ ಮೇಲಿಂದ ಮೇಲೆ ಹೋಗಿ ಕಾಂಗ್ರೇಸ್ ಜನರನ್ನು ಸೆರೆಮನೆ ವಾಸಕ್ಕೆ ಏಕೆ ಆಮಂತ್ರಿಸಿದರೆಂದರೆ ಸಮಾಜದಲ್ಲಿ ಮೇಲ್ಮಟ್ಟದಲ್ಲಿರುವವರು ಸೆರೆಮನೆಗೆ ಹೋಗಿ ಒಳಗಿರುವ ಪರಿಸ್ಥಿತಿಯನ್ನು ಸುಧಾರಿಸಿ ಈ ತರದಲ್ಲಿಯೂ ದೇಶ ಸೇವೆ ಮಾಡಬಹುದೆಂದು ಸೆರೆಮನೆ ಯೊಳಗಿರುವ ಖೈದಿ ಜನಗಳ ಸುಧಾರಣೆಯೂ ಅವರು ಜೈಲುವಾಸದ ಒಂದು ಉದ್ದೇಶವಾಗಿತ್ತು. ಈ ಉದ್ದೇಶ ಇಂದು ನೆರವೇರಿ ಪೂರ್ಣವಾಗಿದೆಯೇ ಎಂದು ನಾವು ನೋಡಬೇಕಾಗಿದೆ. ನಮ್ಮ ಈಚಿನ ಅನುಭವವನ್ನೇ ಈಗ ತೆಗೆದುಕೊಳ್ಳೋಣ. ನಮ್ಮನ್ನು ಖಿರೀದು ಮಾಡಿದ ತಕ್ಷಣವೇ ನಮಗೆ 'ಎ' ಕ್ಲಾಸ ಕೊಟ್ಟರೆ, ಮಂತ್ರಿಗಳು ಬಂಧಿಸಿದ ಹದಿನೈದು ದಿವಸಗಳ ನಂತರ ಸ್ಪೀಕರ್‌ರವರಿಗೆ ನಾವು ಬರೆದ ಮೇಲೆ ಅವರು ದಯಮಾಡಿ "ಎ ಕ್ಲಾಸ್" ಕೊಡಿಸಿದರು.

ಸಭಾಧ್ಯಕ್ಷರು :- ಮಾನ್ಯ ಸದಸ್ಯರಿಗೆ ಸರಕಾರವು ಕೊಟ್ಟಿದೆ ಆದರೆ ಸಭಾಧ್ಯಕ್ಷರಲ್ಲ.

ಶ್ರೀ **ಗಂಗಾಧರ ನಮೋಷಿ:** ನಾನು ಅದನ್ನು ಚೆನ್ನಾಗಿ ಬಲ್ಲೇ, ಸಾರ್, ನಾವು ಎಂ.ಎಲ್.ಎ.ಗಳು ಎಂಬ ಒಂದು ಕನಿಸಿಡರೇಷನ್ ಸಹ ಇಲ್ಲದೆ ನಮ್ಮನ್ನು ಬ್ಯಾರಕ್ಕುಗಳಿಗೆ ಹಾಕಿ ಕಷ್ಟಕೊಡುವುದಕ್ಕೆ ಹೊರಡುವುದೇ? ಎಂ.ಎಲ್.ಎ. ಅಂದ ಮೇಲೆ ಸ್ವಯಂ ಪ್ರೇರಿತವಾಗಿ ಬಂಧಿಸಿದ ದಿನದಿಂದ 'ಎ' ಕ್ಲಾಸ್‌ನಲ್ಲಿ ಇಡಬಾರದಾಗಿತ್ತೇ. ಬ್ರಿಟಿಷ ಸರಕಾರದವರು ಕೂಡಾ ನಮಗೆ ಮಾಡಿದ್ದನ್ನು ಮಾಡಿದ್ದಾರೆಯೇ ಎಂದು ತಮ್ಮನ್ನು ಕೇಳುತ್ತೇನೆ. ಜೈಲಿಗೆ ಮಾನ್ಯ ಹೋಂ ಮಿನಿಸ್ಟರು ಮೂರು ನಾಲ್ಕು ಸರ್ತಿ ಬಂದರು. ಆದರೆ ಅವರ ಮನಸ್ಸಿಗೆ ನಮ್ಮಲ್ಲಿಗೆ ಬಂದು ನಮ್ಮನ್ನು ನೋಡಿಕೊಂಡು ಹೋಗಬೇಕೆಂಬ ವಿಚಾರ ಬರಲಿಲ್ಲ. ಅವರೂ ಬರಲೇ ಇಲ್ಲ.

ಆರ್.ಎಂ. ಪಾಟೀಲ್: ಅವರು ಅಲ್ಲಿ ಖೈದಿ ಅಲ್ಲ.

**ಗಂಗಾಧರ ನಮೋಶಿ:** ಅವರು ಜೈಲೀಗೆ ಮೂರು ಸಲ ಬಂದಿದ್ದರು. ನಾವು ಇರುವುದಕ್ಕೆ ಯಾವ ರೀತಿ ವ್ಯವಸ್ಥೆ ಮಾಡಿದ್ದಾರೆ. ನಾವು ಏನನ್ನು ಹೇಳಿದ್ದೇವು ಅದು ನಿಜವೋ ಎಂದು ನೋಡಲಿಕ್ಕೆ ಬರಲೇ ಇಲ್ಲ. ಇಷ್ಟೇ ಅಲ್ಲ ಸ್ವಾಮಿ, ನನ್ನ ಇಂಟರವ್ಯೂ ಸಲುವಾಗಿ ನನ್ನನ್ನು ಇಲ್ಲಿಂದ ಗುಲಬರ್ಗಾಕ್ಕೆ ಕಳುಹಿಸಿ ಅಂದರೆ, ಕಳುಹಿಸಿದರೆ? ನಮ್ಮ ತಾಯಿ ಮಾತನಾಡಲು ಬಂದರು; ನಮ್ಮ ಇಂಟರ್‌ವ್ಯೂ ಕ್ರಿಮಿನಲ್ಲಿಗೆ ಹೇಗೆ ನಡೆಯಿತೋ ಹಾಗೆ ನಡೆಯಿತು; ನಮ್ಮ ತಾಯಿ ಬಾರ್‌ನಿಂದ ಆ ಕಡೆ, ನಾವು ಬಾರಿನ ಒಳಗಡೆ.

ಆರ್.ಎಂ. ಪಾಟೀಲ್: ಅವರ ಸಂಪೂರ್ಣ ಮಾತು ಅಸಂಬದ್ಧ. ಅವರು ಖೈದಿಯಲ್ಲ.

**ಗಂಗಾಧರ ನಮೋಶಿ:** ಜೈಲಿನ ಒಳಗಡೆ ಏನು ನಡೆಯುತ್ತದೆ ಎಂಬುದನ್ನು ನಾನು ಸದನದ ಮುಂದೆ ಸಾದರ ಪಡಿಸುತ್ತೇನೆ.

ಅಲ್ಲಿ ಮನುಷ್ಯತ್ವ ಇರಲಿಲ್ಲ. 70-80 ವರ್ಷದ ಮುದುಕಿ ಇಂಟರವ್ಯೂಗೆ ಬಂದಿದ್ದರೆ ಒಂದು ಗಂಟೆ ಆಕೆಯನ್ನು ನಿಲ್ಲಿಸಿದ್ದರು. ಆಕೆ ಒಬ್ಬ ಬಹಳ ಸಣ್ಣ ಹುಡುಗ ನನ್ನು ಕರೆದುಕೊಂಡು ಬಂದಿದ್ದಳು. ಅವರು ಅಳುತ್ತ ಇದ್ದರೂ ಸೂಪರಿಂಟೆಂಡೆಂಟ್‌ರು ಹೊರಗೇ ನಿಲ್ಲಿಸಿದ್ದರು. ಇದು ಎಲ್ಲಾ 'ಎ ಕ್ಲಾಸು' ಖೈದಿಗಳಿಗೆ ಕೊಡುವ ಟ್ರೀಟಮೆಂಟ್ ನಮ್ಮ ಕಾಮ್ರೆಡ್ ಒಬ್ಬರ ಹೆಂಡತಿಗೆ ಡೆಲಿವರಿಯಾಗಿ ಒಂದೂವರೆ ತಿಂಗಳಾಗಿತ್ತು. ಅವಳು ಗಂಡನನ್ನು ನೋಡಬೇಕೆಂದು ಜೇಲಿಗೆ 4 ಗಂಟೆಗೆ ಬಂದರೆ 7-30 ಗಂಟೆವರೆಗೆ ಇಂಟರವ್ಯೂಗೆ ಕಾದಿದ್ದರು. ಎಷ್ಟು ಕೇಳಿಕೊಂಡರು ಡೆಪ್ಯೂಟಿ ಜೇಲರ್ ಆಕೆಯನ್ನು ಇಂಟರವ್ಯೂ ಮಾಡಲು ಬಿಡಲಿಲ್ಲ. ಈ ದೃಷ್ಟಿಯಿಂದ ನಿಮ್ಮ ಆ್ಯಕ್ಷನ್ನು ಇಂಪ್ರೂ ಮಾಡಿದ್ದೀರೆಂದು ಹೇಳುವುದಕ್ಕಾಗುವುದಿಲ್ಲ.

**ಸಭಾಧ್ಯಕ್ಷರು:** ಮಾನ್ಯ ಸದಸ್ಯರು ಈ ಎಲ್ಲ ಸಂಗತಿಗಳ ಬಗ್ಗೆ ಸರಕಾರಕ್ಕೆ ಬರೆದಿರುವರೇ?

,145.5

**ಗಂಗಾಧರ ನಮೋಶಿ:** ಸಂದರ್ಶನದ ಸಂಬಂಧವಾಗಿ ನಾನು ಬರೆದಿರುವೆನು. ಆದರೆ ಸರಕಾರವು ಅದರ ಬಗ್ಗೆ ಏನೂ ಗಮನ ಕೊಟ್ಟಿರುವುದಿಲ್ಲ.

**ಆರ್.ಎಂ. ಪಾಟೀಲ್:** ಅದೆಲ್ಲಾ ಅವರು ಸೃಷ್ಟಿಸಿದ ವಿಷಯ.

**ಸಭಾಧ್ಯಕ್ಷರು:** ಮಾನ್ಯ ಸದಸ್ಯರ ವಯೋವೃದ್ಧ ತಾಯಿಯವರು ಬಹಳ ಗಂಟೆಯವರೆಗೆ ನಿಲ್ಲುವಂತೆ ಮಾಡಿದ ವಿಷಯವನ್ನು ಸದಸ್ಯರು ಸರಕಾರಕ್ಕೆ ಬರೆದಿರುವರೇ?

**ಗಂಗಾಧರ ನಮೋಶಿ:** ಹೌದು. ನಾನು ಬರೆದಿರುವೆ. ನಿಯಮಗನುಸಾರವಾಗಿ, ಜೇಲ್ ಸೂಪರಿಂಟೆಂಡೆಂಟ್ ಮುಖಾಂತರ ಮನವಿಯನ್ನು ಸಲ್ಲಿಸಬೇಕಾಗುತ್ತದೆ. ಅದು ಸರಕಾರಕ್ಕೆ ತಲುಪಿದೆಯೋ ಅಥವಾ ಇಲ್ಲವೋ ನನಗೆ ಗೊತ್ತಿರುವುದಿಲ್ಲ.

ಅಷ್ಟೇ ಅಲ್ಲ ಸ್ವಾಮಿ, ಅವರು 7 ಗಂಟೆ ವರೆಗೆ ಕಾದನಂತರವೂ ಯಾರೂ ಅವರನ್ನು ಇಂಟರವ್ಯೂಗೆ ಕರೆಯಲಿಲ್ಲ. ಅವರ ಜೊತೆ ಒಂದೂವರೆ ತಿಂಗಳಿನ ಕೂಸು ತಂಡಿಯಲ್ಲಿ ನಡುಗುತ್ತಿತ್ತು. ಇದು ಬೆಂಗಳೂರಿನಲ್ಲಿ ನಡೆದಿರತಕ್ಕಂಥ ಮಾತು.

ಇಷ್ಟೇ ಅಲ್ಲ, ಅಲ್ಲಿರತಕ್ಕ ಕರಪ್ಷನ್ ನೋಡಿದರೆ, ಜೈಲಿನ ಅಡ್ಮಿನಿಸ್ಟ್ರೇಷನ್ ಎಷ್ಟು ಲೂಸ್ ಆಗಿದೆ ಎನ್ನುವುದು ಗೊತ್ತಾಗುತ್ತದೆ. ಇಂತಹದರಲ್ಲಿ ಜೈಲುಗಳನ್ನು ಬಹಳ ಇಂಪ್ರೂ ಮಾಡಿದ್ದೇವೆ ಅಂತ ಹೇಳುತ್ತಾರೆ. ಜೈಲಿನ ಒಳಗಡೆ ಗಾಂಜ, ಬ್ರಾಂದಿ ಸಿಗುತ್ತದೆ; ಯಾವ ಸಾಮಾನು ಬೇಕಾದರೂ ಸಿಗುತ್ತದೆ. ಇವುಗಳನ್ನು ತಂದು ಕೊಡುವವರೂ ಯಾರೋ ಖೈದಿಗಳೇ. ಇವರು ತರುವುದಕ್ಕೆ ಅವಕಾಶ ಕೊಟ್ಟು, ಅವರನ್ನೇ ಆಪಾದಿಸಿ, ಸೆಲ್ಲಿಗೆ ಹಾಕಿ, ಮೂರು ನಾಲ್ಕು ಸಲ ಉಪವಾಸ ಹಾಕಿದ್ದುದು ಇದೆ. ಈ ತರಹ ಟ್ರೀಟ್‌ಮೆಂಟಿಗೆ ಯಾರು ಹೊಣೆಗಾರರು ಎಂಬುದನ್ನು ನೀವು ವಿಚಾರ ಮಾಡಬೇಕು.

**ಆರ್.ಎಂ. ಪಾಟೀಲ್:** ಇಂಥ ಹೇಳಿಕೆಯನ್ನು ನಂಬಬಹುದೇ? ಅವರು ಅಸಮಂಜಸವಾಗಿ ಮಾತನಾಡುತ್ತಾರೆ.

**ಗಂಗಾಧರ ನಮೋಶಿ:** ನಾನು ಅದೂ ಸಹ ಪ್ರಮಾಣೀಕರಿಸುವೆ.

**ಸ್ಪೀಕರ್:** ಮಾನ್ಯ ಸದಸ್ಯರು ಏನೂ ಹೇಳಬೇಕೆಂದಿದ್ದರೋ, ಅದನ್ನು ಸಾಕಷ್ಟು ಹೇಳಿದ್ದಾರೆ. ಮಸೂದೆಯ ಬಗ್ಗೆ ಇರತಕ್ಕಂಥ, ಕೆಲವು ಟೀಕೆಗಳ ಬಗ್ಗೆ ನಾನು ಅರಿಯಬೇಕಾಗಿದೆ. ಸದಸ್ಯರು, ಮಸೂದೆಯ ಉಪಬಂಧಗಳ ಕಡೆಗೆ ದಯಮಾಡಿ ಗಮನ ಹರಿಸಬೇಕು.

**ಗಂಗಾಧರ ನಾಮೋಶಿ:** ಕೆಲವು ಮಾನ್ಯ ಸದಸ್ಯರುಗಳು ಪೆರೋಲ್ ಮೇಲೆ ಬಿಡತಕ್ಕ ಪದ್ಧತಿ ಇದೆ ಅಂತ ಹೇಳಿದರು. ಎಷ್ಟೋ ರೂಲುಗಳಿವೆ, ಆದರೆ ಅವು ಇಂಪ್ಲಿಮೆಂಟ್ ಆಗುವವರೆಗೆ ಒಬ್ಬ ಮನುಷ್ಯ ಪೆರೋಲ್ ಮೇಲೆ ಬಿಡುಗಡೆಗೆ ಅಪ್ಲೈ ಮಾಡಿದರೆ 100-200

ರೂಪಾಯಿ ಖರ್ಚು ಮಾಡಬೇಕಾಗುತ್ತದೆ. ಪೆರೋಲ್ ಮೇಲೆ ಬಿಡಿ ಎಂದು ಹಾಕಿದ ಅರ್ಜಿಗೆ, ಪೊಲೀಸಿನವರ ಒಪೀನಿಯನ್ ಬೇಕು, ಅದಕ್ಕೆ ರೆಕಮೆಂಡೇಶನ್ ಬೇಕು. ಅದು ಹೋಮ್ ಸೆಕ್ರೆಟರಿಗೆ ಹೋಗಬೇಕು. ಅದಕ್ಕೆ ಎಲ್ಲಾ ಪ್ರೋಸಿಜರ್‌ನಿಂದ ಕರಪ್ಷನ್ನಿಗೆ ಆಸ್ಪದವಿದೆ. ಒಬ್ಬ ಪ್ರಿಸನರ್ ಪೆರೋಲಿಗೆ ಅಪ್ಲೈ ಮಾಡಿದರೆ ಅವರಿಗೆ ಬೇಗ ನೇರವಾಗಿ ಪೆರೋಲ್ ಆರ್ಡ್‌ರ್ ಸಿಗತಕ್ಕಂಥ ವ್ಯವಸ್ಥೆ ಮಾಡಬೇಕು, ಇಲ್ಲದೆ ಹೋದರೆ ಬಹಳ ತ್ರಾಸವುಂಟಾಗುತ್ತದೆ.

ನಾನು ಜೈಲಿನಲ್ಲಿದ್ದಾಗ ಕೆಲವು ಒಳ್ಳೆಯ ಸಾಧನೆಗಳನ್ನು ಕೆಲವು ಜನರು ಮಾಡಿರುವುದನ್ನು ನೋಡಿದೆ. ಕಾರ್ಪೆಂಟರಿ ಕೆಲಸ, ನೆಯ್ಗೆ ಕೆಲಸ ಮುಂತಾದವುಗಳಲ್ಲಿ ಕೆಲವು ಚಲೋಕೆ ಕೆಲಸಗಳನ್ನು ಮಾಡುತ್ತಾರೆ. ಪಂಚರಂಗಿಗಳು ಮತ್ತು ಇಂಥವರಿಗೆ ಒಳ್ಳೆಯ ತರಬೇತಿಯನ್ನು ಕೊಟ್ಟರೆ ಅವರ ಉತ್ತಮ ಕೆಲಸಗಾರರಾಗಬಹುದು. ಮತ್ತು ಇವರು ಜೈಲಿನಿಂದ ಹೊರಗೆ ಬಂದ ನಂತರ ಅವರು ಹೊಟ್ಟೆಗೆ ಇರಲಾರದೆ ಅದೇ ಕೃತ್ಯ ಮತ್ತೆ ಮಾಡುವ ಪರಿಸ್ಥಿತಿ ಬರಲಾರದಂತೆ ಒಳ್ಳೆಯ ರೀತಿಯಲ್ಲಿ ಅವರು ನೆಲಸುವಂತೆ ಮಾಡಬೇಕು. ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ 75 ಸಾವಿರ ರೂಪಾಯಿ ಲಾಭಗಳಿಕೆಯಾಗಿದೆ. ಇದರಲ್ಲಿ ಸಹ ಭ್ರಷ್ಟಾಚಾರ ಉಂಟು. ಭ್ರಷ್ಟಾಚಾರ ಇದ್ದರೂ ಕೂಡಾ ಇಷ್ಟು ಲಾಭವನ್ನು ಮಾಡಿದ್ದಾರೆ. ಈಗ ನಡೆಯುತ್ತಿರುವ ತರಬೇತಿಯ ಜೊತೆಗೆ ಇನ್ನೂ ಕೆಲವು ಕೈಗಾರಿಕೆಗಳನ್ನು ಪ್ರಾರಂಭ ಮಾಡಿ ಕ್ರಾಫ್ಟ್ ಶಾಖೆ ಇವೆಲ್ಲವನ್ನು ವ್ಯವಸ್ಥೆ ಮಾಡಿದರೆ ಒಳ್ಳೆಯ ಖೈದಿಗಳು ಸಜಾ ಮುಗಿದು ಹೊರಗೆ ಬಂದ ನಂತರ ಅವರನ್ನೂ ಮನುಷ್ಯರನ್ನಾಗಿ ಮಾಡುವ ಸಲುವಾಗಿ, ಯಾವ ಉದ್ದೇಶದಿಂದ ಇಂಥದನ್ನು ಮಾಡಬೇಕು ಎಂದು ಮಹಾತ್ಮ ಗಾಂಧಿಯವರು ಉದ್ದೇಶಪಟ್ಟರು ಉದ್ದೇಶ ಸಾಧನೆಗಾಗಿ ಇಂಥ ಕೆಲಸಗಳಿಗೆ ಅವಕಾಶವನ್ನು ಕಲ್ಪಿಸಬೇಕೆಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

## (11) ಮುನ್ಸಿಪಾಲಿಟಿಗಳ ಜವಾಬ್ದಾರಿಗಳ ಕುರಿತು *

ಸ್ವಾಮಿ, ಅಧ್ಯಕ್ಷರೇ, ಈ ದಿವಸ ಈ ಸೆಲೆಕ್ಟ್ ಸಮಿತಿ ಪರಿಶೀಲಿಸಿ ಒಪ್ಪಿಸಿರುವ ಬಿಲ್ಲು ನಮ್ಮ ಮುಂದೆ ಬಂದಿದೆ. ಹಿಂದೆ ನಮ್ಮ ಹೈದರಾಬಾದಿನಲ್ಲಿ 1956ರಲ್ಲಿ ಒಂದು ಆ್ಯಕ್ಟ್ ಜಾರಿಯಲ್ಲಿತ್ತು. ಆದರೆ ಅಷ್ಟರಲ್ಲೇ ಈ ಡಿಸ್ಸೆಂಟಿಗ್ರೇಷನ್ ಬೇರೆ ಆಯಿತು. ಆದರೆ ಈ ಹಿಂದೆ ಇದ್ದದ್ದು ಬಹಳ ತೊಂದರೆ ಉಂಟು ಮಾಡತಕ್ಕ ಆ್ಯಕ್ಟ್ ಆಗಿತ್ತು. ಈಗ ಇಲ್ಲಿ ಸ್ವಲ್ಪ ನಿಧಾನವಾದರೂ ಒಂದು ಒಳ್ಳೆ ಬಿಲ್ಲನ್ನು ತರುತ್ತಾರೆಂದುಕೊಂಡಿದ್ದೆ. ನಮ್ಮ ಆಸೆ ಈಡೇರಿದಂತೆ ಕಾಣುವುದಿಲ್ಲ. ಈಗ ಇಲ್ಲಿ ಬಂದಿರತಕ್ಕ ಬಿಲ್ಲು ಆ ನಮ್ಮ ಹಿಂದಿನ ಬೊಂಬಾಯಿ, ಹೈದರಾಬಾದ್ ರೂಲ್ಸ್ ಗಳಿಗಿಂತಲೂ ನಮಗೆ ಹೆಚ್ಚಿನ ತೊಂದರೆ ಕೊಡುವಂತಾದ್ದಾಗಿದೆ. ಒಂದು ಸಮಗ್ರ ಕಾನೂನನ್ನು ಮಾಡುವುದಕ್ಕೆ 6 ವರ್ಷಗಳನ್ನು ತೆಗೆದುಕೊಂಡಾಗ್ಯೂ ಇದು ಬಹಳ ಆತುರಾತುರವಾಗೇ ಬಂದಿರುವಂತೆ ಕಾಣುತ್ತದೆ.

ಇಲ್ಲಿ ಹೇಳಿರತಕ್ಕ 42ನೆಯ ಸೆಕ್ಷನನ್ನು ನೋಡಿದರೆ; ಅಧ್ಯಕ್ಷರ ಅಧಿಕಾರಾವಧಿ ಒಂದು ವರ್ಷವೆಂದು ತಿಳಿಸಿದೆ. ಇದು ಬಹಳ ಕಡಿಮೆ ಯಾಯಿತು. ಅವರು ಚುನಾವಣೆ ಹೊಂದಿ ಬಂದು ಎಲ್ಲಿ ಏನಿದೆ ಎಂಬುದನ್ನು ತಿಳಿದುಕೊಳ್ಳುವುದಕ್ಕೆ ಅವರಿಗೆ ನಾಲ್ಕು ಐದು ತಿಂಗಳು ಕಾಲ ಬೇಕು. ಅಷ್ಟರಲ್ಲಿ ಅವರ ಅಧಿಕಾರಾವದಿ ಮುಗಿಯುತ್ತದೆ ಎಂದರೆ ಏನು ಅರ್ಥ? ಈ ಅಸೆಂಬ್ಲಿಯ ಸದಸ್ಯರಿಗೆ ಇರುವಂತೆ, ಮಂತ್ರಿಮಂಡಲಕ್ಕೆ ಇರುವಂತೆ ಐದು ವರ್ಷದ ಒಂದು ಅವಧಿಯನ್ನಾದರೂ ಇರುವುದು ಉತ್ತಮವೆಂದು ನಾನು ಸೂಚಿಸುತ್ತೇನೆ.

ಇನ್ನು ಸೆಕ್ಷನ್ 72ರಲ್ಲಿ ಮುಸ್ಸಿಪಾಲಿಟಿಯಲ್ಲಿ ನಡೆಸಲ್ಪಡತಕ್ಕ ಕೆಲಸಕಾರ್ಯಗಳಿಗಾಗಿ ಇಪ್ಪತ್ತು ಸಾವಿರ ರೂಪಾಯಿಗಳನ್ನು ಎತ್ತಿದ್ದಾರೆ ಇದು ಬಹಳ ಕಡಿಮೆಯಾಯಿತು. ಸಣ್ಣ ರಸ್ತೆ ಕೆಲಸಕ್ಕೂ ಸಾಲುವುದಿಲ್ಲ. ಈ ವಿಚಾರದಲ್ಲಿ ನಮ್ಮ ಅನುಭವದಲ್ಲಿರತಕ್ಕ ಮತ್ತೊಂದು ವಿಚಾರವೇನೆಂದರೆ ನಾವು ಈ ಕೆಲಸಗಳ ಬಗ್ಗೆ ಅಡ್ಮಿನಿಸ್ಟ್ರೇಟಿವ್ ಮತ್ತು ಟೆಕ್ನಿಕಲ್ ಸ್ಯಾಂಕ್ಷನ್ ಪಡೆಯುವುದರೊಳಗೆ ಅಲ್ಲಿ ರೇಟುಗಳ ಬದಲಾವಣೆ ಆಗುತ್ತದೆ. ಹೀಗಾಗಿ ಇಲ್ಲಿ ನಮ್ಮ ಕೆಲಸಗಳೊಂದು ಸರಿಯಾಗಿ ಆಗುತ್ತಿಲ್ಲ. ಬಹಳ ತೊಂದರೆಗಳಾಗುತ್ತಿವೆ. ಆದುದರಿಂದ ಈ ಹಣವನ್ನು ಇನ್ನು ಸ್ವಲ್ಪ ಜಾಸ್ತಿ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಸೆಕ್ಷನ್ 327 ಮತ್ತು 316ರಲ್ಲಿ ಮುಸ್ಸಿಪಾಲಿಟಿಯ ಅಧ್ಯಕ್ಷರಿಗಿರಬೇಕಾದ ಅಧಿಕಾರವನ್ನು ಕಿತ್ತುಕೊಂಡು ಅದನ್ನು ಸರಕಾರಿ ಅಧಿಕಾರಿಗೆ ಕೊಟ್ಟಿದ್ದಾರೆ. ಇದರಿಂದ ಮುಂದೆ ಬಹಳ ತೊಂದರೆ ಬರುತ್ತದೆ. ಈ ವಿಚಾರವನ್ನು ಮತ್ತೆ ಪರಿಶೀಲನೆ ಮಾಡಬೇಕೆಂದು ಸಲಹೆ ಮಾಡುತ್ತೇನೆ.

---

* ವಿಧಾನಸಭೆಯ ನಡವಳಿಕೆಯ ದಿನಾಂಕ 3ನೇ ಡಿಸ್ಚೆಂಬರ್, 1963

ಇನ್ನು ಸೆಕ್ಷನ್ 365ರಲ್ಲಿ ಮುನಿಸಿಪಾಲಿಟಿಗೆ ಸೇರಿದಂತೆ ಒಂದು ಎಗ್ಸಿಕ್ಯುಟಿವ್ ಇಂಜನಿಯರಿಂಗ್ ಸಿಬ್ಬಂದಿಯನ್ನು ಇಟ್ಟುಕೊಳ್ಳಬೇಕಾದುದ್ದು ಅಗತ್ಯ. ಈಗಾಗಲೇ ಪಿ.ಡಬ್ಲ್ಯೂ.ಡಿ. ಯವರಿಗೆ ಸಾಕಷ್ಟು ಕೆಲಸವಿದೆ. ಆದ್ದರಿಂದ ಅವರು ನಮ್ಮ ಕೆಲಸವನ್ನು ಸರಿಯಾಗಿ ಮಾಡುತ್ತಿಲ್ಲ. ಈ ವಿಚಾರವನ್ನು ನಾನು ಮಂತ್ರಿಗಳ ಗಮನಕ್ಕೂ ತಂದಿದ್ದೇನೆ. ಅವರ ಮೇಲೆ ಮುನಿಸಿಪಾಲಿಟಿಗಳ ಅಧಿಕಾರ ನಡೆಯುತ್ತಿಲ್ಲ. ನಮ್ಮ ಮಾನ್ಯ ಮಂತ್ರಿಗಳಿಗೂ ತಿಳಿದಂತೆ ಇಲ್ಲಿ ಪ್ರತ್ಯೇಕವಾದ ಇಂಜನಿಯರಿಂಗ್ ಕೇಡರ್ ಎಂದು ಈ ಇಲಾಖೆಗೆ ಇರುವುದಿಲ್ಲ. ಇದರಿಂದಾಗಿ ಇವರ ಸೇವೆ ನಮ್ಮ ಇಲಾಖೆಗೆ ಬೇಗನೆ ಸಿಗುತ್ತಿಲ್ಲ. ಇದುವರೆಗೂ ಶ್ರೀಮಾನ್ ಅಣ್ಣಾರಾಯರು ಟ್ಯಾಕ್ಸೇಷನ್ನಿನ ವಿಚಾರದಲ್ಲಿ ಬೇಕಾದಷ್ಟು ಹೇಳಿದ್ದಾರೆ. ನನಗೆ ಒಂದು ದು:ಖದ ಸಂಗತಿ ಇದರಲ್ಲಿ ಕಾಣುವುದೇನೆಂದರೆ, ಹಿಂದೆ ಬ್ರಿಟಿಷರ ಕಾಲದಲ್ಲಿ ಲೋಕಲ್ ಸೆಲ್ಫ್ ಗೌರ್ನಮೆಂಟ್ ಸಂಬಂಧವಾಗಿ ಎಷ್ಟೋ ಅಧಿಕಾರಗಳನ್ನು ಅವರು ಜನರ ಕೈಯಲ್ಲಿ ಕೊಟ್ಟಿದ್ದರು. ಆಗ ಎಲ್ಲೋ ಅಲ್ಪ ಸ್ವಲ್ಪ ಗದ್ದಲಗಳು ಆಗುತ್ತಿದ್ದವು. ಈಗ ಲೋಕಶಾಹಿ ಸರಕಾರ ಬಂದರೂ ಜನಗಳಿಗೆ ಹಿಂದೆ ಕೊಟ್ಟ ಅಧಿಕಾರವನ್ನು ಕಿತ್ತು ಕೊಂಡು ತೊಂದರೆಗೆ ಒಳಗಾಗುವಂತೆ ಮಾಡಿದ್ದಾರೆ. ಅಲ್ಲದೆ ಸರಕಾರದಲ್ಲಿ ಮುನ್ಸಿಪಾಲಿಟಿಗಳಿಗೆ ಸಂಬಂಧಪಟ್ಟಂತೆ ಪ್ರತ್ಯೇಕವಾದ ಒಬ್ಬ ಮಂತ್ರಿಯನ್ನು ತೆಗೆದುಕೊಂಡಿದ್ದಾರೆ. ಅವರು ತಮ್ಮ ಜವಾಬ್ದಾರಿಯನ್ನು ಅರಿತುಕೊಳ್ಳಲು ಎಲ್ಲಾ ಮುನಿಸಿಪಾಲಿಟಿಗಳಲ್ಲೂ ಏನೇನು ತೊಂದರೆಗಳಿವೆ ಎನ್ನುವುದನ್ನೆಲ್ಲಾ ಚೆನ್ನಾಗಿ ಪರಿಶೀಲನೆ ಮಾಡಬೇಕೆಂದು ನಾನು ಸಲಹೆ ಮಾಡುತ್ತೇನೆ. ಹೋದ ವರ್ಷ ದಾವಣಗೆರೆಯಲ್ಲಿ ಮುನಿಸಿಪಾಲಿಟಿಗಳವರ ಒಂದು ಕಾನ್ಫರೆನ್ಸ್ ಆದಾಗ ಅಲ್ಲಿ ಹಿಂದೆ ಮಂತ್ರಿಗಳಾಗಿದ್ದ ಶ್ರೀಮಾನ್ ಸುಬ್ರಮಣ್ಯಯವರ ಸರಕಾರದವರು ಮುನಿಸಿಪಾಲಿಟಿಗೆ ಸಾಲವಾಗಿ ಕೊಟ್ಟ ಹಣವನ್ನು ಮುನಿಸಿಪಾಲಿಟಿಗಳವರು ವಾಪಸ್ಸು ಮಾಡುತ್ತಿಲ್ಲವೆಂದು ಹೇಳಿದರು. ಆದರೆ ಮುನಿಸಿಪಾಲಿಟಿಗಳಿಗೆ ಸರಕಾರದ ಕಡೆಯಿಂದ ಬರಬೇಕಾದ ಹಣವನ್ನು ಸರಕಾರ ಸರಿಯಾಗಿ ಕೊಡುತ್ತಿಲ್ಲ ಉದಾಹರಣೆಗಾಗಿ ನಮ್ಮ ಗುಲಬರ್ಗಾ ಭಾಗದಲ್ಲಿ ಮೋಟಾರು ವೆಹಿಕಲ್ ಟ್ಯಾಕ್ಸು ಜಾರಿಗೆ ಬಂದ ಮೇಲೆ ನಾಲ್ಕು ವರ್ಷಗಳಿಂದಲೂ ಸರಕಾರದಿಂದ ಮುನಿಸಿಪಾಲಿಟಿಗಳಿಗೆ ಬರಬೇಕಾದ ಹಣ ಇನ್ನೂ ಬಂದಿಲ್ಲ ಇದನ್ನು ಮಂತ್ರಿಗಳ ಗಮನಕ್ಕೂ ತಂದದ್ದಾಯಿತು. ಸರಕಾರಕ್ಕೆ ಮನವಿಗಳನ್ನು ಸಲ್ಲಿಸಲಾಯಿತು. ಹೀಗಿದ್ದರೂ ಕೂಡಾ ಮುನಿಸಿಪಾಲಿಟಿಗಳ ಕಾನ್ಫರೆನ್ಸ್‌ನಲ್ಲಿ ಮುನಿಸಿಪಾಲಿಟಿಗಳವರು ಸಾಲವಾಗಿ ತೆಗೆದುಕೊಂಡ ಹಣವನ್ನು ವಾಪಸ್ಸು ಕೊಡದಿರುವುದು ನಾಚಿಕೆಗೇಡಿನ ವಿಚಾರ ಎಂದು ಹೇಳಿದರೆ ಮುನಿಸಿಪಾಲಿಟಿಗೆ ದುಡ್ಡು ಎಲ್ಲಿಂದ ಬರಬೇಕು? ಇದಕ್ಕೆ ಪ್ರತ್ಯೇಕವಾದ ಮಂತ್ರಿಗಳಿದ್ದರೂ ಸರಕಾರದ ಕಡೆಯಿಂದ ಮುನ್ಸಿಪಾಲಿಟಿಗಳಿಗೆ ಕೊಡಬೇಕಾದ ಹಣ ಬರುವಂತೆ ಮಾಡಲು ತಕ್ಕ ಪ್ರಯತ್ನ ಮಾಡಿಲ್ಲ. ಇದರಿಂದ ಮುನಿಸಿಪಾಲಿಟಿಗೂ ತ್ರಾಸ್ ಆಗುತ್ತದೆ. ಏನೋ ನೀವು ಒಂದು ತರಹದ ಕ್ಯಾಬಿನೆಟ್ ಸೆಟ್‌ಅಪ್‌ಗೆ ಹೊಂದಿಕೊಂಡಿರಬೇಕು ಎನ್ನುವ ಭಾವನೆ ಬರುವಂತೆ ಮಾಡಬಾರದು.

ಪುಟ್ಟ 102ರಲ್ಲಿ ಕ್ಲಾಸ್ 94ರಲ್ಲಿ ಹೀಗಿದೆ:

ಅದನ್ನು ಹೀಗೆ ಅವಕಾಶ ಮಾಡಿಕೊಡಲಾಗಿದೆ: ಕೇಂದ್ರ ಸರಕಾರಕ್ಕೆ ಸಂಬಂಧಿಸಿದ ಅಥವಾ ಯಾವುದೇ ರಾಜ್ಯ ಸರಕಾರಕ್ಕೆ ಸಂಬಂಧಿಸಿದ ಮತ್ತು ಸರಕಾರದ ಉದ್ದೇಶಗಳಿಗಾಗಿ ಉಪಯೋಗಿಸುವ ಕಟ್ಟಡಗಳಿಗಾಗಿ (ವಾಸಸ್ಥಾನ ಮತ್ತು ವಾಣಿಜ್ಯ ಉದ್ದೇಶಗಳಿಗಾಗಿ ಹೊರತುಪಡಿಸಿ) ಸರಕಾರದ ಅನುಮತಿ ಇಲ್ಲದೇ ಯಾವುದೇ ಕರವನ್ನು (ವಿಶೇಷ ಸ್ಯಾನಿಟರಿ ಸೆಸ್ ಅಥವಾ ನೀರಿನ ದರ ಹೊರತುಪಡಿಸಿ), ವಿಧಿಸುವಂತಿಲ್ಲ.

ಹೀಗೆ ಮುನಿಸಿಪಾಲಟಿಗಳವರು ಇಂತಹ ಕಟ್ಟಡಗಳ ಮೇಲೆ ಯಾವ ತೆರಿಗೆಯನ್ನು ಹಾಕುವಂತಿಲ್ಲ. ಈ ರೀತಿ ಏಕಿರಬೇಕು? ಸೆಂಟ್ರಲ್ ಗೌರ್ನಮೆಂಟಿನವರೇನಾದರೂ ಅವರು ಹಾಕುವ ಟ್ಯಾಕ್ಸ್‌ಗಳನ್ನು ಏನಾದರೂ ಕಡಿಮೆ ಮಾಡಿ ಕೊಡುತ್ತಿದ್ದಾರೆಯೇ? ಎಂದರೆ ಅವೇನು ಇಲ್ಲ. ಇವರ ಮೇಲೆ ಟ್ಯಾಕ್ಸ್‌ನ್ನು ಹಾಕಿ ಏಕೆ ವಸೂಲು ಮಾಡಬಾರದು? ಅವರೇನಾದರೂ ನಮಗೆ ಕನ್‌ಸಿಷನ್ ಕೊಡುತ್ತಾರೆಯೇ? ಎಂದರೆ ಇಲ್ಲ. ರೈಲ್ವೆ ಕಟ್ಟಡಗಳ ಮೇಲೆ ಟ್ಯಾಕ್ಸ್‌ನ್ನು ಹಾಕಬಾರದು ಎಂದರೆ ಅವರು ಮಾರುವ ರೈಲ್ವೆ ಟಿಕೆಟುಗಳ ಮೇಲೆ ಒಂದು ರೀತಿಯ ಪರ್ಸಂಟೇಜನ್ನು ನಮ್ಮ ಸರಕಾರಕ್ಕೆ ಕೊಡುತ್ತಾರೆ. ಸೇಲ್ಸ್ ಟ್ಯಾಕ್ಸ್‌ನಲ್ಲಿ ಒಂದು ತರಹದ ಶೇರು ಕೊಡುತ್ತಾರೆ. ಆದರೆ ನಮ್ಮ ಮುನಿಸಿಪಾಲಿಟಿಗಳಿಗಾಗಿ ಯಾವ ವಿಧವಾದ ಸಹಾಯವನ್ನು ಕೊಡುತ್ತಿಲ್ಲ. ಇಂತಹ ಕಟ್ಟಡಗಳ ಮೇಲೆ ತೆರಿಗೆ ಹಾಕದೇ ಹೋದರೆ ಮುನಿಸಿಪಾಲಿಟಿಗೆ ಹಣ ಬರುವುದು ಹೇಗೆ? ಸೆಂಟ್ರಲ್ ಸರಕಾರದಲ್ಲಿರುವ ಒಬ್ಬ ಎಂ.ಪಿ.ಗೆ ಇದರಿಂದ ಅಷ್ಟು ತೊಂದರೆ ಅಲ್ಲ. ಅಥವಾ ರಾಜ್ಯ ಸರಕಾರದ ಎಂ.ಎಲ್.ಎ ಗಳಿಗೆ ಅಷ್ಟು ತೊಂದರೆ ಇಲ್ಲ. ಆದರೆ ಮುನಿಸಿಪಾಲಿಟಿಯಲ್ಲಿರುವ ಕೌನ್ಸ್‌ಲರುಗಳಿಗೆ ಪ್ರಾಪರ್ಟಿ ಟ್ಯಾಕ್ಸ್ ಒಂದನ್ನು ಬಿಟ್ಟರೆ ಬೇರೆ ಇತರ ಡೈರೆಕ್ಟ್ ಟ್ಯಾಕ್ಸ್ ಹಾಕಬೇಕೆಂದರೆ ಬಹಳ ವ್ಯತ್ಯಾಸವಾಗುತ್ತದೆ. ಸೆಂಟ್ರಲ್ ಗೌರ್ನಮಂಟಿನವರು ಕಡ್ಡಿಪೆಟ್ಟಿಗೆಯ ಮೇಲೆ ಸುಂಕ ಏರಿಸಿದಂತೆ, ಅದರಂತೆ ಜನ ಕೊಡುತ್ತಾರೆ. ಡೀಸಲ್ ಎಣ್ಣೆ ಮೇಲೆ ತೆರಿಗೆ ಹೆಚ್ಚಿಸಿದರೂ ಅದರಂತೆ ಜನ ಕೊಡುತ್ತಿದ್ದಾರೆ. ಇದರಿಂದ ದೊಡ ಪ್ಲಾನುಗಳನ್ನು ಮಾಡಿ ದೇಶವನ್ನು ಅಭಿವೃದ್ಧಿ ಮಾಡುತ್ತಿದ್ದೇವೆ ಎಂದು ಹೇಳುತ್ತಿದ್ದಾರೆ. ನಮ್ಮ ರಾಯಚೂರು ಭಾಗದಲ್ಲಿ ಒಂದು ಏರಿಯಾವನ್ನು ಸೊಮಾರು 40-60 ಅಡಿಗಳಷ್ಟು ಜಾಗವನ್ನು ಡೆವಲಪ್ ಮಾಡಲು ಕಾಂಪೆನ್‌ಸೇಷನ್ನಿಗಾಗಿ 50-60 ಸಾವಿರ ರೂಪಾಯಿಗಳನ್ನು ಹಣ ಕೊಡಬೇಕಾಗುತ್ತದೆ. ಮುನಿಸಿಪಾಲಿಟಿಗೆ ಉತ್ಪತ್ತಿ ಇಲ್ಲದೇ ಹೋದರೆ ಇವನ್ನೆಲ್ಲಾ ಹೇಗೆ ಕೊಡುವುದುಕ್ಕೆ ಸಾಧ್ಯವಾಗುತ್ತದೆ? ಉದಾಹರಣೆಗಾಗಿ ಹೇಳುವುದಾದರೆ, ಈ ಸರಕಾರ ದವರು ರಾಯಚೂರು ಮುನಿಸಿಪಾಲಿಟಿಗೆ ಇಪ್ಪತ್ತೊಂದು ಚಾರ್ಜುಗಳನ್ನು ಹಾಕಿ ಒಂದು ಶೋಕಾಸ್ ನೋಟೀಸನ್ನು ಕಳಿಸಿದರು. ಅದರಲ್ಲಿ ನಮ್ಮ ರಾಯಚೂರು ಭಾಗದಲ್ಲಿ ಸ್ಯಾನಿಟೇಷನ್ ಇಲ್ಲ. ರೋಡ್ ಚೆನ್ನಾಗಿಲ್ಲ, ಇತ್ಯಾದಿ ಹೇಳಿದ್ದರು. ಇದಕ್ಕೆ ನಮ್ಮ ಮುನಿಸಿಪಾಲಿಟಿಯಲ್ಲಿ ದುಡ್ಡಿಲ್ಲ. ಅಲ್ಲದೆ

ಸರಕಾರದ ಕಡೆಯಿಂದ ಬರಬೇಕಾದ ದುಡ್ಡು ಸಹ ಬಂದಿಲ್ಲ. ಇದು ಬಹಳ ದು:ಖದ ಸ್ಥಿತಿ. ಅಲ್ಲದೆ ಇಲ್ಲಿರುವ ಎಗ್ಜಿಕ್ಯೂಟಿವ್ ಆಫೀಸರ್ ಸರಕಾರದ ಹಿಡಿತಕ್ಕೆ ಒಳ್ಳಪಟ್ಟಿರುವುದರಿಂದ, ಸರಕಾರಕ್ಕೆ ಕೊಡಬೇಕಾದ ಹಣಕ್ಕೆ ಮೊದಲು ಗಮನ ಕೊಟ್ಟು ಆನಂತರ ಮುನ್ಸಿಪಾಲಿಟಿ ಗಮನ ಕೊಡುತ್ತಾರೆ. ಹೀಗಾದರೆ ಅಭಿವೃದ್ಧಿ ಕೆಲಸಗಳು ಹೇಗಾಗಬೇಕು? ನಮಗೆ ಬರಬೇಕಾದ ಹಣಕ್ಕೆ ಯಾವ ಏರ್ಪಾಡು ಇಲ್ಲ. ಎಲ್ಲಾ ಅಧಿಕಾರಿಗಳು ಜಿಲ್ಲಾಧಿಕಾರಿಗಳ ಕಡೆಗೇ ಇವೆ. ಇದರಿಂದ ಅಧಿಕಾರ ದುರುಪಯೋಗವಾಗದೆ ಇರಲು ಶಕ್ಯವಿಲ್ಲ. ಹೈದರಾಬಾದ್ ಕರ್ನಾಟಕದ ಭಾಗಗಳಲ್ಲಿ ಎಷ್ಟೋ ಮುನಿಸಿಪಾಲಿಗಳಲ್ಲಿ ಅಧಿಕಾರಿಗಳಿಂದ ಬರಬೇಕಾದ ಹಣ ಇನ್ನೂ ಮುನಿಸಿಪಾಲಿಟಿಗೆ ಬರುತ್ತಿಲ್ಲ. ಇದರ ಬಗ್ಗೆ ಇಲ್ಲಿ ಪ್ರಶ್ನೆ ಕೂಡಾ ಕೇಳಿದ್ದಾರೆ. ಈಗಿರುವ ಡೆಪ್ಯೂಟಿ ಕಮೀಷನರರ ಬಂಗಲೆಯನ್ನು ಮುನಿಸಿಪಾಲಿಟಿಯವರು ಮಾರಿದರೆ ಸುಮಾರು ಒಂದು ಲಕ್ಷ ರೂಪಾಯಿಗಳಷ್ಟು ಆದಾಯ ಬರುತ್ತದೆ. ಅಂತಹ ಕಟ್ಟಡಗಳ ಮೇಲೆ ಬರಬೇಕಾದ ವರಮಾನವನ್ನು ಮುನಿಸಿಪಾಲಿಟಿಗಳಿಗೆ ಒದಗಿಸಿಕೊಡುತ್ತಿಲ್ಲ. ಇದರ ಬಗ್ಗೆ ಎಷ್ಟೋ ಸಲ ಮನವಿಗಳನ್ನು ಸರಕಾರಕ್ಕೆ ಕೊಟ್ಟಾಯಿತು; ನಾಲ್ಕು ನಾಲ್ಕು ಸಲ ಡೆಲಿಗೇಷನ್ನು ಕೂಡಾ ಸರಕಾರಕ್ಕೆ ಹೋಗಿದ್ದಾಯಿತು. ಅಲ್ಲದೆ ಈ ಅಸೆಂಬ್ಲಿಯಲ್ಲೂ ಪ್ರಶ್ನೆ ಕೇಳಿದ್ದಾಯಿತು. ಇಷ್ಟಾದರೂ ಸರಕಾರ ನಮಗೆ ದುಡ್ಡು ಕೊಡುವ ವ್ಯವಸ್ಥೆ ಮಾಡಿಲ್ಲ. ಇದನ್ನು ನಾವು ಸೋಸಿಯಲಿಸ್ಟಿಕ್ ಪಾಟರ್ನ್ ಆಫ್ ಸೊಸೈಟಿ ಎಂದು ಹೇಳೋಣವೇ ಅಥವಾ ಸಮಾಜವಾದವೆಂದು ಹೇಳೋಣವೇ? ಅಥವಾ ಇದು ಯಾವ ತರಹದ ಡೆಮೋಕ್ರಸಿ ಎಂದು ಹೇಳಬೇಕು? ಇದು ಫ್ಯೂಡಲಿಸ್ಟಿಕ್ ಡೆಮಾಕ್ರಸಿ ಎನ್ನುವುದು ಇದರಿಂದ ಗೊತ್ತಾಗುತ್ತದೆ? ಇದರಿಂದ ನನಗೆ ದು:ಖವಾಗುತ್ತಿದೆ. ಈ ಬಿಲ್ಲನ್ನು ಈಗ ತರದೇ ಇನ್ನೂ ಆರು ತಿಂಗಳ ಕಾಲ ಸರಿಯಾಗಿ ನೋಡಿಕೊಂಡು ತರುವುದು ಉತ್ತಮ. ಈಗ ಈ ಬಿಲ್ಲನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದುಕೇಳಿಕೊಳ್ಳುತ್ತೇನೆ. ಇಷ್ಟು ಮಾತನಾಡಲು ಅಧ್ಯಕ್ಷರು ಅವಕಾಶ ಕೊಟ್ಟಿದ್ದಕ್ಕೆ ಅವರನ್ನು ವಂದಿಸಿ ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

## (12) ಮುನ್ಸಿಪಾಲಿಟಿಗಳ - ಅಧ್ಯಕ್ಷ ಮತ್ತು ಉಪಾಧ್ಯಕ್ಷರ ನೇಮಕಾತಿಯ ಕುರಿತು. *

**ಶ್ರೀ ಗಂಗಾಧರ ನಮೋಶಿ:** ಮಾನ್ಯರೆ, ಮಿನಿಷ್ಟರೂ ಕೂಡ ಇದಕ್ಕೆ ಸೂಚನೆ ಮಾಡಬೇಕಾಗಿ ಬಂತಲ್ಲೂ ಎಂದು ಅಷ್ಟೇ ನಮ್ಮ ವ್ಯಸನ. ವಿರೋಧ ಪಾರ್ಟಿಯವರು ಸೂಚನೆ ಮಾಡಿರುವ ತಿದ್ದುಪಡಿಗಳು ನಾಲ್ಕು ಪುಟಗಳಾದರೆ, ಮಿನಿಷ್ಟರು ಸೂಚನೆ ಮಾಡಿರುವ ತಿದ್ದುಪಡಿಗಳು ಏಳುಪುಟ ಆಗುತ್ತದೆ. ಅದಕ್ಕೆ ನಾವು ಹೇಳಿದ್ದು ಏನೆಂದರೆ ಇದನ್ನೆಲ್ಲಾ ಕೂಲಂಕುಷವಾಗಿ ಪರಿಶೀಲನೆ ಮಾಡಿ ನೋಡಿ ಇದನ್ನು ಒಳ್ಳೆಯ ರೀತಿಯಿಂದ ಮಾಡಿದರೆ ಎಲ್ಲರಿಗೂ ಒಳ್ಳೆಯದಾಗುತ್ತದೆ. ಮಿನಿಷ್ಟರು ಟರ್ಮ್ ಆಫ್ ಆಫೀಸ್ ಎನ್ನುವುದಕ್ಕೆ ತಿದ್ದುಪಡಿ ಮಾಡಿರುವ ವಿಷಯದಲ್ಲಿ ಅದು ಕಂಪ್ಲೀಟ್ ಪಿರೀಯಡ್ ಇರಬೇಕೆಂದು ಒತ್ತಿ ಹೇಳುತ್ತೇನೆ. ಒಂದು ವರ್ಷದ ಅವಧಿಯನ್ನು ಬದಲಾಯಿಸುವುದಕ್ಕೆ ಕೌನ್ಸಿಲ್‌ನವರಿಗೆ ಅಧಿಕಾರ ಕೊಟ್ಟರೆ ದಿವಸಕ್ಕೆ ಒಂದೊಂದು ರೀತಿಯಲ್ಲಿ ಆಗಿ ಇವತ್ತು ಅವರು ನಾಳೆ ಮತ್ತೊಬ್ಬರು ಈ ರೀತಿಯೆಲ್ಲಾ ಆಗಬಹುದು. ಹಿಂದೆ ಮೊಗಲಾಯರ ಕಾಲದಲ್ಲಿ ಆಗುತ್ತಿದ್ದಂತೆ 'ಏಕ್ ದಿನ್ ಕಾ ಸುಲ್ತಾನ್' ಎನ್ನುವಂತೆ ಆಗುತ್ತದೆ. ಈ ರೀತಿ ಎಲ್ಲಾ ಆಗಬಹುದು. ಈ ದಿನ ಮಂತ್ರಿಗಳು, ಉಪಮಂತ್ರಿಗಳು ಆಗಿರುವ ತಾವು ನಾಳೆ ದಿನ ಮುನಿಸಿಪಲ್ ಪ್ರೆಸಿಡೆಂಟರೇ ಆದಾಗ ತಮಗೇ ಅನಿಸುತ್ತದೆ ನಾನು ಏಕೆ ಈ ಸ್ಥಾನಕ್ಕೆ ಬಂದೆನೋ ಎಂದು; ಅಷ್ಟು ತಾಪತ್ರಯ ಪಡುತ್ತೀರಿ. ಆತುರ ಆತುರವಾಗಿ ಮಾಡಿದ್ದೀರಿ, ಈಗ ಮಾಡಿದ್ದು ಸರಿಯಾದ್ದಲ್ಲಿ ಎಂದು ಹೇಳುವುದಕ್ಕೆ ಒಂದು ಉದಾಹರಣೆಯನ್ನು ಕೊಡುತ್ತೇನೆ, ಶ್ರೀಮಾನ್ ಕೊಂಡಜ್ಜಿ ಬಸಪ್ಪನವರನ್ನು ಕೇಳಿದ್ದರೆ ಒಳ್ಳೆಯ ರೀತಿಯಲ್ಲಿ ಉತ್ತರ ಕೊಡುತ್ತಿದ್ದರು; ತಾಲ್ಲೂಕು ಬೋರ್ಡು, ಪಂಚಾಯ್ತಗಳನ್ನು ಈ ತರಹ ಮಾಡಲಿಲ್ಲ ಎಂದಮೇಲೆ ನಿಮಗೆ ಈ ರೀತಿ ಮಾಡಲು ಯಾವ ರೀತಿ ಬುದ್ಧಿ ಬಂತೋ ಅರ್ಥವಾಗಲಿಲ್ಲ. ತಾಲ್ಲೂಕು ಆಕ್ಟ್, ಪಂಚಾಯ್ತಿ ಆ್ಯಕ್ಟ್ ಮಾಡುವ ಕಾಲಕ್ಕೆ ರಾಜಾಸ್ತಾನ, ಕಲ್ಕತ್ತಾ, ಮದ್ರಾಸು, ಇಲ್ಲೆಲ್ಲಾ ಇರತಕ್ಕ ಪ್ರೋಗ್ರೆಸೀವ್ ಆ್ಯಕ್ಟ್ ಇಟ್ಟುಕೊಂಡು ಮಾಡಿದ್ದಾರೆ, ಆದ್ದರಿಂದ ಅದರ ಬಗ್ಗೆ ಒಳ್ಳೆಯ ಆ್ಯಕ್ಟ್ ಬಂತು. ಆದ್ದರಿಂದ ತಾವು ಕೊಟ್ಟಿರತಕ್ಕ ತಿದ್ದುಪಡಿಗಳನ್ನು ಹಿಂದಕ್ಕೆ ತೆಗೆದು ಕೊಂಡು ಇನ್ನೊಂದು ಸಾರಿ ಎಲ್ಲವನ್ನೂ ಚೆನ್ನಾಗಿ ಪರಿಶೀಲನೆ ಮಾಡಿ ಇದನ್ನು ಸುಧಾರಿಸಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ.

* ವಿಧಾನಸಭೆಯ ನಡವಳಿಕೆಯ ದಿನಾಂಕ 4ನೇ ಡಿಸೆಂಬರ್, 1963

## (13) ಮನರಂಜನಾ ತೆರಿಗೆ (ತಿದ್ದುಪಡಿ) ವಿದೇಯಕ *

ಶ್ರೀ ಗಂಗಾಧರ ನಾಮೋಶಿ ಸ್ವಾಮಿ, ಹೈದರಾಬಾದ್ ಕರ್ನಾಟಕದಲ್ಲಿ ಇದ್ದ ಎಂಟರ್‌ಟೇನ್‌ಮೆಂಟ್ ಟ್ಯಾಕ್ಸನ್ನು ಮೈಸೂರು ಸರಕಾರದವರು ವಹಿಸಿಕೊಂಡು ಅದನ್ನು ಕಲೆಕ್ಟ್ ಮಾಡುತ್ತಾ ಇದ್ದಾರೆ. ಆದರಲ್ಲಿ 10 ಪರ್ಸೆಂಟ್ ಕಲೆಕ್ಷನ್ ಟ್ಯಾಕ್ಸ್ ಎಂದು ತೆಗೆದುಕೊಂಡು ಮುನಸಿಪಾಲಿಟಿಗೆ ಉಳಿದುದನ್ನು ಕೊಡುತ್ತಾರೆ. ನ್ಯಾಯವಾದ ರೀತಿಯಲ್ಲಿ ನೋಡಿದರೆ ಇದು ಮುನಿಸಿಪಲ್ ಟ್ಯಾಕ್ಸ್ ಏಕೆಂದರೆ ಎಂಟರ್‌ಟೇನ್‌ಮೆಂಟ್ ನಡೆಯುವುದು ಊರಿನಲ್ಲಿ. ಸ್ಯಾನಿಟೇಶನ್, ಥಿಯೇಟರ್ ಕ್ಲೀನ್ಲಿನೆಸ್, ಯೂರಿನಲ್ಸ್, ಲೆಟ್ರೀನ್ಸ್, ಇವುಗಳ ಮೇಲ್ವಿಚಾರಣಾ ಜವಾಬ್ದಾರಿ ಇರುವುದು ಮುನಿಸಿಪಾಲಿಟಿಗೆ, ಇವತ್ತು ಸರಕಾರ ಅವುಗಳ ಕಡೆ ಲಕ್ಷಕೊಡುವುದಿಲ್ಲ. ಸೇಲ್ಸ್ ಟ್ಯಾಕ್ಸ್ ವಸೂಲು ಮಾಡಿದರೆ ಅದಕ್ಕೆ ಸಿಬ್ಬಂದಿ ಮಾಡಿದ್ದಾರೆ. ಈ ಎಂಟರ್‌ಟೇನ್‌ಮೆಂಟ್ ಟ್ಯಾಕ್ಸ್ ತೆಗೆದುಕೊಂಡು ಸರಕಾರದವರು ಮುನಿಸಿಪಾಲಿಟಿಗಳಿಗೆ ಏನಾದರೂ ವಿಧೇಯರಾಗಿದ್ದಾರೊ? ಮಾನ್ಯ ಮಂತ್ರಿಗಳಲ್ಲಿ ವಿನಂತಿ ಮಾಡಿಕೊಳ್ಳುವುದೇನೆಂದರೆ ಗುಲ್ಬರ್ಗಾ ಮುನಿಸಿಪಾಲಿಟಿಗೆ ಇದರಿಂದ 1 ಲಕ್ಷದವರೆಗೆ ಇನ್‌ಕಂ ಬರುತ್ತಿದೆ. ಈ ಒಂದು ಲಕ್ಷ ಆದಾಯ ಹೋದರೆ ಏನೂ ಉಳಿಯುವುದಿಲ್ಲ. ಥಿಯೇಟರಿಗೆ ಪರ್ಮಿಷನ್ ಕೊಡುವವರು ಮುನಿಸಿಪಾಟಿಯವರು, ಏನೂ ಡಿಸ್ಟರ್ಬೆನ್ಸ್ ಇಲ್ಲದಂತೆ ನೋಡಿಕೊಳ್ಳುವವರು ಮುನಿಸಿಪಾಲಿಟಿಯವರು, ಸಾನಿಟೇಷನ್ ನೋಡುವವರು ಅವರು, ಆದರೆ ಸರಕಾರಕ್ಕೆ ದುಡ್ಡು ಸಿಕ್ಕುತ್ತದೆ. ಒತ್ತಾಯದಿಂದ ಒಂದರ ಮೇಲೊಂದು ಉತ್ಪತ್ತಿಯನ್ನು ಮುನಿಸಿಪಾಲಿಟಿಯಿಂದ ತೆಗೆದುಕೊಳ್ಳುತ್ತಿದ್ದಾರೆ. ಮೋಟಾರ್ ವೆಹಿಕಲ್ಸ್ ಟ್ಯಾಕ್ಸ್ ತೆಗೆದುಕೊಂಡರು ಎಂಟರ್‌ಟೇನ್‌ಮೆಂಟ್ ಟ್ಯಾಕ್ಸ್ ಸಲುವಾಗಿ ನೀವು ರೆಸಿಗ್ನೇಷನ್ ಕೊಡುವ ಪರಿಸ್ಥಿತಿ ಬಂದರೂ ರಿಸೈನ್ ಮಾಡಿ ಹೊರಗೆ ಬನ್ನಿ, ನಾವು ನಿಮಗೆ ಸಪೋರ್ಟ್ ಕೊಟ್ಟು ಈ ಟ್ಯಾಕ್ಸ್ ಮುನಿಸಿಪಾಲಿಟಿಗೆ ತಪ್ಪದಂತೆ ಫೈಟ್ ಮಾಡುತ್ತೇವೆ. ಇದು ಮುನಿಸಿಪಾಲಿಟಿಗೆ ನ್ಯಾಯವಾಗಿ ಸಲ್ಲತಕ್ಕ ಟ್ಯಾಕ್ಸ್ ಅಲ್ಲ ಎಂದು ನಮಗೆ ಕನ್‌ವಿನ್ಸ್ ಮಾಡಿ. ಮುಂಬೈ ಸರಕಾರದವರು ಮತ್ತು ಬೇರೆಯವರು ಈ ಟ್ಯಾಕ್ಸನ್ನು ತಮ್ಮ ವಶಕ್ಕೆ ತೆಗೆದುಕೊಂಡು ಬಿಟ್ಟಿರು ಎಂದು ನೀವೂ ತೆಗೆದುಕೊಳ್ಳುವುದು ಸರಿಯಲ್ಲ. ಸರಕಾರಕ್ಕೇನೂ ಎಷ್ಟು ದುಡ್ಡಾದರೂ ಬೇಕು. ಅದಕ್ಕೋಸ್ಕರ ಮುನಿಸಿಪಾಲಿಟಿ ಕಡೆ, ಆದರಿಂದ ಏನಾದರೂ ಕಿತ್ತುಕೊಳ್ಳಬಹುದೆಂದು ಈ ರೀತಿ ಮಾಡುತ್ತೀರ. ಮುನಿಸಿಪಾಲಿಟಿಯ ಪರವಾಗಿ ಹೇಳುವವರು ಕೇಳುವವರು ಇಲ್ಲವೆಂದು ಅದಕ್ಕೆ ನ್ಯಾಯವಾಗಿ [illegible] ಆದಾಯವನ್ನು ಕಿತ್ತುಕೊಳ್ಳಬೇಡಿ. ಈ ಮಸೂದೆ ಪಾಸಾದ ಮೇಲೆ ಹೈದರಾಬಾದ್ ಕರ್ನಾಟಕದಲ್ಲಿ ಏನು ಪರಿಸ್ಥಿತಿ ಬರುತ್ತದೆನ್ನುವುದನ್ನು ಊಹಿಸಿಕೊಂಡು, [illegible] ಗವರ್ನಮೆಂಟ್ ಮಿನಿಸ್ಟರು [illegible] ಈ ಇನ್‌ಕಮ್ಮನ್ನು ಮುನಿಸಿಪಾಲಿಟಿಗೆ [illegible] ಒಪ್ಪಬೇಕು.

---

* [illegible]

ಸರಕಾರ ಮಾಡುವುದು ಯಾವುದು ನ್ಯಾಯ ಎಂದು ಹೇಳೋಣ? ಎಲೆಕ್ಟ್ರಿಸಿಟಿ ಬೋರ್ಡಿನವರು ಎಲೆಕ್ಟ್ರಿಸಿಟಿ ಚಾರ್ಜ್‌ಸ್ ತೆಗೆದುಕೊಳ್ಳುತ್ತಾರೆ. ಮಧ್ಯಾಹ್ನವೇ ಲೈಟ್ ಹಾಕಿ ದಾರಿ ದೀಪ ಅನ್ಯಾಯವಾಗಿ ಉರಿಸುತ್ತಿರುತ್ತಾರೆ. ಅದರ ಚಾರ್ಜ್‌ನ್ನು ಅನ್ಯಾಯವಾಗಿ ಮುನಿಸಿಪಾಲಿಟಿಯವರು ಕೊಡಬೇಕು. ವಿಧಾನಸೌಧದ ಸುತ್ತ ಹಗಲು ಹೊತ್ತು ಎಲೆಕ್ಟ್ರಿಕ್ ಲೈಟ್ ಉರಿಯುತ್ತಿರುತ್ತದೆ. ರಾತ್ರಿ ಹೊತ್ತು ಕತ್ತಲು ಇರುತ್ತದೆ. ಮುನಿಸಿಪಾಲಿಟಿಯವರು ಇದನ್ನು ಎಲೆಕ್ಟ್ರಿಸಿಟಿ ಬೋರ್ಡಿಗೆ ಹೇಳಿದರೆ ಕೇಳುವವರೇ ಇಲ್ಲ. ಇವತ್ತು ಬೆಳಗ್ಗೆ 11 ಗಂಟೆಗೆ ದೀಪ ಉರಿಯುತ್ತಿದ್ದುದನ್ನು ನಾನೂ ನನ್ನ ಮಿತ್ರರಾದ ಸರ್ವೇಶರವರು ನೋಡಿದೆವು. ನೀವು ಮುನಿಸಿಪಾಲಿಟಿಗೆ ಸಲ್ಲಿಸಬೇಕಾದ ಟ್ಯಾಕ್ಸ್‌ನ್ನು ತೆಗೆದುಕೊಂಡಾಗ ಸರಕಾರದವರೇಕೆ ಮುನಿಸಿಪಾಲಿಟಿಗೆ ಟ್ಯಾಕ್ಸ್ ಕೊಡಬಾರದು? ಗುಲಬರ್ಗಾದಲ್ಲಿ ಗಂಜ್ ಏರಿಯದಿಂದ ಲೋನ್ ತೆಗೆದುಕೊಂಡು ಮುನಿಸಿಪಾಲಿಟಿಯವರು ರೋಡ್ ಕನ್‌ಸ್ಟ್ರಕ್ಷನ್ ಮಾಡಿದರು. ಅದಕ್ಕೆ ಪಿ.ಡಬ್ಲ್ಯೂ.ಡಿ. ಯವರು 17ವರೆ ಪರ್ಸೆಂಟ್‌ನಂತೆ ಸುಮಾರು 1 ಲಕ್ಷದ ವರೆಗೆ ಚಾರ್ಜು ಮಾಡಿದ್ದಾರೆ. ಇದು ಯಾವ ನ್ಯಾಯ? ಸರಕಾರದವರು ಮುನಿಸಿಪಾಲಿಟಿಯಿಂದ ಯಾವುದನ್ನೂ ಬಿಡುವುದಿಲ್ಲ. ಮುನಿಸಿಪಾಲಿಟಿಯವರು ಏಕೆ ಸರಕಾರಕ್ಕೆ ಕನ್‌ಸೆಶನ್ ತೋರಿಸಬೇಕು? ಗವರ್ನಮೆಂಟ್ ಬಿಲ್ಡಿಂಗುಗಳ ಮೇಲೆ ಮುನಿಸಿಪಾಲಿಟಿಗಳು ಟ್ಯಾಕ್ಸ್ ಏಕೆ ಹಾಕಬಾರದು?

ಮಾನ್ಯ ಮಂತ್ರಿಗಳು ನಾನು ತಂದಿರುವ ತಿದ್ದುಪಡಿಗಳನ್ನು ಒಪ್ಪಿಕೊಂಡು ಎಂಟರ್‌ಟೇನ್‌ಮೆಂಟ್ ಟ್ಯಾಕ್ಸ್‌ನ್ನು ಅದರಲ್ಲಿಯೇ ಇಟ್ಟು, ಗವರ್ನಮೆಂಟು ಬಿಲ್ಡಿಂಗು ಬಗ್ಗೆ ಟ್ಯಾಕ್ಸ್ ಇಟ್ಟರೆ ಸೂಸೂತ್ರವಾಗಿ ಮುನಿಸಿಪಾಲಿಟಿಗಳು ನಡೆಯುತ್ತವೆ. ಆದ್ದರಿಂದ ಈ ತಿದ್ದುಪಡಿಯನ್ನು ಸ್ವೀಕರಿಸಬೇಕು.

## (14) ನೇಮಕಾತಿ ಸ್ವಜನ ಪಕ್ಷಪಾತ ಮತ್ತು ಭ್ರಷ್ಟಾಚಾರದ ಬಗ್ಗೆ *

ಶ್ರೀ ಮಾನ್ ಬಿ.ನಂಜಪ್ಪನವರು ಮಂಡಿಸಿರತಕ್ಕ ಈ ಠರಾವನ್ನು ಅನುಮೋದಿಸುತ್ತಾ ಕೆಲವು ಮಾತುಗಳನ್ನು ಹೇಳಲು ಇಚ್ಛಿಸುತ್ತೇನೆ. ಇದುವರೆಗೂ ಶ್ರೀಮಾನ್ ಕಡಿದಾಳ್ ಮಂಜಪ್ಪನವರು ಮತ್ತು ಶ್ರೀಮಾನ್ ದೊಡ್ಡ ಮೇಟಿಯವರು ಬಹಳ ಒಳ್ಳೊಳ್ಳೆಯ ಮಾತುಗಳನ್ನು ಹೇಳಿದ್ದಾರೆ. ಸರ್ಕಾರದವರು ಸ್ವಲ್ಪವಾದರೂ ಅದರ ಕಡೆಗೆ ಗಮನಕೊಟ್ಟು ಅವನ್ನು ಅಮಲು ಮಾಡಿದರೆ ನಾವು ಒಂದು ಒಳ್ಳೆಯ ರಾಜ್ಯವನ್ನು ಕಟ್ಟಬಹುದು ಎಂದು ನನಗೆ ಅನಿಸುತ್ತದೆ. ಇದುವರೆಗೂ ಹೇಳಿರತಕ್ಕ ಮಾತುಗಳಲ್ಲಿ ಸರ್ಕಾರದವರ ಫೇವರಿಟಿಸಂ, ನೆಪೋಟಿಸು, ಕರಪ್ಷನ್ ಇವುಗಳಿಗೆಲ್ಲಾ ಕಾರಣ ಅವರಲ್ಲೇ ಇದು ಹೆಚ್ಚಾಗಿದೆ ಎಂದು ಹೇಳಬೇಕಾಗುತ್ತದೆ. ಮಾನ್ಯ ಸದಸ್ಯರಾದ ಶ್ರೀಮಾನ್ ದೊಡ್ಡ ಮೇಟಿಯವರು ಮತ್ತು ಮಂಜಪ್ಪನವರು ಇದು ಎರಡು ಭಾಗಕ್ಕೂ ಅನ್ವಯಿಸುತ್ತದೆ ಎಂದು ಹೇಳಿದರು. ನಾನು ಹೇಳುತ್ತೇನೆ ಇದು ಎಲ್ಲಕ್ಕಿಂತ ಹೆಚ್ಚಾಗಿ ಆಡಳಿತ ಪಕ್ಷದ ಭಾಗಕ್ಕೇ ಅನ್ವಯಿಸುತ್ತದೆ ಎಂದು, ಈ ಭಾಗದ ಸದಸ್ಯರು ಸರ್ಕಾರದವರಲ್ಲಿ ಬಂದು ಒಬ್ಬನಿಗೆ ನೌಕರಿ ಕೊಡಿರಿ ಎಂದು ಕೇಳಬಹುದು, ಒಬ್ಬನಿಗೆ ಪ್ರೊಮೋಷನ್ ಮಾಡಿರಿ ಎಂದು ಹೇಳಬಹುದು; ಇನ್ನೊಬ್ಬನಿಗೆ ವರ್ಗ ಮಾಡಿರಿ ಎಂದು ಹೇಳಬಹುದು, ಅದನ್ನು ಮಾಡುವುದು ಅಥವಾ ಮಾಡದೇ ಇರುವುದು ನಿಮ್ಮ ಕೈಯಲ್ಲಿ ಬಿಟ್ಟದ್ದು, ನೀವು ಮಾಡುವುದಿಲ್ಲ ಎಂದರೆ ಈ ಕಡೆಯವರು ಏನೂ ಮಾಡುವುದಕ್ಕೆ ಬರುವುದಿಲ್ಲ ಸುಮ್ಮನೆ ತಿರುಗಿ ವಾಪಸು ಬರುತ್ತಾರೆ. ಅದೇ ಆ ಕಡೆಯವರಿಗೆ ಮಾಡುವುದಿಲ್ಲ ಎಂದರೆ ನಿಮ್ಮ ಕುರ್ಚಿಯೇ ಅಲ್ಲಿ ಇಲ್ಲದಂತೆ ಮಾಡುತ್ತಾರೆ. ಆ ರೀತಿ ಮಾಡುವುದನ್ನು ಬಿಡಬೇಕೆಂದು ಈ ಸಂದರ್ಭದಲ್ಲಿ ಅವರಿಗೆ ಹೇಳಲಿಚ್ಛಿಸುತ್ತೇನೆ. ಇದಕ್ಕಿಂತ ಹೆಚ್ಚಾಗಿ ನಾನು ಹೋಂ ಮಿನಿಸ್ಟರ್ ಗುಲ್ಜಾರಿಲಾಲ್ ನಂದಾ ಅವರಿಗೆ ಒಂದು ಪತ್ರವನ್ನು ಬರೆಯಬೇಕೆಂದು ಮಾಡಿದ್ದೇನೆ, ಅದರಪ ಡ್ರಾಫ್ಟ್ ಮಾಡಿದ್ದೇನೆ.

ಶ್ರೀ ಬಿ.ಡಿ. ಜತ್ತಿ: ಅದನ್ನು ಸ್ವಲ್ಪ ಓದಿ ನಮಗೂ ಎನ್‌ಲೈಟನ್ ಮಾಡಿ.

ಶ್ರೀ ಗಂಗಾಧರ ನಮೋಶಿ: ಅದನ್ನು ನಾನು ಈ ದಿವಸ ಇಲ್ಲಿಗೆ ತಂದಿಲ್ಲ, ತಂದಿದ್ದರೆ ಓದಿ ತೋರಿಸುತ್ತಾ ಇದ್ದೆ ನಿಮಗೆ ಬೇಕಾದರೆ ಅದರ ಒಂದು ಕಾಪಿ ಕೊಡುತ್ತೇನೆ.

ಬೊಂಬಾಯಿನಲ್ಲಿ ಪೊಲೀಸ್ ನವರು ಟೇಪ್‌ರೆಕಾರ್ಡ್ ಹಚ್ಚಿದ್ದಾರಂತೆ. ಹಾಗೆ ಇಲ್ಲೂ ಕೂಡ ಮಿನಿಸ್ಟರುಗಳ ಫೋನಿಗೂ ಮತ್ತು ಕಾಂಗ್ರೆಸ್ಸ್ ಮೆಂಬರುಗಳು ಇಳಿದು ಕೊಂಡಿರುವ ಲೆಜಿಸ್ಲೇಟರ್ಸ್ ಹೋಮಿಲ್ಲಿರುವ ಅವರುಗಳ ಫೋನಿಗೂ ಟೇಪ್‌ರೆಕಾರ್ಡ್ ಹಚ್ಚಿದ್ದೇ ಆದರೆ ಅವರು ಯಾವ ಯಾವ ವ್ಯವಹಾರಗಳನ್ನು ಮಾಡುತ್ತಾ ಇದ್ದಾರೆ ಅದು ತನ್ನಷ್ಟಕ್ಕೆ ತಾನೇ ನಿಲ್ಲುತ್ತದೆ. ಫೋನನಲ್ಲಿ ಅವರು ಮಾತನಾಡುವುದನ್ನು ಸ್ವಲ್ಪ ಕೇಳಬೇಕು;

* ವಿಧಾನಸಭೆಯ ನಡವಳಿಕೆಯ ದಿನಾಂಕ 14ನೇ ಡಿಸೆಂಬರ್, 1963

ಏನಾಯಿತು ಸ್ವಾಮಿ? ಅವರು ಎಲ್ಲಿಗೆ ಹೋದರು? ಮಿನಿಸ್ಟರಿಗೆ ಹೇಳಿದ್ದೇನೆ, ಟ್ರಾನ್ಸ್‌ಫರ್ ಆಗುತ್ತದೆ ಇದು ಆಯಿತು ಅಂತ ಹೇಳಿ ಅವರು ಏನು ಮಾಡುತ್ತಾರೆ ಅದೆಲ್ಲವೂ ಕೂಡ ಟೇಪ್ ರೆಕಾರ್ಡ್ ಹಚ್ಚಿದ್ದೇ ಆದರೆ ಗೊತ್ತಾಗಿ ಹೋಗುತ್ತದೆ. ಆದ್ದರಿಂದ ಕರಪ್ಷನ್ ಬಹಳವಾಗಿ ನಿಂತು ಹೋಗುತ್ತದೆ ಎಂದು ಹೇಳುತ್ತೇನೆ. ಇವತ್ತಿನ ದಿವಸ ಹೇಳಬೇಕಾದರೆ ನಮ್ಮ ಮಿತ್ರರು ಎಷ್ಟು ಇದ್ದಾರೆ ಅವರ ಹೆಸರನ್ನು ಹೇಳುವುದಿಲ್ಲ. ಹೇಳುವುದಕ್ಕೆ ಇಲ್ಲಿ ಪರವಾನಿಗೆ ಇಲ್ಲ - ಪ್ರೋಮೋಷನ್, ಟ್ರಾನ್ಸ್‌ಫರ್ ಇದಕ್ಕಾಗಿ ಅವರಲ್ಲಿಗೆ ಬರುವ ಜನ ಎಷ್ಟಿರುತ್ತಾರೆ, ಎಂದರೆ ಲೆಜಿಸ್ಲೇಟರ್ಸ್, ಹೋಂನಲ್ಲಿ ಮೆಂಬರುಗಳಿಗೆ ಸರಿಯಾದ ವ್ಯಾಳ್ಯಾಕೆ ಊಟ ಸಿಗುವುದಿಲ್ಲ. ಅದರ ಹಿಂದೆ 10-20ಜನ ಇರುತ್ತಾರೆ, ಅವರಿಗೆ ಊಟ ಹಾಕುವ ಸಲುವಾಗಿ ನಾವು ಹೋದರೆ ಜಾಗ ಇಲ್ಲ ಎನ್ನುತ್ತಾರೆ. ಇಂಥ ಪರಿಸ್ಥಿತಿ ಇವತ್ತಿನ ದಿವಸ ಲೆಜಿಸ್ಲೇಟಿವ್ ಹೋಂನಲ್ಲಿ ಬಂದಿದೆ.

ಇಷ್ಟೇ ಅಲ್ಲ ಈ ಸರಕಾರ ಉಳಿದುಕೊಳ್ಳುವ ಸಲುವಾಗಿ ಏನು ಮಾಡಿದ್ದೀರಿ ನೋಡಿ. ಯಾವ ಕಾರಣದಿಂದ ಆಂಧ್ರ ಚೀಫ್ ಮಿನಿಸ್ಟರರನ್ನು ವಲಿಸಿಕೊಳ್ಳುವ ಸಲುವಾಗಿಯೇ ಗುಲಬರ್ಗಾದಲ್ಲಿದ್ದ ಮೆಡಿಕಲ್ ಕಾಲೇಜು ಸೀಟಿನಲ್ಲಿ 12 ರಲ್ಲಿ 8 ನ್ನು ಆಂಧ್ರದವರಿಗೆ ಕೊಟ್ಟಿದ್ದೀರಿ? ನಾಗಪ್ಪಾ ಆಳ್ವಾ ಮತ್ತು ನಿಜಲಿಂಗಪ್ಪನವರನ್ನು ಕೇಳಿದರೆ ಹೈದರಾಬಾದ್ ಕರ್ನಾಟಕ ಹಿಂದುಳಿದ ಭಾಗ ಎಂದು ಹೇಳುತ್ತಿದ್ದರೂ ಕೂಡಾ ಆ ರೀತಿ ಮಾಡಿಗುವುದು ಫೆವರಿಟಿಜಂ, ನೆಪೋಟಿಜಂ ಅಲ್ಲವೆ? ಇದು ಸರಕಾರದ ಮೇಲೆ ಬಂದಿದೆ; ಅಧಿಕಾರಿಗಳ ಮೇಲೆ ಬಂದಿದೆ, ಪ್ರೆಸ್ ಅವರ ಮೇಲೆ ಬಂದಿದೆ. ಲಂಚ ರುಸುವತ್ತು ತೆಗೆದುಕೊಳ್ಳತಕ್ಕ ಜನರು ಅಧಿಕಾರಿಗಳಾಗಿರಲ್ಲಿ ಯಾರೇ ಆಗಿರಲಿ, ಸರಕಾರ ನಡೆಸತಕ್ಕ ಮಂತ್ರಿಗಳಲ್ಲಿ ಎಲ್ಲಿಯತನಕ ಪ್ರಮಾಣಿಕತನ ಬರುವುದಿಲ್ಲವೋ ಅಲ್ಲಿಯವರೆಗೂ ಕೂಡಾ ಅವರ ಕೈ ಕೆಲಸ ಮಾಡತಕ್ಕವರಿಗೆ ಕೂಡಾ ಆ ಪ್ರಮಾಣಿಕತೆ ಬರುವುದಿಲ್ಲ.

ಸಿ.ಜೆ. ಮುಕ್ಕಣ್ಣಪ್ಪ (ಸಿರಾ): ಮಂತ್ರಿಗಳು ಅಪ್ರಾಮಾಣಿಕರಾಗಿದ್ದಾರೆ ಎಂದು ಅವರು ಹೇಳುತ್ತಾ ಇದ್ದಾರೆ.

ಬಿ.ಡಿ. ಜತ್ತಿ: ಯಾರು ಯಾವ ದೃಷ್ಟಿಯಿಂದ ನೋಡುತ್ತಾರೆಯೋ ಹಾಗೆ ಕಾಣುತ್ತದೆ.

ಸಂಗಾಪ್ಪ ನವಲೀಹಿ: ಒಬ್ಬ ಮಿನಿಸ್ಟರು ಒಬ್ಬ ಸೆಕ್ರೆಟರಿಗೆ ಫೋನ್ ಮಾಡಿ ಕೇಳುತ್ತಾರೆ ಇಂಥವರನ್ನು ಅಪಾಯಿಂಟ್ ಮಾಡಿ ಎಂದು ಆವರು ಅದು ಲೀಗಲ್ ಆಗಿ ಮಾಡುವುದಕ್ಕೆ ಬರುವುದಿಲ್ಲವೆಂದರೆ ಅದೆಲ್ಲಾ ಬರುವುದಿಲ್ಲ ಮಾಡಿಂಯೇ ಮಾಡಬೇಕು ಎಂದು ಹೇಳುತ್ತಾರೆ, ಅವರು ಬಂದು ಮಾಡಿದರು ಅವರ ಕೈಕೆಳಗಿನ ಅಧಿಕಾರಿಗಳು ಅಂಥ ...ತ್ತೊಂದೆರಡು ಮಾಡುತ್ತಾರೆ. ಇದಕ್ಕೆಲ್ಲಾ ಜವಾಬ್ದಾರರು ನೀವು, ಸರ್ಕಾರದವರು ಎಂದು ಹೇಳಬೇಕಾಗುತ್ತದೆ. ಈ ದಿವಸ ಇಲ್ಲಿ ನಾವುಗಳು ನಾಲ್ಕು ಜನ ಮಂತ್ರಿಗಳಿದ್ದೇವೆ. ತಾವು

ನಾವು ಹೇಳಿದ್ದನ್ನು ಕೇಳಬೇಡಿ, ನಿಮ್ಮವರು ಎಂದು ಅವರು ಹೇಳಿದ್ದನ್ನು ಕೇಳಬೇಡಿ; ಇಂಥವರಿಗೆ ಒಂದು ಅನ್ಯಾಯವಾಗಿದೆ ಎಂಬ ದೂರು ನಿಮ್ಮ ಕಡೆಗೆ ಬಂದಾಗ ನೀವೇ ಅದನ್ನೆಲ್ಲಾ ಪರಿಶೀಲನೆ ಮಾಡಿ. ತಪ್ಪಿದರೆ ಅವರಿಗೆ ನ್ಯಾಯ ದೊರಕಿಸಿಕೊಡಿ, ಇಲ್ಲವಾದರೆ ಅದು ಇರತಕ್ಕದ್ದೇ ಸರಿ. ಅದೇ ನ್ಯಾಯವಾದದ್ದು ಎನ್ನುವುದಾದರೆ ಅದನ್ನು ತಾವು ಯಾವ ಎಂ.ಎಲ್.ಎ. ಆಗಲೀ ದಾಕ್ಷಿಣ್ಯವಿಲ್ಲದಂತೆ ತಿಳಿಸಿಬಿಡಿ. ಆದರೆ ನಮ್ಮ ಕಡೆ ಜನ ಬಂದು ಹೇಳಿದರೆ ತಾವು ಹೀಗೆ ಮಾಡಬಹುದೇ ವಿನಾ ನಿಮ್ಮ ಕಡೆ ಜನಕ್ಕೆ ನೀವು ಹಾಗೆ ಮಾಡಲು ಸಾಧ್ಯವೇ ಇಲ್ಲ. ಏಕೆಂದರೆ ತಾವು ಹಾಗೆ ಮಾಡಿದರೆ ನಿಮ್ಮ ಸ್ಥಾನಗಳು ಭದ್ರವಾಗಿರಲಾರವು. ಹೀಗೆಲ್ಲಾ ಇರುವುದರಿಂದ ನಿಮ್ಮ ಕಡೆ ಜನ ಬಂದು ಏನು ಹೇಳಿದರೆ ಅದನ್ನು ಕೂಡಲೇ ಮಾಡಿ ಬಿಡುತ್ತೀರಿ. ಹೀಗಾಗಿ ಅನೇಕ ಅಧಿಕಾರಿಗಳಿಗೆ ವರ್ಗ ಆಗತಕ್ಕ ಕಡೆ ಸಸ್ಪೆಂಡು, ಸಸ್ಪೆಂಡ್ ಆಗತಕ್ಕ ಕಡೆ ವರ್ಗ ಹೀಗೆಲ್ಲಾ ಆಗುತ್ತಿವೆ. ಇದಕ್ಕೆ ಒಂದು ಉದಾರಣೆಯನ್ನು ಕೊಡುವುದಾದರೆ ನಮ್ಮ ಗುಲಬರ್ಗಾ ಜಿಲ್ಲೆಯಲ್ಲಿ ಕೆಲಸ ಮಾಡತಕ್ಕ ಒಬ್ಬ ಅಧಿಕಾರಿಗೆ ಆಡಳಿತದಲ್ಲಿ ದಕ್ಷನಿದ್ದಾನೆಂದು ಆಲ್ ಇಂಡಿಯಾ ಮೆಡೆಲ್ ಬಂದಿದೆ. ಅಂಥ ಒಬ್ಬ ವ್ಯಕ್ತಿಯನ್ನು ಯಾರದೋ ಒಂದು ಕಂಪ್ಲೇಂಟಿನ ಮೇಲೆ ಯಾವ ಒಂದು ವಿಚಾರಣೆಯನ್ನೂ ನಡೆಸದೆ ಇಮ್ಮೀಡಿಯಟ್ಟಾಗಿ ಅಲ್ಲಿಂದ ವರ್ಗಾಯಿಸಿದರು. ಆದರೆ ಏನು ವಿಚಾರ ಎಂಬುದನ್ನೇ ತಿಳಿಯದೆ ಅಲ್ಲಿನ ಅಧಿಕಾರಿಗಳು ಆತನು ಅಲ್ಲಿಂದ ವರ್ಗವಾಗಿದ್ದರೂ ಅದು ಗೊತ್ತಿಲ್ಲದೆ, ಆತನಿಗೆ ಸಸ್ಪೆಂಡ್ ಆರ್ಡ್‌ರ್‌ರನ್ನು ಕಳಿಸಿದ್ದರು. ಆನಂತರ ಆತನಿಗೆ ಅಲ್ಲಿಂದ ವರ್ಗವಾಗಿದೆಂಬುದನ್ನು ತಿಳಿದು ಆ ಸಸ್ಪೆಂಡ್ ಆರ್ಡ್‌ರನ್ನು ವಜಾ ಮಾಡಿದರು. ಹೀಗಾಗಿ ಈ ದಿವಸ ಪ್ರಮಾಣಿಕತೆ ಇಂದ ದಕ್ಷತೆಯಿಂದ ಕೆಲಸ ಮಾಡತಕ್ಕ ಆಫೀಸರುಗಳಿಗೆ ಒಂದು ಸುರಕ್ಷತೆ ಇಲ್ಲದಂತಾಗಿದೆ. ಹೀಗಾದ ಮೇಲೆ ಯಾವ ಅಧಿಕಾರಿ ತಾನೆ ಈ ಸರಕಾರದಲ್ಲಿ ವಿಶ್ವಾಸ ವಿಟ್ಟು ಕೆಲಸ ಮಾಡಲು ಸಾಧ್ಯವಿದೆ? ನಮ್ಮ ಗುಲಬರ್ಗಾ ಜಿಲ್ಲೆಯಲ್ಲಿ ಇಂಥ ಒಂದು ಗುಲ್ಲೆದ್ದು ಒಬ್ಬರ ಹಿಂದೆ ಒಬ್ಬರಂತೆ ನಾಲ್ಕು ಜನ ಡಿ.ಸಿ.ಗಳು ವರ್ಗ ವಾಗಿರುತ್ತಾರೆ. ಈಗ ಅಲ್ಲಿಗೆ ಯಾರನ್ನೇ ಪೋಸ್ಟ್ ಮಾಡಲಿ ಎಲ್ಲರೂ ಅಲ್ಲಿಗೆ ಬರಲು ಹೆದರುತ್ತಾರೆ. ಅಲ್ಲಿ ಎಷ್ಟೋ ಸಾರಿ ಅಲ್ಲಿನ ಡಿ.ಸಿ.ಗಳು ಈ ಕಾಂಗ್ರೆಸ್ ಎಂ.ಎಲ್.ಎ. ಗಳ ಹಿಂದೆ ಇವರನ್ನು ಗಾಡಿ ಹತ್ತುವ ತನಕ ಸಾಗು ಹಾಕಿ ಅವರ ವರ್ಗವನ್ನು ಕ್ಯಾನ್ಸಲ್ ಮಾಡಿಸುವಂತೆ ಹೇಳಿರತಕ್ಕ ನಿದರ್ಶನಗಳನ್ನು ನಾನು ನೋಡಿದ್ದೇನೆ. ಆದರೆ ಶ್ರೀ ಕಡಿದಾಳ ಮಂಜಪ್ಪನವರು ಮತ್ತು ಶ್ರೀ ದೊಡ್ಡಮೇಟಿಯವರು ಈ ದೋಷಗಳು ಎಲ್ಲಾ ಪಾರ್ಟಿಗಳಲ್ಲಿ ಇವೆ ಎಂದು ಹೇಳುತ್ತಾರೆ. ಆದರೆ ಅವರು ಹೇಳತಕ್ಕ ಮಾತು ಇತ್ತ ನಮ್ಮ ಕಡೆ ಇರತಕ್ಕ ಪಾರ್ಟಿಗಳಿಗೆ ಅನ್ವಯಿಸುವುದಿಲ್ಲ. ಆದರೆ ಅವರು ಹೇಳತಕ್ಕ ಮಾತು ಅತ್ತ ಕಡೆ ಇರುವ ಪಾರ್ಟಿಗೆ ಅನ್ವಯಿಸುವ ಮಾತಾಗಿದೆ. ಆಡಳಿತ ಪಕ್ಷ ನಮ್ಮ ಮಾತನ್ನು ಕೇಳದಿದ್ದರೆ, ಅವರಿಗೇನೂ ಅಂಥ ಗಾಬರಿಯಾಗುವುದಿಲ್ಲ. ಆದರೆ ಅತ್ತ ಕಡೆ ಇರತಕ್ಕ ಪಾರ್ಟಿಯ ಮಾತನ್ನು ಕೇಳದಿದ್ದರೆ, ಅವರ ಕುರ್ಚಿಗಳು

ಭದ್ರವಾಗಿರುವುದಿಲ್ಲ. ಆದ್ದರಿಂದ ಈ ಕರಪ್ಷನ್‌ಗಳಿಗೆಲ್ಲಾ ಅವರ ಪಾರ್ಟಿಯೇ ಕಾರಣ. ಶ್ರೀ ಗುಲ್ಜಾರಿಲಾಲ್ ನಂದಾ ಅವರು ದೇಶದಲ್ಲಿರತಕ್ಕ ಕರಪ್ಷನ್ ಎರಡು ವರ್ಷದೊಳಗೆ ತೆಗೆಯದಿದ್ದರೆ ನಾನು ಮನೆಗೆ ಹೋಗುತ್ತೇನೆ ಎಂದು ಹೇಳಿದ್ದಾರೆ. ಆದರೆ ಅವರು ಅಂಥ ದಕ್ಷರೇ ಇರಬಹುದು. ಆದಾಗ್ಯೂ ಒಬ್ಬರಿಂದ ಇದು ಎಂದಿಗೂ ಸಾಧ್ಯವಾಗತಕ್ಕ ಕೆಲಸವಲ್ಲ. ಇದನ್ನು ತಡೆಗಟ್ಟಲು ಇಡೀ ದೇಶದಲ್ಲಿರತಕ್ಕ ಪ್ರತಿಯೊಬ್ಬ ನಾಗರಿಕನು ಪ್ರಯತ್ನ ಮಾಡಿದರೆ ಮಾತ್ರ ಸಾಧ್ಯವಾದೀತು ವಿನಾ ಇಲ್ಲದಿದ್ದರೆ ಖಂಡಿತ ಎಂದಿಗೂ ಸಾಧ್ಯವಿಲ್ಲ. ಇದನ್ನು ನಾನು ಒತ್ತಿ ಹೇಳುತ್ತೇನೆ. ಆದರೆ ನಮ್ಮ ಕಾಂಗ್ರೆಸ್ ಮಿತ್ರರು ಅಧಿಕಾರಿಗಳ ಮೇಲೆ ದಬ್ಬಾಳಿಕೆ ನಡೆಸಬಾರದು ಎಂದು ಹೇಳುತ್ತೇನೆ.

ಇನ್ನು ಈ ನಾಮಿನೇಷನ್‌ಗಳ ವಿಚಾರಕ್ಕೆ ಬಂದರೆ ಈ ವಿಚಾರ ಇದು ಇಷ್ಟೇ ಎಂದು ಹೇಳಲು ಸಾಧ್ಯವಿಲ್ಲ. ಸಾರ್ವಜನಿಕ ಚುನಾವಣೆಗಳಲ್ಲಿ ಸೋತಂಥಾ ವ್ಯಕ್ತಿಗಳೊಬ್ಬರನ್ನು ಪಿ.ಎಸ್.ಸಿ.ಗೆ ಮೆಂಬರನ್ನಾಗಿ ಮಾಡಿದ್ದಾರೆ. ಆ ಸದಸ್ಯರು ಯಾರೆಂದರೆ ಶ್ರೀಮಾನ್ ಕೊಠಾವಳೆ ಅವರು ಎಂದು ಜನ ಹೇಳುತ್ತಾರೆ.

ಶ್ರೀಮಾನ್ ದೊಡ್ಡಮೇಟಿಯವರು ಮಾತನಾಡುತ್ತಿದ್ದಾಗ ಹೆಸರು ಹೇಳಬಹುದು ಎಂದು ಇಲ್ಲೇ ಮಾನ್ಯ ಮಂತ್ರಿಗಳು ಹೇಳಿದ್ದರು. ಆಗ ಕರಪ್ಷನ್ ವಿಚಾರದಲ್ಲಿ ಅವರು ಹೇಳಿದರು. ಆದರೆ ಈಗ ಹೆಸರು ಹೇಳಬೇಡಿ ಎಂದರೆ ಇದರಲ್ಲಿ ಸರಕಾರದ ಉದ್ದೇಶವೇನು ಎನ್ನುವುದು ಗೊತ್ತಾಗುತ್ತಿಲ್ಲ. ಕಾಂಗ್ರೆಸ್ ಕಮಿಟಿಗಳಲ್ಲಿ ಒಳಗುಂಪುಗಳು ಇರತ್ತವೆ ಒಂದೊಂದು ಜಿಲ್ಲೆಯಲ್ಲೂ ಎರಡು ಗುಂಪುಗಳಿವೆ. ಒಂದೊಂದು ಗುಂಪಿನವರು ಒಂದೊಂದು ಪಟ್ಟಿ ಮಾಡಿ ಸರಕಾರಕ್ಕೆ ಕಳುಹಿಸಿ ಅಂತಹವರನ್ನು ನಾಮಿನೇಟು ಮಾಡಬೇಕೆನ್ನುತ್ತಾರೆ. ಆದರೆ ಪ್ರಭಾವ ಇರುವ ಗುಂಪಿನವರು ಸರಕಾರಕ್ಕೆ ಟೆಲಿಫೋನುಗಳ ಮೂಲಕ ಇಂತಹರುಗಳನ್ನು ನಾಮಿನೇಟು ಮಾಡಬೇಡಿ ಎಲೆಕ್ಷನ್ನು ಮೂಲಕ ಬರಲಿಕ್ಕೇಬೇಕು ಎಂದು ಒತ್ತಾಯ ಮಾಡುವಂತಹ ಕಾಂಗ್ರೆಸ್ಸಿನವರು ಕೂಡ ಇದ್ದಾರೆ. ಯೋಗ್ಯತೆ ಇರುವಂತಹವರನ್ನು ನಾಮಿನೇಟು ಮಾಡಿದರೆ ಆ ಆರ್ಡರನ್ನು ಕ್ಯಾನ್ಸಲು ಮಾಡುತ್ತಾರೆ. ನಮ್ಮ ಭಾಗದಲ್ಲಿ ಹೇಳಬೇಕಾದರೆ ಎಂ.ಎಸ್.ಆರ್.ಟಿ.ಡಿ. ಇಲಾಖೆಯ ಕಮಿಟಿಯಲ್ಲಿ ಹೆಸರನ್ನು ಸೈನು ಮಾಡುವುದಕ್ಕೆ ಬಾರದೆ ಇರುವಂತಹ ಮನುಷ್ಯರನ್ನು ನಾಮಿನೇಟು ಮಾಡಿದ್ದಾರೆ. ಹಾಗೆಯೇ ಕೋಆಪರೇಷನ್ನು ಇಲಾಖೆಯ ವಿಚಾರವಾಗಿಯೂ ನಾನೇನು ಹೇಳುವಂತೆಯೇ ಇಲ್ಲ. ಸ್ವಲ್ಪ ತಿಳಿವಳಿಕೆ ಇರುವಂತಹವರನ್ನು ಇಂತಹ ಕಮಿಟಿಗಳಲ್ಲಿ ನೇಮಕ ಮಾಡಿದರೆ ಕೆಲಸ ಚೆನ್ನಾಗಿ ಆಗುತ್ತದೆ. ಹೀಗೇ ನೂರಾರು ಕಮಿಟಿಗಳಾಗಿವೆ. ಮೈಸೂರಿನ ಎಲೆಕ್ಟ್ರಿಸಿಟಿ ಬೋರ್ಡಿನಲ್ಲಿ ಮೆಂಬರಾಗಿರುವವರು ಯಾರೋ ಬಂಗಾರದಲ್ಲಿ ಎಷ್ಟೋ ವ್ಯವಹಾರ ಮಾಡುವವರೂ ಇದ್ದಾರೆ ಎಂದು ಎಷ್ಟೋ ಸಲ ಇಲ್ಲೇ ತಿಳಿದು ಬಂದಿದೆ. ಅಷ್ಟೇ ಅಲ್ಲ. ಮೈಸೂರು ದೇಶದ ಸರಕಾರಿ ಬ್ಯಾಂಕಿನಲ್ಲಿ ಬಿಟ್ಟು ಖಾಸಗಿ ಬ್ಯಾಂಕಿನಲ್ಲಿ ವ್ಯವಹಾರ ನಡೆಸುತ್ತಿದ್ದಾರೆ.

ಇಂತಹ ಅಕ್ರಮಗಳನ್ನೆಲ್ಲಾ ಪರಿಶೀಲಿಸಲು ಸರಿಯಾದ ಒಂದು ಕಮಿಟಿಯನ್ನು ಸ್ಥಾಪನೆ ಮಾಡಬೇಕೆಂದು ಬಂದಿರುವ ಈ ನಿರ್ಣಯವು ಸೂಕ್ತವಾಗಿದೆ. ಹೀಗೆ ಇಂತಹ ಅಕ್ರಮಗಳನ್ನು ಬೆಳೆಯುವಂತೆ ಮಾಡುವುದು ತಪ್ಪು. ಹಿಂದೆ ಮಿತವ್ಯಯ ಸಾಧನೆಗಾಗಿ ಶ್ರೀಮಾನ್ ಎ.ಜಿ.ರಾಮಚಂದ್ರರಾಯರ ಅಧ್ಯಕ್ಷತೆಯಲ್ಲಿ ಒಂದು ಕಮಿಟಿಯನ್ನು ಮಾಡಿದ್ದರು. ಅವರು ಒಂದು ರಿಪೋರ್ಟನ್ನು ಕೂಡ ಕೊಟ್ಟಿದ್ದರು. ಅದರಲ್ಲಿ ಒಂದೊಂದು ಫೈಲು ಹೇಗೆ ಆರು ತಿಂಗಳ ಕಾಲ ವರ್ಷಗಟ್ಟಲೆ ಕೊಳೆಯುತ್ತಿತ್ತು ಎಂಬುದನ್ನು ಅದರ ಮೇಲೆ ಏನು ಕ್ರಮ ತೆಗೆದುಕೊಳ್ಳಬೇಕು ಎನ್ನುವ ವಿವರಗಳನ್ನು ಹಾಗೂ ಯಾವ ಯಾವ ಮಂತ್ರಿಗಳಲ್ಲಿ ಇಲಾಖೆಗಳಲ್ಲಿ ಕೆಲಸ ಹೇಗೆ ನಿಧಾನವಾಗುತ್ತಿತ್ತು ಎನ್ನುವುದನ್ನೂ ಹೇಳಿದೆ. ಅದರಂತೆ ಈಗಲೂ ಒಂದು ಕಮಿಟಿ ನೇಮಕ ಮಾಡಿ ಅವರಿಂದ ಬರತಕ್ಕ ರಿಪೋರ್ಟಿನ ಆಧಾರದ ಮೇಲೆ ಇಲಾಖಾಧಿಕಾರಿಗಳು ಆಗಾಗ್ಗೆ ಇನ್ಸ್‌ಪೆಕ್ಷನ್ನು ಮಾಡಿ ಸರಕಾರಕ್ಕೆ ವರದಿ ಕಳುಹಿಸುಂತೆ ಮಾನ್ಯ ಗೃಹ ಮಂತ್ರಿಗಳು ಏರ್ಪಾಡು ಮಾಡಿ ಅದನ್ನು ಕಾರ್ಯ ರೂಪಕ್ಕೆ ತರಬೇಕು. ಅದರ ಸಲುವಾಗಿ ಇಂತಹ ಒಂದು ಕಮಿಟಿಯನ್ನು ನೇಮಕ ಮಾಡುವುದು ಅವಶ್ಯಕ ಎಂದು ಹೇಳಿ ಅಧ್ಯಕ್ಷರು ಇಷ್ಟು ಮಾತನಾಡಲು ಅವಕಾಶಕೊಟ್ಟಿದ್ದಕ್ಕಾಗಿ ಅವರನ್ನು ವಂದಿಸಿ ನಾನು ನನ್ನ ಮಾತುಗಳನ್ನು ಮುಗಿಸುತ್ತೇನೆ.

(15) ಸರಕಾರದ ಯೋಜನೆ ಮತ್ತು ಕಾರ್ಯಕ್ರಮಗಳ ಬಗ್ಗೆ (ವಿದ್ಯುಚ್ಛಕ್ತಿ, ಸಮುದಾಯ ಅಭಿವೃದ್ಧಿ, ಗ್ರಾಹಕರ ಸೊಸಾಯಿಟಿ, ಸೀಜನಲ್ ಕಂಡಿಶನ್ಸ್ ನೀರಾವರಿ, ರೇಲ್ವೆಗಳು, ಮೈಸೂರು ರೋಡ್ ಟ್ರಾನ್ಸ್‌ಪೋರ್ಟ್ ಪ್ರೋಹಿಬಿಷನ್ ಇತ್ಯಾದಿ) *

**ಗಂಗಾಧರ ನಮೋಶಿ:** ತಾವು ಕಾಂಗ್ರೆಸ್ ಪಾರ್ಟಿಯಲ್ಲಿದ್ದರೂ ಸ್ಪಷ್ಟವಾಗಿ ಹೇಳಲಿಲ್ಲ, ಆದರೆ ಪರಪ್ರಾಂತನಲ್ಲಿ ಇತರ ಪಾರ್ಟಿಯವರು ದೇಶದ ಪರಿಸ್ಥಿತಿಗನುಸಾರವಾಗಿ ಹೆಚ್ಚಿನ ಪ್ರಚಾರ ಮಾಡಿ ಸೈನ್ಯಕ್ಕೆ ಹೆಚ್ಚು ಜನರನ್ನು ಸೇರಿಸುವಂತೆ ಎಷ್ಟು ಮಟ್ಟಿಗೆ ಪ್ರಯತ್ನ ಮಾಡಿದರೋ ಅಷ್ಟು ಮಟ್ಟಿಗೆ ನಿಮ್ಮ ಪಕ್ಷದವರು ಜನರನ್ನು ಸೈನ್ಯಕ್ಕೆ ಕಳುಹಿಸಲು ಪ್ರಯತ್ನ ಮಾಡಲಿಲ್ಲ. ಇದು ಬಹು ದುಃಖದ ವಿಷಯ ಎಂದು ನನಗನಿಸುತ್ತದೆ.

ಎರಡನೆಯದಾಗಿ ಪ್ಲಾನು ಪ್ರೋಗ್ರಾಂಗಳನ್ನು ನೋಡುವುದಾದರೆ, ಸುಮಾರು 110 ಕೋಟಿ ರೂಪಾಯಿಗಳಷ್ಟು ಮಾತ್ರ ಖರ್ಚು ಮಾಡಲಾಗಿದೆ ಎಂದು ಇದರಲ್ಲಿ ಹೇಳುತ್ತಾರೆ. ಇದರಲ್ಲಿ ಎಷ್ಟೋ ಅಗ್ರಿಕಲ್ಚರಲ್ ಅಂಡ್ ಪವರು ಸ್ಕೀಮ್ಸುಗಳನ್ನು ತೆಗೆದುಕೊಳ್ಳಬೇಕೆಂದು ಹೇಳಿದ್ದರೂ ಈಗಿರತಕ್ಕ ಆಹಾರ ಪದಾರ್ಥಗಳ ಬೆಲೆ ಎಷ್ಟು ಮಟ್ಟಿಗೆ ಏರುತ್ತಿದೆ ಎನ್ನುವುದು ನಿಮಗೆಲ್ಲ ತಿಳಿದಿರುವ ವಿಚಾರ. ಬೆಂಗಳೂರಿನಲ್ಲೇ ಪವರು ಬೇಕು ಎಂದು ಹೇಳುತ್ತಾರೆ ಮತ್ತು ಇದಕ್ಕಾಗಿ ಯೋಜನೆಗಳನ್ನು ಮಾಡುತ್ತಿದ್ದೇವೆಂದು ಹೇಳುತ್ತ ಈಗ್ಗೆ ಮೂರು ವರ್ಷಗಳಿಂದಲೂ ಕೇವಲ 110 ಕೋಟಿ ರೂಪಾಯಿಗಳಷ್ಟು ಹಣವನ್ನು ಮಾತ್ರ ಖರ್ಚು ಮಾಡುವುದಕ್ಕೆ ಸಾಧ್ಯವಾಯಿತು ಎಂದರೆ ನಿಮ್ಮ ಯೋಜನೆಗಳೆಲ್ಲ ನಿಷ್ಫಲವಾದುದು ಎಂದು ಸ್ಪಷ್ಟವಾಗಿ ಹೇಳಬೇಕಾಗಿದೆ. ಅಗ್ರಿಕಲ್‌ಚರಲ್ ಮಾತ್ರವಲ್ಲ, ಮತ್ತು ಇನ್ನಿತರ ಯೋಜನೆಗಳಲ್ಲಿ ಎಷ್ಟು ಪ್ರಗತಿ ಸಾಧಿಸಬೇಕೆಂದು ಮಾಡಿಕೊಂಡಿದ್ದರೋ ಆದರಂತೆ ಆಗಿಲ್ಲ ಎನ್ನುವ ಅಂಕಿ ಸಂಖ್ಯೆಗಳನ್ನು ಇದರಲ್ಲಿ ಸೂಚಿಸಬೇಕಾಗಿತ್ತು. ಇಷ್ಟೇ ಅಲ್ಲದೆ, ನಮ್ಮ ಬಡಜನಕ್ಕೆ ಬೇಕಾಗಿರುವ ತೊಗರೆ ಬೇಳೆಯ ಬೆಲೆಯನ್ನು ನೋಡುವುದಾದರೆ, ಅದು ಇಂದು ಒಂದು ಕಿಲೋವಿಗೆ ಒಂದು ರೂಪಾಯಿ, ಒಂದು ರೂಪಾಯಿ ಎರಡಾಣೆಯಂತೆ ಮಾರಾಟ ವಾಗುತ್ತಿದೆ. ಇದು ಬಡಜನಕ್ಕೆ ಆಧಾರವಾದ ಪದಾರ್ಥ. ಈಗ ತೊಗರೆ ಬೇಳೆಯ ಸುಗ್ಗಿಯ ಕಾಲ ಮತ್ತು ಹೊಸದಾಗಿ ತೊಗರೆ ಕಾಳು ಬರುವ ಈ ಕಾಲದಲ್ಲಿ ತೊಗರೆ ಬೇಳೆಯನ್ನು ಒಂದು ಕಿಲೋವಿಗೆ 1-30 ಎಂದು ಮಾರುತ್ತಿದ್ದರೆ ಜನ ಇದನ್ನು ಹೇಗೆ ಕೊಳ್ಳಬೇಕು? ಇದೇ ಸೀಸನ್ನಿನಲ್ಲಿ ಹೋದ ಶೇಕಡಾ ಐವತ್ತರಷ್ಟು ಬೆಲೆ ಹೆಚ್ಚಾಗಿತ್ತು. ಆಗ ಇದ್ದದಕ್ಕಿಂತಲೂ ಈಗಲೂ ಇದರ ಬಲೆ ಹೆಚ್ಚಾಗುತ್ತಿದ್ದರೆ ಆಗ್ರಿಕಲ್ಚರಿನಲ್ಲಿ ನೀವೇನು ಹೆಚ್ಚಿನ ಪ್ರಗತಿ ಸಾಧಿಸಿದಂತಾಯಿತು? ಈ ವಿಚಾರವನ್ನು ಸರಿಯಾಗಿ ಸರಕಾರ ಗಮನಕ್ಕೆ ತೆಗೆದುಕೊಂಡಿಲ್ಲ ಎಂದು ನನಗನಿಸುತ್ತದೆ.

ನಾವು ಇಷ್ಟೆಲ್ಲಾ ಹೇಳಿದರೂ ಈ ಬೆಂಗಳೂರಿನಲ್ಲಿ ಜನ ಯಾವಾಗ್ಲೂ ಈ ಪವರನ್ನು ಪಡೆಯುವುದರಲ್ಲೇ ಇರುತ್ತಾರೆ. ನಮ್ಮ ಬಿಜಾಪುರ, ಬೀದರಿನಂಥ ಜಿಲ್ಲೆಗಳಲ್ಲಿ - ಜಿಲ್ಲಾ

* ವಿಧಾನಸಭೆಯ ನಡವಳಿಕೆಯ ದಿನಾಂಕ 14ನೇ ಡಿಸೆಂಬರ್, 1963 (ರಾಜ್ಯಪಾಲರ ಭಾಷಣದ ಮೇಲಿನ ವಂದನಾ ನಿರ್ಣಯ)

ಹೆಡ್‌ಕ್ವಾರ್ಟರ್ಸಿನಲ್ಲೂ ಪವರಿಲ್ಲದೆ ಅಲ್ಲಿ ಪೆಟ್ರೋಮಾಕ್ಸ್ ಲೈಟುಗಳನ್ನು ಅಂಟಿಸಬೇಕಾದ ಪರಿಸ್ಥಿತಿಯು ಬಂದಿದೆ. ಇಲ್ಲಿಯ ತಸುಕ ರಾಜ್ಯದಲ್ಲಿ ಎಲ್ಲಿ ಎಲ್ಲಿ ಇಂಪ್ರೂವ್‌ಮೆಂಟಾಗಿದೆಯೋ ಅಲ್ಲಿಯೇ ಇದು ಆಗುತ್ತಿದೆಯೇ ವಿನಾ ಬೇರೆ ಭಾಗಗಳಲ್ಲೇನೂ ಆಗುತ್ತಿಲ್ಲ. ಹೀಗೆ ಈ ವಿದ್ಯುಚ್ಛಕ್ತಿ ಬಾಬಿಗೆ ಕಳೆದ 2 ವರ್ಷಗಳಲ್ಲಿ 110 ಕೋಟಿ ರೂಪಾಯಿಗಳನ್ನು ಖರ್ಚು ಮಾಡಿದ್ದಾಗ್ಯೂ ನಮ್ಮ ಭಾಗಕ್ಕೇನೂ ಪ್ರಯೋಜನವಾಗಿಲ್ಲ.

ಇನ್ನು ಕಮ್ಯುನಿಟಿ ಡೆವಲಮೆಂಟ್ ಬಾಬಿಗೆ ಬಂದರೆ, ಭಾಷಣದಲ್ಲಿ ಪಂಚಾಯತ್ ಆಗ್ರಿಕಲ್ಚರಲ್ ಪ್ರೊಡಕ್ಷನ್ ಪ್ಲಾನ್ ತಯಾರಾಗಿ, ಇದರ ಸಹಾಯದಿಂದ ವ್ಯವಸಾಯೋತ್ಪತ್ತಿಯನ್ನು ಹೆಚ್ಚಿಸಲು ಸರ್ವ ಪ್ರಯತ್ನವೂ ಪ್ರಾರಂಭವಾಗಿದೆಯೆಂದು ಹೇಳಿದ್ದಾರೆ. ಇದು ಒಂದು ಶುದ್ಧ ಫಾಲ್ಸ್ ರಿಪೋರ್ಟ್ ಎಂದು ನಾನು ತಿಳಿಸಬೇಕಾಗಿದೆ. ಇನ್ನೂ ಮೊನ್ನೆ ತಾನೇ ಒಂದು ಮೀಟಿಂಗ್ ನಡೆದಾಗ ಈ ಪ್ಲಾನ್ ಎಷ್ಟು ಕೆಲಸಗಳಾಗಿವೆ ಎಂದು ಒಂದು ಪ್ರಶ್ನೆ ಬಂದಿದ್ದಾಗ ಒಂದಾಣೆ ಭಾಗ ಕೂಡ ಕೆಲಸಗಳಾಗಿಲ್ಲವೆಂದು ತೀರ್ಮಾನವಾಗಿದೆ. ಮೀಟಿಂಗಿನ್ನಲಿದ್ದವರೆಲ್ಲರೂ ಇದನ್ನು ಒಪ್ಪಿದ್ದಾರೆ. ಹಾಗಿದ್ದರೂ ಇಲ್ಲಿ ಇದನ್ನು ಯಾವ ಆಧಾರದ ಮೇಲೆ ಹೀಗೆ ಹೇಳಿದ್ದಾರೋ ನನಗೆ ತಿಳಿಯದು.

ಇನ್ನು ಕನ್‌ಸ್ಯೂಮರ್ ಸೊಸೈಟಿಯ ವಿಚಾರಕ್ಕೆ ಬಂದರೆ:- 11 ಸ್ಟೋರುಗಳೂ, 158 ಚಿಲ್ಲರೆ ಸ್ಟೋರುಗಳೂ ರಚಿತವಾಗಿವೆಯೆಂದು ಹೇಳಿದ್ದಾರೆ. ಈ ಬಗ್ಗೆ ನಾನು ಹೇಳಬೇಕಾದ ವಿಚಾರವೇನೆಂದರೆ - ನಮ್ಮ ಗುಲಬರ್ಗಾ ಜಿಲ್ಲೆಯಲ್ಲಿ ಒಂದು ಒಟ್ಟು ಮಾರಾಟದ ಸ್ಟೋರ್ ಒಬ್ಬ ಡಿಸ್ಟ್ರಿಕ್ಟ್ ಕಾಂಗ್ರೆಸ್ ಚೇರ್ಮನ್ನಿನ ಆಧಿಪತ್ಯದಲ್ಲಿ ಸ್ಥಾಪಿತವಾಗಿದೆ. ಇದರಿಂದ ಸಾಮಾನುಗಳನ್ನು ಚಿಲ್ಲರೆ ಸೊಸೈಟಿಗಳಿಗೆ ಸರಬರಾಜು ಮಾಡುತ್ತಿಲ್ಲ. ಎಲ್ಲಾ ಬ್ಲಾಕ್ ಮಾರ್ಕೆಟ್ಟಾಗುತ್ತಿದೆ. ಯಾವ ಸೊಸೈಟಿಗಳಲ್ಲೂ ಲೆಕ್ಕಗಳನ್ನು ಸರಿಯಾಗಿ ಆಡಿಟ್ ಮಾಡಿರುವುದಿಲ್ಲ. ಎಲ್ಲೆಲ್ಲೂ ಕನ್‌ಸ್ಯೂಮರ್ ಸೊಸೈಟಿಗಳನ್ನು ಮಾಡಲಾಗಿದೆ ಎಂದು ಹೇಳಿದ್ದಾರೆ. ಆದರೆ ಈ ಅಂಗಡಿಗಳಲ್ಲಿ ಎಲ್ಲೂ 1 ರೂ.24 ನ. ಪೈ.ಗಳಿಗೆ ಸಕ್ಕರೆ ಸಿಕ್ಕುವುದಿಲ್ಲ. ಎರಡೂವರೆ ಅಥವಾ ಮೂರೂವರೆ ರೂಪಾಯಿಗಳನ್ನು ಕೊಟ್ಟರೆ ಸಕ್ಕರೆ ಎಲ್ಲಿಬೇಕಾದರೂ ಸಿಕ್ಕುತ್ತದೆ. ಇವು ಸರ್ಕಾರದವರು ಸ್ಥಾಪಿಸಿರತಕ್ಕ ಕನ್‌ಸ್ಯೂಮರ್ಸ್ ಕೋ-ಅಪರೇಟೀವ್‌ಗಳು. ಕಾಂಗ್ರೆಸ್ ಪಾರ್ಟಿಯನ್ನು ಬಿಟ್ಟರೆ ಬೇರೆ ಯವರಿಗೆ ಈ ಸೊಸೈಟಿಗಳನ್ನು ತೆರೆಯಲು ಲೈಸೆನ್ಸ್‌ಸೇ ಸಿಕ್ಕುವುದಿಲ್ಲ. ಯಾರಾದರೂ ಅರ್ಜಿ ಕೊಟ್ಟರೆ ಅದು ಮೇಲಕ್ಕೂ ಕೆಳಕ್ಕೂ ಓಡಾಡಿ ಎಲ್ಲೋ ಮೂಲೆಯಲ್ಲಿ ಬಿದ್ದು ಹೋಗುತ್ತದೆ ಅದೇ ಅರ್ಜಿಯನ್ನು ಮೊನ್ನೆ ಒಬ್ಬ ಕಾಂಗ್ರೆಸ್ ಮೆಂಬರು ನಮ್ಮ ಗುಲ್ಬರ್ಗಾ ಜಿಲ್ಲೆಯಲ್ಲಿ ಕೊಟ್ಟ 15 ದಿನಗಳಲ್ಲೇ ಲೈಸೆನ್ಸ್‌ನ್ನು ಪಡೆದರು. ಸಕ್ಕರೆ ಕಂಪೆನಿಗಳನ್ನು ತೆರೆಯತಕ್ಕ ವಿಚಾರದಲ್ಲೂ ಅಷ್ಟೇ. ಈ ಸಕ್ಕರೆ ಕಂಪೆನಿಗಳನ್ನು ಸ್ಥಾಪನೆ ಮಾಡತಕ್ಕ ವಿಚಾರದಲ್ಲಿ ಸರ್ಕಾರದವರು ಹಿಂದಿನಿಂದಲೂ ಇದೇ ಮಾತನ್ನು ಹೇಳುತ್ತಾ ಬಂದಿದ್ದಾರೆ. 1962 ರಿಂದಲೂ ಇದನ್ನೇ ಹೇಳುತ್ತಿದ್ದಾರೆ. ಹೀಗೆ ಇವರು ತರಿಸತಕ್ಕ ಪರವಾನಿಗೆ ಬರತಕ್ಕ ದಾರಿಯಲ್ಲಿ ಎಲ್ಲೋ ಲೈನು ತಪ್ಪಿ ಆಕ್ಸಿಡೆಂಟಾಗಿ ಉಳಿದು ಹೋಗಿದೆ.

ಅದು ಎಲ್ಲಿ ನಿಂತು ಹೋಗಿದೆ ಎಂಬುದು ಇನ್ನು ಯಾರಿಗೂಗೊತ್ತಾಗಲಿಲ್ಲ. ಇದೇ ಸಂದರ್ಭದಲ್ಲಿ ನಾನು ಮೊನ್ನೆ ಬೀದರಿಗೆ ಹೋಗಿದ್ದೆ, ಸರ್ಕಾರದವರು ಹೀಗೆ ಸುಮ್ಮನೆ ಅಷೂರೆನ್ಸ್‌ಗಳನ್ನು ಕೊಡುತ್ತಿದ್ದಾರೆ, ಇಲ್ಲಿಗೆ ಮೂರು ವರ್ಷಗಳಿಂದ ಸರ್ಕಾರದವರು ಅವರು ಕೊಟ್ಟ ಭರವಸೆಗಳೊಂದನ್ನೂ ಈಡೇರಿಸಿಲ್ಲ; ಆದ್ದರಿಂದ ಅವರ ಬಗ್ಗೆ ನಮಗೆ ಈಗ ಏನೇನೂ ವಿಶ್ವಾಸವುಳಿದಿಲ್ಲ ಎಂದು ಅಲ್ಲಿಯ ಜನ ಹೇಳುತ್ತಿದ್ದಾರೆ. ಸರ್ಕಾರ ಹೀಗೆ ಈ ಸಕ್ಕರೆ ಕಂಪನಿಗಳ ವಿಚಾರದಲ್ಲಿ ಹೇಗೆ ಸುಳ್ಳು ಭರವಸೆಗಳನ್ನು ಕೊಡುತ್ತಿದೆಯೋ, ಈ ಸ್ಪಿನ್ನಿಂಗ್ ಮಿಲ್ಲುಗಳ ವಿಷಯದಲ್ಲೂ ಹಾಗೆಯೇ ಮಾಡುತ್ತಿದೆ.

ಇನ್ನು ಸೀಜನಲ್ ಕಂಡೀಷನ್‌ಗಳ ವಿಚಾರವನ್ನು ಹೇಳಿದ್ದಾರೆ- ಇದರಲ್ಲಿ ಅವರಿಗೆ ಯಾರು ವಿಚಾರಗಳನ್ನು ತಿಳಿಸಿದರೋ ಗೊತ್ತಿಲ್ಲ, ಇಲ್ಲಿ ಕೇವಲ ಚಿತ್ರದುರ್ಗ ತುಮಕೂರು ಕೋಲಾರ, ಮಂಡ್ಯ, ಮೈಸೂರುಗಳಲ್ಲಿ ಮಾತ್ರ ಬೆಳೆಗಳು ಕೆಟ್ಟಿರುತ್ತವೆಂದು ಹೇಳಿದ್ದಾರೆ. ಹೀಗೆಯೇ ನಮ್ಮ ಬಿಜಾಪುರ ಮತ್ತು ಬೀದರ್ ಜಿಲ್ಲೆಗಳಲ್ಲೂ ಬೆಳೆ ಪೂರ್ಣವಾಗಿ ಫೇಲಾಗಿದೆ. ಅಲ್ಲಿ ಜನಗಳಿಗೆ ತಿನ್ನಲಿಕ್ಕೆ ಅನ್ನವಿಲ್ಲ. ನನಗೆ ಗೊತ್ತಿರುವ ಹಾಗೆ ತೊಗರೆ ಮತ್ತು ಗೋಧಿ ಬೆಲೆ ಎಂದೂ ಇಷ್ಟು ಜಾಸ್ತಿ ಏರಿರಲಿಲ್ಲ. ಎಂಥಾ ಕ್ಷಾಮಗಾಲದಲ್ಲೂ ರೂಪಾಯಿಗೆ ಎರಡೂವರೆ ಸೇರಿಗಿಂತ ಕಡಿಮೆ ಇರಲಿಲ್ಲ. ಆದರೆ ಈ ದಿವಸ ಸುಗ್ಗಿಯಲ್ಲಿಯೇ ಧಾನ್ಯಗಳು ರೂಪಾಯಿಗೆ ಒಂದು ಸೇರಾಗಿವೆ. ಆದ್ದರಿಂದ ಇಲ್ಲಿ ಇನ್ನೂ ಅನೇಕ ಜಿಲ್ಲೆಗಳ ಹೆಸರನ್ನು ಸೇರಿಸಬೇಕಾಗಿತ್ತು. ಆದ್ದರಿಂದ ಮಾನ್ಯ ರೆವಿನ್ಯೂ ಮಂತ್ರಿಗಳು ಈ ಸೀಜನಲ್ ಕಂಡೀಷನ್ ಕಾಲಂನಲ್ಲಿ ಇನ್ನೂ ಅನೇಕ ಜಿಲ್ಲೆಗಳನ್ನು ಸೇರಿಸಬೇಕೆಂದು ಹೇಳುತ್ತೇನೆ.

ಇನ್ನು ನೀರಾವರಿ ಬಾವಿಗಳ ವಿಚಾರವನ್ನು ಹೇಳಿದ್ದಾರೆ. ಇಲ್ಲಿಯ ತನಕ ಈ ಬಾಬಿನಲ್ಲಿ ಹಣವನ್ನು ಯಾರಿಗೆ ಬಾವಿ ತೆಗೆಯಲು ಶಕ್ತಿಯಿದೆಯೋ ಅಂಥವರಿಗೇ ಕೊಟ್ಟಿದ್ದಾರೆ. ಬಡವರಿಗೇನೂ ಇದರಿಂದ ಸಹಾಯವಾಗಿಲ್ಲ. ಈ ಬಾಬಿನಲ್ಲಿ ಹೆಚ್ಚು ಅನುಕೂಲ ಪ್ರಸಕ್ತ ಕಾಂಗ್ರೆಸ್ ಸದಸ್ಯರಿಗೂ ಮತ್ತು ಎಕ್ಸ್ ಎಂ.ಎಲ್.ಎ.ಗಳಿಗೂ ದೊರೆಯುತ್ತಿದೆ. ಈ ಪೈಕಿ ಒಬ್ಬ ಎಕ್ಸ್ ಎಂ.ಎಲ್.ಎ. ಒಂದಾವರ್ತಿ ಪಡೆದ ತಕಾವಿ ಸಾಲವನ್ನು ತೀರಿಸದೆ ಇದ್ದಗ್ಯೂ ಮತ್ತೆ ಅದೇ ವ್ಯಕ್ತಿಗೆ ಮೂರಾವರ್ತಿ ತಕಾವಿ ಸಾಲವನ್ನು ಕೊಟ್ಟಿದ್ದಾರೆ. ನಾವು ಸ್ಥಳೀಯ ಅಧಿಕಾರಿಗಳನ್ನು ಹೀಗೇಕೆ ಮಾಡುತ್ತೀರೆಂದು ಕೇಳಿದರೆ ಅವರು ನಾವೇನು ಮಾಡೋಣ ಅವರು ಮಂತ್ರಿಗಳಿಂದಲೂ, ಎಂ.ಎಲ್.ಎ. ಗಳಿಂದಲೂ ಶಿಫಾರಸ್ಸುಗಳನ್ನು ತರುತ್ತಾರೆಂದು ಹೇಳುತ್ತಿದ್ದಾರೆ. ಹೀಗೆ ಅಲ್ಲಿ ಈ ದಿವಸ ಯಾರ‍್ಯಾರು ಅಕ್ರಮ ಅನುಕೂಲಗಳನ್ನು ಪಡೆಯುತ್ತಿದ್ದಾರೋ ಅವರೆಲ್ಲರೂ ಈ ಹಿಂದೆ ಕಾಂಗ್ರೆಸ್ಸಿನವರಿಗೆ ಎಲೆಕ್ಷನ್‌ಗಳಲ್ಲಿ ಕ್ಯಾನಾವಾಸ್ ಮಾಡಿರತಕ್ಕ ಜನರಾಗಿದ್ದಾರೆ. ಇದರ ಹೊರತಾಗಿ ನ್ಯಾಯವಾಗಿ ನಿಜವಾದ ರೈತರಿಗೆ ಯಾರಿಗೂ ಇದರಿಂದ ಅನುಕೂವಾಗಿಲ್ಲ. ನಾನು ಇವರೆಲ್ಲರ ಹೆಸರುಗಳನ್ನೂ ಹೇಳುತ್ತಿದ್ದೆ. ಆದರೆ ಅಧ್ಯಕ್ಷರು ಹೆಸರುಗಳನ್ನು ಹೇಳಬಾರದೆಂದು ಹೇಳುತ್ತಾರೆ; ಒಟ್ಟಿನಲ್ಲಿ ಹೇಳುವುದಾದರೆ

ಈ ಯುಗದಲ್ಲಿ ಕಾಂಗ್ರೆಸ್ಸಿನವರು ಒಂದು ಕರಪ್‌ಷನ್ ಕ್ಲಾಸನ್ನೇ ತಯಾರು ಮಾಡಿದ್ದಾರೆಂದು ಅವರ ಬಗ್ಗೆ ನನ್ನ ಒಂದು ಛಾರ್ಜ್ ಇದೆ. ಹೀಗೇ ದೇಶದಲ್ಲಿ ಎಲ್ಲಿ ನೋಡಿದರೂ ಲಂಚಗೂಳಿತನ ತನ್ಮಯವಾಗಿರುವುದರಿಂದಲೇ ಈ ವಿಚಾರದಲ್ಲಿ ಶ್ರೀ ನಂದಾ ಅವರು ಅನೇಕ ಪ್ರಯತ್ನಗಳನ್ನು ಮಾಡುತ್ತಿದ್ದಾರೆ. ಈ ಒಂದು ಕರಪ್ಟ್ ಕ್ಲಾಸನ್ನು ಸೃಷ್ಟಿ ಮಾಡಿರತಕ್ಕ ಜವಾಬ್ದಾರಿ ಕಾಂಗ್ರೆಸ್ಸಿನ ಮೇಲೆ ಬಹಳವಾಗಿ ಬಂದಿದೆ. ನಮ್ಮ ಗುಲ್ಬರ್ಗಾದಲ್ಲಿ ಕೋ-ಅಪರೇಟೀವ್ ಸೊಸೈಟಿಯಲ್ಲಿ ಹಣದುರುಪಯೋಗ ಮಾಡಿರತಕ್ಕ ಒಬ್ಬ ವ್ಯಕ್ತಿಯನ್ನು ಕೆಲಸದಿಂದ ತೆಗೆದು ಹಾಕಲಾಗಿತ್ತು. ಅಂಥ ವ್ಯಕ್ತಿಯನ್ನು ಇವರು ಮತ್ತೆ ರೀ ಎಂಪ್ಲಾಯಿ ಮಾಡಿಕೊಂಡಿದ್ದಾರೆ. ಹೀಗೆ ಕಾಂಗ್ರೆಸ್ಸಿನವರ ಅಭಿಮಾನವೆಲ್ಲಾ ತಪ್ಪಿತಸ್ಥರ ಮೇಲೆದೆಯೇ ವಿನಾ ಒಳ್ಳೆಯವರ ಬಗ್ಗೆ ಇಲ್ಲ. ಆದ್ದರಿಂದಲೇ ನಾನು ಇವರೇ ಈ ಕರಪ್ಟ್ ಕ್ಲಾಸನ್ನು ತಯಾರು ಮಾಡಿದ್ದಾರೆಂದು ಹೇಳುತ್ತಿರುವುದು; ಇಂದಿನ ಸರ್ಕಾರ ಯಾರು ತಮ್ಮ ತನುಮನಧನಗಳನ್ನು ತೆತ್ತು ಕೆಲಸ ಮಾಡುತ್ತಿದ್ದಾರೆ ಅಂಥವರಿಗೆ ಏನೂ ಸಹಕಾರ ನೀಡುತ್ತಿಲ್ಲ. ಮಹಾತ್ಮ ಗಾಂಧಿಯವರು ಸ್ಥಾಪಿಸಿದಂಥ ಖಾದೀ ಬೋರ್ಡಿನಲ್ಲೇ ದುರುಪಯೋಗ ನಡೆದು ಅನೇಕರು ಶ್ರೀಮಂತರಾಗಿದ್ದಾರೆ. ಇದನ್ನು ಅಕ್ಷರಶಃ ರುಜುವಾತು ಮಾಡಬಲ್ಲೆ;

ಇನ್ನು ಮೇಜರ್ ಇರಿಗೇಷನ್ ವಿಚಾರಕ್ಕೆ ಬಂದರೆ, ಸರಕಾರದ ಬಳಿ ಅಂದಾಜೇನು, ಎಷ್ಟು ಕೆಲಸವಾಗಬೇಕು, ಹಣವೆಷ್ಟಿದೆ ಎಂಬ ಒಂದೂ ಅಂದಾಜುಗಳಿಲ್ಲ ಎಷ್ಟು ಪ್ರದೇಶ ನೀರಾವರಿಯಾಗುತ್ತದೆ ಎಂದು ಹೇಳಲು ಇವರಿಗೆ ಸಾಧ್ಯವಿಲ್ಲ. ಕೃಷ್ಣ ಗೋದಾವರಿ ನೀರಿಗೆ ಆಲಮಟ್ಟಿ ಬಳಿ ಒಂದು ಡ್ಯಾಮನ್ನು ಹಾಕುವುದಾಗಿ 6 -7 ವರ್ಷಗಳಿಂದ ಹೇಳುತ್ತಲೇ ಬಂದಿದ್ದಾರೆ. ಆದರೆ ಈಗ ಅದನ್ನು ಹಿಂದಿಟ್ಟು ನಾರಾಯಣಪುರದ ಬಳಿ ಕಟ್ಟಬೇಕೆಂದು ಹೇಳುತ್ತಿದ್ದಾರೆ. ಮೊದಲು ಆಲಮಟ್ಟಿಯ ಬಳಿಯಲ್ಲೇ ಕಟ್ಟಬೇಕೆಂದು ನಾನು ಒತ್ತಾಯ ಮಾಡಿ ಹೇಳುತ್ತೇನೆ. ಅನಂತರ ಬೇಕಾದರೆ ನಾರಾಯಣಪುರದ ಬಳಿಯಲ್ಲೂ ಕಟ್ಟಲಿ. ಆದರೆ ಅದನ್ನು ಕೂಡ ಸರಿಯಾಗಿ ನೋಡಬೇಕು.

ನಾನು ಹೇಳುವುದೇನೆಂದರೆ ನಮ್ಮಲ್ಲಿ ಸಾಕಷ್ಟು ಪವರ್ ಇಲ್ಲ. ಮದ್ರಾಸ್ ಸಂಸ್ಥಾನದಲ್ಲಿ ಪವರ್ ಸಾಕಷ್ಟು ಇದೆ. ಕೇಂದ್ರ ಸರ್ಕಾರದವರು ಅವರಿಗೆ ಈ ವಿಷಯದಲ್ಲಿ ಬೇಕಾದಷ್ಟು ಸಹಾಯ ಮಾಡುತ್ತಿದ್ದಾರೆ. ಈಗ ನಮ್ಮ ದೇಶದಲ್ಲಿ ಶರಾವತಿಯಿಂದ ಇನ್ನು ನಾಲ್ಕೈದು ವರ್ಷಗಳೊಳಗೆ 10 ಲಕ್ಷ ಕಿಲೋವಾಟ್ಸ್ ಪವರ್ ಉತ್ಪತ್ತಿಯಾಗುತ್ತದೆಂದು ಹೇಳಿದರು. ಅದನ್ನೇನೋ ನಾನು ಒಪ್ಪಿಕೊಳ್ಳುತ್ತೇನೆ. ಆಂಧ್ರದಲ್ಲಿ ಶೇಕಡ 47 ರಷ್ಟು ಇರಿಗೇಷನ್ ಮಾಡಿ ನಮ್ಮಲ್ಲಿ ಶೇಕಡ 4 ರಷ್ಟು ಆಗುತ್ತದೆ. ಈಗ ಆಂಧ್ರದವರು ನಮ್ಮಲ್ಲಿರತಕ್ಕ ಸರ್ಪ್ಲಸ್ ಪವರ್ ಬೇಕೆಂದು ಕೇಳುತ್ತಿದ್ದಾರೆ. ಅವರು ನಾಗಾರ್ಜುನ ಸಾಗರ ಕಡಿಮೆ ಮಾಡಲಿ ನಮಗಿಂತಲೂ ಹೆಚ್ಚಿಗೆ ಏತಕ್ಕೆ ತೆಗೆದುಕೊಳ್ಳುತ್ತಾರೆಂದು ಕೇಂದ್ರ ಸರ್ಕಾರದವರನ್ನು

ಕೇಳಬಾರದು? ತುಂಗಭದ್ರಾ ಪ್ರಾಜೆಕ್ಟಿನಿಂದ ಸ್ವಲ್ಪ ಪವರ್ ಅವರಿಗೆ ಹೋಗುತ್ತದೆ. ನಾವು ಈ ವಿಚಾರದಲ್ಲಿ ಕೇಂದ್ರ್ರದವರನ್ನು ಕೇಳದೆ ಇರುವುದು ದೊಡ್ಡ ತಪ್ಪು ಎಂದು ಹೇಳುತ್ತೇನೆ.

ಇನ್ನು ಬಂದರು ಹಾಗೂ ರೈಲ್ವೆಗಳ ವಿಚಾರದಲ್ಲಿ ಹೇಳುವುದಾದರೆ ಮಂಗಳೂರು ರೈಲ್ವೆ ಲೈನನ್ನು ಬ್ರಾಡಗೇಜ್ ಲೈನನ್ನಾಗಿ ಕೈಕೊಳ್ಳುವ ಬಗ್ಗೆ ನಮ್ಮ ಸರ್ಕಾರದವರು ಸುಮ್ಮನೆ ಕುತೂಹಲವುಳ್ಳವರಾಗಿದ್ದರೆ ಸಾಕಾಗದು, ಮಹಾರಾಷ್ಟ್ರ ಸರ್ಕಾರಕ್ಕಿಂತಲೂ ಹೆಚ್ಚಿಗೆ ಈ ಬಗ್ಗೆ ಮುತುವರ್ಜಿ ವಹಿಸಿ ನಮ್ಮ ಸರ್ಕಾರ ನಮ್ಮ ರಾಜ್ಯದ ವ್ಯಾಪಾರಕ್ಕೆ ಅನುಗುಣವಾಗುವಂತೆ ರೈಲ್ವೇ ಸೌಕರ್ಯಗಳನ್ನು ಕೇಂದ್ರದವರಿಂದ ಪಡೆಯಬೇಕು. ಇತರರಿಗೆ ರೈಲ್ವೇ ಸೌಕರ್ಯಗಳು ಹೆಚ್ಚಿಗೆ ದೊರಕುತ್ತಿರುವಾಗ ಇಲ್ಲಿ ಏಕೆ ಆಗುವುದಿಲ್ಲ? ಅದರ ಸಲುವಾಗಿಯೇ ಕರ್ನಾಟಕದಿಂದ ಆಗತಕ್ಕ ವ್ಯಾಪಾರವೆಲ್ಲಾ ಹಾಳಾಗುತ್ತಿದೆ. ನಮ್ಮಲ್ಲಿ ಈಗಿರತಕ್ಕ ರೈಲ್ವೇ ಸೌಕರ್ಯಗಳು ನಿಜವಾಗಿಯೂ ಬಹಳ ಕಡಿಮೆ. ಏಕೆಂದರೆ ನಮ್ಮಲ್ಲಿ ಒಳ್ಳೆಯ ಸಾರಿಗೆಗಳಿಲ್ಲ. ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿ ಬಹಳ ಬೆಲೆಯಾದಂಥ ಸರಕುಗಳು ದೊರೆಯುವುದರಿಂದ ಅಲ್ಲಿ ಒಳ್ಳೆಯ ಬೆಲೆ ಸಿಗಬೇಕು. ಆದರೂ ಅಲ್ಲಿ ಅಷ್ಟು ಸಿಕ್ಕುತ್ತಿಲ್ಲ. ಉದಾಹರಣೆಗೆ ಹೇಳುವುದಾದರೆ ಗುಲ್ಬರ್ಗಾ ಬ್ರಾಡ್ ಗೇಜ್ ಲೈನ್ ಆಗಿರುವುದರಿಂದ ಅಲ್ಲಿಂದಲೂ ಮತ್ತು ಮದ್ರಾಸಿನಿಂದಲೂ ಎಷ್ಟೋ ದೂರದಲ್ಲಿರತಕ್ಕ ಸೋಲಾಪುರ ಮತ್ತು ಬಿದರೆ ಮುಂತಾದ ಪ್ರದೇಶಗಳಲ್ಲಿ ಆಹಾರ ಧಾನ್ಯಗಳನ್ನು ಸಾಗಿಸುವುದರಿಂದ ಅಲ್ಲೆಲ್ಲಾ ಹೆಚ್ಚಿಗೆ ವ್ಯಾಪಾರ ನಡೆಯುತ್ತಿದೆ. ಆದ್ದರಿಂದ ಸರ್ಕಾರದವರು ನಮ್ಮ ರಾಜ್ಯದಲ್ಲಿಯೂ ಹೆಚ್ಚು ಹೆಚ್ಚು ದೊಡ್ಡ ದೊಡ್ಡ ರೈಲ್ವೇ ಮಾರ್ಗಗಳ ಸೌಕರ್ಯವನ್ನು ಪಡೆಯಲು ತಕ್ಕ ಪ್ರಯತ್ನಗಳನ್ನು ಬೇಗನೆ ಮಾಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

ಇನ್ನು ಮೈಸೂರು ಸ್ಟೇಟ್ ರೋಡ್ ಟ್ರಾನ್ಸ್‌ಪೋರ್ಟ್‌ನ್ನು ರಾಷ್ಟ್ರೀಕರಣ ಮಾಡುವ ಬಗ್ಗೆ ಇದೇ ಸಭೆಯಲ್ಲಿ ಹಿಂದೆ ಪ್ರಶ್ನೆಗಳನ್ನು ಕೇಳಿದಾಗ ಮಾನ್ಯ ಮಂತ್ರಿಗಳು ನಮ್ಮಲ್ಲಿ ಅದಕ್ಕಾಗುವಷ್ಟು ದುಡ್ಡು ಇಲ್ಲವೆಂದು ಹೇಳಿದರು. ಎಲೆಕ್ಟ್ರಿಸಿಟಿ ಕಾರ್ಪೊರೇಷನ್ನಿನವರು ಹೇಗೆ ಸಾಲ ತೆಗೆದುಕೊಂಡು ತಮ್ಮ ಇಲಾಖೆಯನ್ನು ಅಭಿವೃದ್ಧಿ ಪಡಿಸಲು ಪ್ರಯತ್ನ ಮಾಡುತ್ತಿದ್ದಾರೋ ಅದೇ ರೀತಿಯಲ್ಲಿ ರೋಡ್ ಟ್ರಾನ್ಸ್‌ಪೋರ್ಟ್ ಕಾರ್ಪೋರೇಷನ್ನಿನವರು ಬೇಕಾದ ಸಾಲವನ್ನು ತೆಗೆದು ಮೂರನೆಯ ಪಂಚವಾರ್ಷಿಕ ಯೋಜನೆ ಮುಗಿಯುವುದರೊಳಗೆ ಇಡೀ ದೇಶದಲ್ಲೆಲ್ಲಾ ರೋಡ್ ಟ್ರಾನ್ಸ್ ಪೋರ್ಟ್‌ನ್ನು ರಾಷ್ಟ್ರೀಕರಣ ಮಾಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ರಾಷ್ಟ್ರೀಕರಣ ಮಾಡುವಾಗ ಎಲ್ಲಾ ಕಡೆಗಳಲ್ಲೂ ಮಾಡದೆ ಕೆಲವು ಕಡೆ ಮಾಡುತ್ತಾರೆ. ಗುಲಬರ್ಗಾದಲ್ಲಿ ಇಂತಹ 50 ಉದಾಹರಣೆಗಳು ಸಿಕ್ಕಬಹುದು. ಯಾರೋ ಒಬ್ಬ ಖಾಸಗಿಯವರಿಗೆ ತಮಗೆ ಬೇಕಾದವರಿಗೆ ಲೈಸೆನ್ಸ್ ಕೊಡುವುದು. ಅಂಥ ಕಡೆ 80 ಮೈಲಿ ಟಾರ್ ರಸ್ತೆ ಇರುತ್ತದೆ. ಮುಂದೆ ಕಚ್ಚಾರಸ್ತೆ ಇರುತ್ತದೆ ಎಂದು ಬೇರೆಯವರಿಗೆ

ಕೊಡುವುದು. ಆ ಪ್ರಕಾರ ರಾಷ್ಟ್ರೀಕರಣವಾಗತಕ್ಕ ಸ್ಕೀಮುಗಳು ಇರುವುದರಿಂದ ಇದರಲ್ಲಿ ಎಲ್ಲೋ ಎಂ.ಎಲ್.ಎ. ಗಳ ಕೈವಾಡ ಇದೆಯೆಂಬುದು ವ್ಯಕ್ತವಾಗುತ್ತದೆಂದು ಹೇಳಬಹುದು. ಆದ್ದರಿಂದ ಇಂತಹ ನ್ಯೂನತೆಗಳನ್ನು ಸರಿಪಡಿಸಬೇಕೆಂದು ನಾನು ಸರ್ಕಾರದವರಿಗೆ ಹೇಳುತ್ತೇನೆ.

ಇನ್ನು ಪ್ರೋಹಿಬಿಷನ್ ಪಾಲಿಸಿಯ ವಿಚಾರದಲ್ಲಿ ಮಹಾರಾಷ್ಟ್ರದ ಗವರ್ನರ್ ಆದ ಶ್ರೀಮತಿ ವಿಜಯಲಕ್ಷ್ಮಿ ಪಂಡಿತ್ ಅವರು ಮಾತನಾಡುತ್ತಾ, ನಾಯಕರು ಯಾವ ರೀತಿ ಒಂದು ನಿರ್ಣಯ ತೆಗೆದುಕೊಂಡಿದ್ದಾರೋ, ಆ ರೀತಿ ಅತಿ ಶ್ರೀಘ್ರದಲ್ಲಿಯೇ ಕಾರ್ಯಕ್ರಮ ತೆಗೆದುಕೊಳ್ಳುತ್ತಾರೆಂದು ಹೇಳಿದರು. ಆದರೆ ಇಲ್ಲಿ ಆ ರೀತಿ ಏನೂ ಅಭಿಪ್ರಾಯ ವ್ಯಕ್ತಪಡಿಸಿಲ್ಲವೆಂದು ನಾನು ಹೇಳಬೇಕಾಗಿದೆ.

ಇನ್ನು ತುಟ್ಟಿ ಭತ್ಯದ ವಿಷಯವಾಗಿ ಹೇಳುವುದಾದರೆ ಪಂಜಾಬಿನಲ್ಲಿ ಸುಮಾರು 12 ಕೋಟಿ ರೂಪಾಯಿಗಳ ಕೊರತೆ ಬಜೆಟ್ಟನ್ನು ತೋರಿಸಿದರೂ ಅಲ್ಲಿನ ಸರ್ಕಾರೀ ಆಫೀಸಿನಲ್ಲಿ ಕೆಲಸ ಮಾಡತಕ್ಕ ನೌಕರರಿಗೆ ಡಿ.ಎ. ಜಾಸ್ತಿ ಮಾಡಿರುತ್ತಾರೆ. ಕೇಂದ್ರ ಸರ್ಕಾರದವರೂ ತಮ್ಮ ನೌಕರರೆಲ್ಲರಿಗೂ ಡಿ.ಎ. ಯನ್ನು ಜಾಸ್ತಿ ಮಾಡಿರುತ್ತಾರೆ. ಮದ್ರಾಸ್ ಮತ್ತು ಮಹಾರಾಷ್ಟ್ರದವರೂ ಆ ರೀತಿ ಮಾಡಿರುತ್ತಾರೆ. ಅಂದ ಮೇಲೆ ನಮ್ಮ ಸರ್ಕಾರದವರು ಈ ನಮ್ಮ ರಾಜ್ಯಪಾಲರ ಭಾಷಣದಲ್ಲಿ ಆ ವಿಷಯವನ್ನು ಸೇರಿಸಬೇಕಾಗಿತ್ತು. ಅದನ್ನು ಅವರ ಭಾಷಣದಲ್ಲಿ ಸೇರಿಸದೆ ಇರುವುದನ್ನು ನೋಡಿ ನಾನು ಬಹಳ ವ್ಯಥೆಪಡಬೇಕಾಗಿದೆ.

ಅಧ್ಯಕ್ಷರು ನನಗೆ ಕಾಲಾವಕಾಶವನ್ನು ಜಾಸ್ತಿಯಾಗಿ ಕೊಡದೇ ಇರುವುದಕ್ಕಾಗಿ ನಾನು ಇಲ್ಲಿಗೆ ನನ್ನ ಭಾಷಣವನ್ನು ಮುಗಿಸುತ್ತೇನೆ.

## (16) ಪೊಲೀಸ್ ಇಲಾಖೆಯ ಬೇಡಿಕೆ ಮೇಲಿನ ಚರ್ಚೆ *

ಸ್ವಾಮಿ, ಅಧ್ಯಕ್ಷರೇ ಈ ಜೈಲಿನ ವಿಷಯದಲ್ಲಿ ಕೆಲವು ನಿದರ್ಶನಗಳನ್ನು ಮಾನ್ಯ ಮಂತ್ರಿಗಳ ಗಮನಕ್ಕೆ ತರಬೇಕೆಂದು ನನ್ನ ಇಚ್ಛೆ ಇದೆ. ಈ ಜೈಲಿನಲ್ಲಿ ಆಗತಕ್ಕ ಅನ್ಯಾಯ ನೋಡಿದರೆ ಅಲ್ಲಿಂದ ಬಂದಿರತಕ್ಕವರಿಗೆ ಹುಚ್ಚು ಹಿಡಿಯದೇ ಇರಲಾರದು, ಏಕೆಂದರೆ ಯಾವ ಯಾವುದೋ ಕಾರಣಗಳಿಂದ ತಪ್ಪು ತಿಳಿದುಕೊಂಡೋ ಅಥವಾ ಎರಡನೇದವರಿಗೆ ಲಂಚ ಕೊಟ್ಟೋ ಯಾವುದೇ ಕಾರಣಕ್ಕಾಗಿ ಜೈಲಿಗೆ ಬಂದರು ಎಂದರೆ ಅದು ಅವರು ಮಾಡಿರತಕ್ಕ ಪಾಪವೋ ಪುಣ್ಯವೋ ಗೊತ್ತಿಲ್ಲ. ಜೈಲಿನ ಮೇಲ್ವಿಚಾರಣೆ ನೋಡಿಕೊಳ್ಳತಕ್ಕವರ ವರ್ತನೆ ನೋಡಿದರೆ ಅದು ಮಾನವೀಯತೆಯ ಅಥವಾ ಮಾನವತ್ವ ದೃಷ್ಟಿಯಿಂದ ಮಾಡತಕ್ಕ ವರ್ತನೆ ಅಲ್ಲ. ಅಲ್ಲಿಗೆ ಬರತಕ್ಕವರನ್ನು ಅವರು ನಾಗರೀಕ ಮನಷ್ಯರು ಎಂದು ತಿಳಿದುಕೊಳ್ಳುತ್ತಾರೆಯೋ ಇಲ್ಲವೋ ಅವರೇ ಹೇಳಬೇಕು. ಜೈಲನ್ನು ಸುಧಾರಿಸಬೇಕು. ಮಹಾತ್ಮಾಗಾಂಧೀಜಿಯವರು ಯಾವ ಜೈಲಿಗೆ ಹೋದರು ಅಂತಹ ಜೈಲಿನ ವಿಷಯದಲ್ಲಿ ಸ್ವಾತಂತ್ರ್ಯ ಬಂದ ನಂತರ ಅಲ್ಲಿಗೆ ಬರತಕ್ಕ ಜನರನ್ನು ಮನುಷ್ಯರಂತೆ ಮಾಡಬೇಕೆಂದು ಬಹಳ ಒಳ್ಳೆಯ ಮಾತುಗಳನ್ನು ಹೇಳುತ್ತಾ ಇದ್ದೀರಿ. ಆದರೆ ಅಲ್ಲಿ ಎಷ್ಟು ಅನ್ಯಾಯ ನಡೆಯುತ್ತಾ ಇದೆ. ಅವರಿಗೆ ಕೊಡುತ್ತಾ ಇರತ್ತಕ ಊಟದಲ್ಲಿ ಎಷ್ಟು ಭಾಗ ಜೈಲು ಸೂಪರಿಟೆಂಡೆಂಟ್‌ರ ಮನೆಗೆ ಹೋಗುತ್ತಾ ಇರುತ್ತದೆ ಎಂಬುದನ್ನು ತಾವು ವಿಚಾರ ಮಾಡಿದ್ದೇ ಆದರೆ ಅದು ತಮಗೆ ತಿಳಿಯುತ್ತದೆ. ಅಷ್ಟೇ ಅಲ್ಲ ನಾವು ನಮ್ಮ ಸ್ವಂತ ಅಡಿಗೆ ಮಾಡಿಕೊಳ್ಳುವ ಕಾಲದಲ್ಲಿ ನಮಗೆ ಕೊಡುತ್ತಾ ಇದ್ದ ಎಲ್ಲಾ ಪದಾರ್ಥಗಳಲ್ಲೂ 50 ಪರ್ಸೆಂಟು ಕೆಟ್ಟು ಹೋದದ್ದು, ಕೊಳೆತು ಹೋದದ್ದು ಇರುತ್ತಾ ಇತ್ತು. ಅಡಿಗೆ ಪದಾರ್ಥಗಳನ್ನು ಸಪ್ಲೈ ಮಾಡುವವರಿಗೆ ಕಾಂಟ್ರಾಕ್ಟ್ ಕೊಡುವಾಗ ಹೆಚ್ಚು ರೇಟ್‌ಗೆ ಕಾಂಟ್ರಾಕ್ಟ್ ಕೊಡುತ್ತಾ ಇದ್ದಾರೆ. ಅವರು ಸಪ್ಲೈ ಮಾಡುವಾಗ ಸ್ಯಾಂಪಲ್ ತೋರಿಸುವುದೇ ಒಂದು, ಸಪ್ಲೈ ಮಾಡುವುದೇ ಒಂದು.

ಆರ್.ಎಂ. ಪಾಟೀಲ್: ಅದರ ಬಗ್ಗೆ ಏನಾದರೂ ತಾವು ಬರೆದಿರಾ?

ಶ್ರೀ **ಗಂಗಾಧರ ನಮೋಶಿ:** ನಾವು ಬೇಕಾದಷ್ಟು ರೆಪ್ರೆಸೆಂಟೇಷನ್ ಮಾಡಿದ್ದೇವು ಅದು ತಮಗೆ ಮುಟ್ಟಿದೆಯೋ ಇಲ್ಲವೋ ಗೊತ್ತಿಲ್ಲ. ನಮಗೆ ಅನ್ಯಾಯವಾದಾಗ ಸ್ಪೀಕರ್ ಅವರಿಗೂ ಕೂಡ ಬರೆದಿದ್ದೆವು ಅದೂ ಕೂಡ ಅವರಿಗೆ ಮುಟ್ಟಿಲ್ಲ ಎಂದು ನಮಗೆ ಗೊತ್ತಾಗಿದೆ. ನಾವು ಬರೆಯತಕ್ಕ ಎಲ್ಲಾ ಕಾಗದಗಳನ್ನೂ ಥ್ರೂ ದಿ ಜೈಲ್ ಸೂಪರಿಂಟೆಂಡೆಂಟ್‌ಗೆ ಕಳುಹಿಸುತ್ತಿದ್ದೆವು, ಅವರು ಅದನ್ನು ಕಳುಹಿಸಿಲ್ಲ ಎಂದು ಗೊತ್ತಾಗಿದೆ.

ಸಭಾಧ್ಯಕ್ಷರು: ಸಭಾಧ್ಯಕ್ಷರಿಗೆ ಸಂಬೋಧಿಸಿದ ಪತ್ರವನ್ನು ಜೇಲ್ ಪ್ರಾಧಿಕಾರಕ್ಕೆ ತಡೆಹಿಡಿಯಲು ಬರುವುದಿಲ್ಲ.

---

* ವಿಧಾನಸಭೆಯ ನಡವಳಿಕೆಯ ದಿನಾಂಕ 11ನೇ ಮಾರ್ಚ್, 1964

**ಗಂಗಾಧರ ನಮೋಶಿ:** ಹಾಗಿದ್ದರೆ ಅದನ್ನು ಸೆನ್ಸಾರ್ ಮಾಡಿದ್ದಾರೆ, ಅಷ್ಟೇ ಅಲ್ಲ, ಈ ಎಮರ್ಜೆನ್ಸಿ ಹೆಸರಿನ ಮೇಲೆ ಅಲ್ಲಿರತಕ್ಕ ಜನರನ್ನು ಮುಂಜಾನೆ 6 ಗಂಟೆಯಿಂದ ಹಿಡಿದುಕೊಂಡು......

**ಸಭಾಧ್ಯಕ್ಷರು:** ಅವರು ಆ ಸಂಬಂಧ ಉಲ್ಲೇಖಿಸಿದರೆ, ನಾನು ಪರಿಶೀಲಿಸುವೆ.

**ಗಂಗಾಧರ ನಮೋಶಿ:** ಸ್ವಾಮಿ, ಈ ದಿವಸ ಹೇಳಬೇಕಾದರೆ (ಎ) ಕ್ಲಾಸ್ ಅಂತ ನಮ್ಮನ್ನು ಪರಿಗಣಿಸಿದ ಮೇಲೆ ನಾನು ಸ್ವಂತ ಅಡಿಗೆ ಮಾಡಿಕೊಳ್ಳುತ್ತಾ ಇದ್ದೆ. ಅಡಿಗೆ ಮಾಡಿಕೊಳ್ಳಲಿಕ್ಕೆ ಪಾತ್ರೆಗಳನ್ನು ಕೊಡಿರಿ ಎಂದರೆ ಕೊಡಲಿಲ್ಲ. ಆ ವಿಷಯದಲ್ಲಿ ನಿಮಗೂ ಬರೆದಿದ್ದೆವು, ತಮಗೆ ಗೊತ್ತಿದೆಯೋ ಇಲ್ಲವೋ, ತಮಗೆ ಬಂದಿದ್ದರೆ ಉತ್ತರ ಕೊಡುತ್ತಿದ್ದೀರಿ.

**ಸಭಾಧ್ಯಕ್ಷರು:** ಒಂದು ವೇಳೆ, ಅದರಲ್ಲಿ ಏನಾದರೂ ಇದ್ದರೆ, ಅವರು ನನ್ನ ಚೇಂಬರಿಗೆ ಬಂದು ನನ್ನನ್ನು ಭೇಟಿಯಾಗಬಹುದು.

**ಗಂಗಾಧರ ನಮೋಶಿ:** ಲೆಜಿಸ್ಲೇಟರ್ಸ್ ಆದ ನಾವು ನಾಲ್ಕು ತಿಂಗಳು ಇದ್ದು ಹೊರಗೆ ಬರುವವರಿಗೆ ಈ ತರಹ ಟ್ರೀಟ್‌ಮೆಂಟ್ ಆದರೆ ಇನ್ನು ಆ ಮೂಕ ಜನರನ್ನು ಕೇಳುವವರು ಯಾರು? ಆ ಖೈದಿಗಳ ಮೇಲೆ ಯಾವ ತರಹ ಒತ್ತಾಯ ಬೀಳುತ್ತದೆ ಎಂಬುದನ್ನು ತಾವು ನೋಡಬೇಕು. ಇಷ್ಟೆಲ್ಲಾ ಹೇಳಬೇಕಾಗಿದ್ದರೆ ಅಲ್ಲಿರತಕ್ಕ ಜೈಲ್ ಸೂಪರಿಂಟೆಂಡೆಂಟರು ಮೈಸೂರು ಮಹಾರಾಜರಂತೆ ದರ್ಬಾರ್ ಮಾಡಿಕೊಂಡು ಆಡಳಿತ ನಡೆಸುತ್ತಾ ಇದ್ದಾರೆ. ಅವರು ಹಿಂದೆ ಮುಂದೆ ಎಲ್ಲಿ ಹೋದರೂ ಕೂಡ ಪೊಲೀಸರು ಅಟೆನ್‌ಷನ್‌ನಲ್ಲಿ ಇರುತ್ತಾ ಇದ್ದರು. ಐ.ಜಿ.ಪಿ. ಬಂದರೂ ಕೂಡ ಅವರಿಗೆ ಅಷ್ಟು ಮಟ್ಟಿನ ಮರ್ಯಾದೆ ಸಿಕ್ಕುತ್ತಾ ಇರಲಿಲ್ಲ. ಆ ಸೂಪರಿಂಟೆಂಡೆಂಟರು ಬಂದರೆ ಅವರನ್ನು ಬಾಗಿಲಿನವರೆಗೂ ಹೋಗಿ ಸ್ವಾಗತ ಮಾಡುತ್ತಾ ಇದ್ದರು. ಈ ರೀತಿ ಅವರ ದರ್ಬಾರ್ ನಡೆಯುತ್ತಾ ಇತ್ತು ಇದನ್ನು ನೋಡಿದರೆ ಅಲ್ಲಿ ಯಾವ ರೀತಿ ನಡೆಯುತ್ತಾ ಇದೆ ಎಂಬುದನ್ನು ತಾವೇ ವಿಚಾರ ಮಾಡಿ ನೋಡಿರಿ. ಇನ್ನೊಂದು ಮಾತು ಹೇಳಬೇಕಾಗಿದೆ. ಅದು ಅಲ್ಲಿ ಕೆಲಸ ಮಾಡತಕ್ಕ ಕಾನ್‌ಸ್ಟೇಬಲ್‌ಗಳಿಗೆ ಅನ್ಯಾಯವಾಗುತ್ತಾ ಇರುವ ಮಾತು. ರಾತ್ರಿ ಕಾಲದಲ್ಲಿ ಡ್ಯೂಟಿ ಇರುತ್ತದೆ, ಇಂತಹ ಬೇಸಿಗೆ ಕಾಲದಲ್ಲಿ ಇಷ್ಟೊಂದು ದಪ್ಪದ್ದು ಬೂಟು, ಕಾಲು ಚೀಲ ಹಾಕಿಕೊಂಡು ಕಾವಲು ಕಾಯಬೇಕೆಂದು ರೂಲ್ ಮಾಡಿ ಅವರು ಕಾಯದೇ ಹೋದಲ್ಲಿ ಒಂದು ಸಲ ತಾವು ಫೈಲ್ ತೆಗೆದುಕೊಂಡು ನೋಡಿರಿ 5 ರೂಪಾಯಿ ಫೈನ್ ಹಾಕುತ್ತಾ ಇದ್ದಾರೆ. 75-80 ರೂಪಾಯಿ ಸಂಬಳ ಬರತಕ್ಕ ಒಬ್ಬ ಕಾನ್‌ಸ್ಟೇಬರ್‌ಗೆ 5 ರೂಪಾಯಿ ಫೈನ್ ಹಾಕಿದರೆ ಅವನು ಯಾವ ರೀತಿ ಜೀವನ ಮಾಡಬೇಕು? ಇದನ್ನು ಯಾರು ನೋಡುವವರು? ಅಲ್ಲಿಗೆ ಆಂಟಿ ಕರಪ್‌ಷನ್ ಅಫೀಸರಂತೂ ಹೋಗುವುದಕ್ಕೆ ಸಾದ್ಯವೇ ಇಲ್ಲ. ತಾವು ಯಾರೂ ಹೋಗಿ ನೋಡುವುದಿಲ್ಲ. ಬೇರೆ ಯಾರು ಹೋಗಿ ನೋಡಬೇಕು? ಅಂತಹ ಮಹಾ ಪಾಪದ ನರಕ ಅಲ್ಲಿ ನಡೆಯುತ್ತಾ ಇರುತ್ತದೆ.

## (17) 1964-65ರ ಇಲಾಖಾ ಅನುದಾನ ಬೇಡಿಕೆಗಳ ಮೇಲಿನ ಚರ್ಚೆ *

ಸ್ವಾಮಿ, ಜೇಲ್ ವಿಚಾರದಲ್ಲಿ ಒಂದು ಮಾತು ಹೇಳಬೇಕೆಂದಿದ್ದೇನೆ. ನಿರಪರಾಧಿಗಳು ಜೇಲಿಗೆ ಹೋಗುತ್ತಾರೆ, ಅಪರಾಧ ಮಾಡಿದವರು ಜೇಲಿಗೆ ಹೋಗದೆ ಹೊರಗೆ ಉಳಿಯುತ್ತಾರೆ. ಇದಲ್ಲದೆ ಬೇರೆ ಯಾರಿಗೂ ಒಳಗೆ ಹೋಗಲು ಅವಕಾಶವಿಲ್ಲ. ಆದರೂ ಕೂಡ ಗಾಂಜಾ, ಸಾರಾಯಿ ಒಳಗೆ ಹೋಗುತ್ತದೆ ಮತ್ತು ಅದು ಅಲ್ಲಿ ದೊರೆಯುತ್ತದೆ. ಸಾಮಾನ್ಯವಾಗಿ ಒಬ್ಬ ಖೈದಿ ಕಾರ್ಪೆಟ್ ಮುಂತಾದ ನೇಯ್ಗೆ ಕೆಲಸ ಮಾಡಿ ಎಂಟು, ಹತ್ತು ಅಥವಾ ಹದಿನೈದು ರೂಪಾಯಿ ಸಂಪಾದನೆ ಮಾಡುತ್ತಾನೆ. ಅವರಿಗೆ ಬೇಕಾಗುವ ಸರಾಯಿ, ಗಾಂಜಾ ಅಲ್ಲಿ ಕೆಲಸ ಮಾಡುವ ಪೊಲೀಸಿನವರು ತಂದು ಕೊಟ್ಟು ದುಡ್ಡು ತೆಗೆದುಕೊಳ್ಳುತ್ತಾರೆ. ತಂದು ಕೊಡುವವರೂ ಅವರೇ ಕೆಲವು ಸಲ ಖೈದಿಗಳನ್ನು ಸಿಕ್ಕಾಗಿ ಬಡಿದವರೂ ಅವರೇ. ಈ ರೀತಿ ಸಂಪಾದನೆ ಮಾಡುವುದರಲ್ಲಿ ಎಲ್ಲರಿಗೂ ಭಾಗ ಇರುತ್ತದೆ. ಆದ್ದರಿಂದ ಇದು ಬೇರೆಯವರಿಗೆ ಗೊತ್ತಾಗುವುದಿಲ್ಲ. ಇದನ್ನು ಮಾನ್ಯ ಮಂತ್ರಿಗಳು ಬಹಳ ದಕ್ಷತೆಯಿಂದ ಕಂಡು ಹಿಡಿಯಬಹುದು. ಇದನ್ನು ನಾನು ಕಣ್ಣಾರೆ ನೋಡಿದ್ದೇನೆ. ಮನುಷ್ಯತ್ವ ಮಾನವತೆ ಇಲ್ಲದೆ ಇರುವುದರಿಂದ ಇದರಿಂದ ತೊಂದರೆ ಯಾಗುತ್ತಿದೆ. ಕೆಲಸ ಮಾಡದೇ ಇರುವ ಕಾಲದಲ್ಲಿ ಮಂತ್ರಿಗಳು ಹೋಗಿ ಖೈದಿಗಳನ್ನು ಕಂಡು ವಿಚಾರಿಸಿದರೆ ಇದು ಅವರಿಗೆ ಗೊತ್ತಾಗುತ್ತದೆ.

ಇನ್ನೊಂದು ಸೂಚನೆ ಮಾಡಲು ಬಯಸುತ್ತೇನೆ. ಲೆಜಿಸ್ಲೇಚರದ ಎಲ್ಲ ಪಾರ್ಟಿಗಳ ಸದಸ್ಯರು ಕೂಡಿದ ಒಂದು ಕಮಿಟಿ ರಚನೆ ಮಾಡಬೇಕು ಮತ್ತು ಈ ಕಮಿಟಿ ಸದಸ್ಯರು ಆಫೀಸರುಗಳ ಆಬ್ಸೆನ್ಸ್‌ನಲ್ಲಿ ಖೈದಿಗಳಿಗೆ ಭೇಟಿಯಾಗಿ ಕೇಳಿ ತಿಳಿದುಕೊಳ್ಳಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ.

ಇನ್ನೊಂದು ಉದಾಹರಣೆ ಕೊಡುತ್ತೇನೆ. ಒಂದು ಹಳ್ಳಿಯಲ್ಲಿ ಇಬ್ಬರು ರೈತರು ಬೇರೆ ಬೇರೆ ಇಬ್ಬರು ಯಜಮಾನರ ಹೊಲ ಕಾಯುತ್ತಾ ಇರುತ್ತಾರೆಂದು ಇಟ್ಟು ಕೊಳ್ಳೋಣ. ಅವರು ಪ್ರಾಮಾಣಿಕವಾಗಿ ತಮ್ಮ ಕೆಲಸ ಮಾಡುತ್ತಾರೆ. ಆದರೆ ಆ ಇಬ್ಬರು ಯಜಮಾನರ ನಡುವೆ ತಿಕ್ಕಾಟ ಬಂದು ಒಬ್ಬನು ಇನ್ನೊಬ್ಬನ ಹೊಲದಲ್ಲಿ ಎತ್ತು ಮೇಯುವುದಕ್ಕೆ ಬಿಡುತ್ತಾನೆ. ಈ ತಿಕ್ಕಾಟ ಜಾಸ್ತಿಯಾಗಿ ಎತ್ತು ಏಕೆ ಬಿಟ್ಟೆ ಎಂದು ಇಬ್ಬರು ರೈತರು ಜಗಳಾಡುತ್ತಾರೆ. ಆಗ್ಗ ಒಬ್ಬನು ಇನ್ನೊಬ್ಬ ರೈತನಿಗೆ ಕೊಡಲಿಯಿಂದ ಏಟು ಹಾಕುತ್ತಾನೆ. ಕೊಡಲಿ ಏಟಿನಿಂದ ಒಬ್ಬನ್ನು ಸತ್ತು ಹೋಗುತ್ತಾನೆ. ಇಂಥ ಕೊಲೆಗೆ ಅವನಿಗೆ ಶಿಕ್ಷೆಯಾಗುತ್ತದೆ. ಯಾವ ದುರದ್ದೇಶ ಇಲ್ಲದೆ ಆಕ್ಸಿಡೆಂಟಿನಿಂದ ಅವಮಾನದಿಂದ ಎಮೋಷನಲ್ಲಾಗಿ ಕೆಲವು ಸಲ ಕೊಲೆಗಳು ಆಗುತ್ತವೆ. ಇಂಥ ಪರಿಸ್ಥಿತಿಗೆ ಒಳಗಾಗಿ ಕೊಲೆ ಮಾಡಿದವರಿಗೆ ರೆಮಿಷನ್ ಕೊಡಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ.

---

* ವಿಧಾನಸಭೆಯ ನಡವಳಿಕೆಯ ದಿನಾಂಕ 12ನೇ ಮಾರ್ಚ್, 1964

ಸಾಮಾನ್ಯವಾಗಿ ಪೊಲೀಸ್ ಇಲಾಖೆಯಲ್ಲಿ ಕರಪ್ಷನ್ ಎಷ್ಟು ಬೆಳೆದಿದೆ ಎಂಬುದನ್ನು ಹೇಳುವುದಕ್ಕಾಗುವುದಿಲ್ಲ. ಕಾನ್‌ಸ್ಟೇಬಲ್ ಹಿಡಿದು ಸಬ್ ಇನ್ಸ್‌ಪೆಕ್ಟರ್, ಇನ್ಸ್‌ಪೆಕ್ಟರ್, ಡೆಪ್ಯುಟಿ ಸೂಪರಿಟೆಂಡೆಂಟ್, ಸೂಪಟೆಂಡೆಂಟ್, ಐ.ಜಿ.ಪಿ. ವರೆಗೆ ಎಲ್ಲರೂ ಒಬ್ಬರು ಇನ್ನೊಬ್ಬರು ಹೆಸರು ಹೇಳಬಹುದು ಎಂದು ನನಗನಿಸುತ್ತದೆ. ಇದರಲ್ಲಿ ಮಂತ್ರಿಗಳ ಹೆಸರೂ ಸಹ ಸೇರಬಹುದೋ ಏನೋ ಎಂದು ಅನಿಸುತ್ತದೆ. ಇದಕ್ಕೆ ಒಂದು ಉದಾರಹಣೆ ಕೊಡುತ್ತೇನೆ. ಬೆಂಗಳೂರು ಆಫೀಸನಲ್ಲಿ ಹೆಡ್ ಕ್ವಾಟರ್ಸ್ ಅಸಿಸ್ಟೆಂಟ್ ಎಂದು ಒಬ್ಬರು ಕಳೆದ ಏಳು ವರ್ಷಗಳಿಂದ ಇಲ್ಲಿಯೇ ಇದ್ದಾರೆ. ಈ ಮಹಾಶಯರು ದುಡ್ಡು ತೆಗೆದುಕೊಂಡು ಅಧಿಕಾರಿಗಳ ಬಿಲ್ಲು ಮುಂದೆ ಕಳಿಸುತ್ತಾರೆ. ಇದರಲ್ಲಿ ರೆಗ್ಯುಲರ್ ಆಗಿ ಒಂದು ಲಿಂಕ ಇದೆ. ಇದನ್ನು ದಯವಿಟ್ಟು ತಪ್ಪಿಸಬೇಕು. ಈಗ ಇವರನ್ನು ಟ್ರಾನ್ಸ್‌ಫರ್ ಮಾಡಿದ್ದಾರೆಂದು ತಿಳಿದಿದೆ. ಆದರೂ ಕೂಡ ಅವರು ಇನ್ನೂ ಆ ಚಾರ್ಜ್ ಕೊಟ್ಟಿಲ್ಲ. ಕಳೆದ ಏಳು ವರ್ಷದಿಂದ ಇದ್ದೇನೆ ಇನ್ನೂ ಹತ್ತು ವರ್ಷಗಳವರೆಗೆ ಇರುತ್ತೇನೆಂದು ಹೇಳುತ್ತಿದ್ದಾರೆ. ನನಗೆ ಏನು ಮಾಡುತ್ತಾರೆ ನೋಡೋಣ ಎಂದು ಹೇಳುತ್ತಾರೆ. ಶ್ರೀಮಾನ್ ನಿಜಲಿಂಗಪ್ಪನವರ ಮಂತ್ರಿ ಮಂಡಲದಲ್ಲಿ ಶ್ರೀ ಪಾಟೀಲ್‌ರು ಹಿಂದಕ್ಕೆ ಹೆಲ್ತ್ ಮಿನಿಸ್ಟರು ಆಗಿದ್ದಾಗ್ಗೆ ಅವರಿಗೆ ಒಂದು ವಿನಂತಿ ಮಾಡಿಕೊಂಡಿದ್ದೇನೆ. ನೀವು ರಾತ್ರಿ ಹೊತ್ತಿನಲ್ಲಿ ಯಾರಿಗೂ ಗೊತ್ತಾಗದೆ ಆಸ್ಪತ್ರೆಗೆ ವಿಜಿಟ್ ಕೊಟ್ಟು ಡಾಕ್ಟರ್ ಇದ್ದಾರೆಯೇ ಸರಿಯಾಗಿ ವ್ಯವಸ್ಥೆ ಇದೆಯೇ ನೋಡಿ ಎಂದು ಹೇಳಿದ್ದೇನೆ. ಅದೇ ರೀತಿ ಈಗಲೂ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ. ಪೊಲೀಸರಿಂದ ಭದ್ರತೆ ಇಲ್ಲ. ಸ್ಟ್ರಾಂಗ್ ಆ್ಯಕ್ಷನ ತೆಗೆದುಕೊಂಡು ಪರಿಪಡಿಸುವ ತಾಕತ್ ನಿಮ್ಮಲ್ಲಿ ಇದೆ. ದರ್ಪ ಇದೆ, ಆದರೆ ಈ ಪೊಲೀಸ್ ಇಲಾಖೆ ವಿಚಾರದಲ್ಲಿ ದರ್ಪ ಇದ್ದಗೂ ಕೂಡ ಏತಕ್ಕೆ ಯೀಲ್ಡ್ ಆಗುತ್ತೀರಿ ಗೊತ್ತಾಗುವುದಿಲ್ಲ.

ಈಗ ಕಾಶ್ಮೀರದಲ್ಲಿ ಹಜರತ್‌ಬಾಲ್ ಇನ್ಸ್‌ಡೆಂಟುಗಳು ಅದ ಮೇಲೆ ಅವುಗಳನ್ನು ಪಾಕೀಸ್ತಾನಿಗಳು ದುರುಪಯೋಗಮಾಡಿಕೊಂಡು ಬಂಗಾಳದಲ್ಲಿ ಗಲಭೆಯಾಯಿತು. ಅದೇ ಪ್ರಕಾರ ಬೇರೆ ಪ್ರಾಂತಗಳಲ್ಲಿಯೂ ಪರಿಸ್ಥಿತಿ ಇರುತ್ತದೆ. ಈ ಒಂದು ಘಟನೆಯನ್ನು ಕೆಲವರು ನಮ್ಮ ರಾಜ್ಯದಲ್ಲಿಯೂ ಉಪಯೋಗಿಸಿಕೊಳ್ಳುವವರಿದ್ದಾರೆಂದು ನಾನು ಈ ಸಂದರ್ಭದಲ್ಲಿ ಸರಕಾರದ ಗಮನಕ್ಕೆ ತರುತ್ತಿದ್ದೇನೆ. ನಮ್ಮ ಹೈದರಾಬಾದ್ ಕರ್ನಾಟಕ ಏರಿಯಾದಲ್ಲಿ ಕೆಲವು ಎಲಿಮೆಂಟುಗಳು ಅಂಥ ಗದ್ದಲ ಮಾಡಬೇಕು, ಕಮ್ಯೂನಲ್ ರಯಿಟ್ಸ್ ಎಬ್ಬಿಸಬೇಕು ಎಂದು ಇವೆ; ಅಂಥ ಒಂದು ಸೆಕ್ಷನ್ ಇದೆ. ಇವತ್ತಿನವರೆಗೂ ನಮ್ಮ ಅನುಭವ ನೋಡುವುದಾದರೆ ಪೊಲೀಸ್‌ನವರು ಕಷ್ಟ ಕಾಲದಲ್ಲಿ ವೇಳೆಗೆ ಸರಿಯಾಗಿ ನೆರವಿಗೆ ಬಂದಿಲ್ಲ. ಗುಲ್ಬರ್ಗಾದಲ್ಲಿ ಊರು ಸುಟ್ಟು ಹೋಯಿತು; ಊರು ಸುಟ್ಟ ಮೇಲೆ ಪೊಲೀಸಿನವರು ಬಂದರು. ಗುಲ್ಬರ್ಗಾ ಡಿಸ್ಟ್ರಿಕ್ಟು ಹೆಡ್‌ಕ್ವಾರ್ಟರು, ರಿಜರ್ವ ಪೊಲೀಸ್ ಇದೆ; ಆದರೆ ಊರಿಗೆ ಊರೇ ಸುಟ್ಟು ಹೋದ ಮೇಲೆ, ಲಕ್ಷಾಂತರ ರೂಪಾಯಿನ ಆಸ್ತಿ

ಧ್ವಂಸವಾದ ಮೇಲೆ ಪೊಲೀಸರು ಬಂದರು. ಬೀದರ್ ಮತ್ತು ಗುಲ್ಬರ್ಗಾದಲ್ಲಿ ಇಂಥ ಗಲಭೆ ಮಾಡುವ ಎಲಿಮೆಂಟುಗಳು ಇವೆ; ಇಂಥ ಒಂದು ಸೆಕ್ಷನ್ ಉಂಟು. ಕೆಲವು ಮುಸ್ಲಿಮರು ಪಾಕಿಸ್ತಾನದ ಪರ ಇದ್ದು, ಪಾಕಿಸ್ತಾನಕ್ಕೆ ಸಹಾನುಭೂತಿ ತೋರಿಸಿಬೇಕೆಂದು ಗಲಾಟೆ ಎಬ್ಬಿಸ ಬೇಕೆಂದಿದ್ದಾರೆ. ಹಾಗೆಯೇ ಕೆಲವು ಹಿಂದುಗಳು ಇಂಥ ಪರಿಸ್ಥಿತಿಯನ್ನು ಉಪಯೋಗಿಸಿಕೊಂಡು ಕಮ್ಯೂನಲ್ ದಂಗೆ ಎಬ್ಬಿಸಿ, ಲೂಟಿ ಮಾಡಿ, ಫಾಯಿದೆ ಪಡೆಯಬೇಕೆಂದಿದ್ದಾರೆ. ಇದು ನಮ್ಮ ದೇಶದ ದೃಷ್ಟಿಯಿಂದ ಒಳ್ಳೆಯದಲ್ಲ. 'ಏನಾದರೂ ಗಲಭೆಗಳಾದರೆ, ಪಾಕಿಸ್ತಾನ, ಹಿಂದೂಸ್ತಾನದಲ್ಲಿ ಮುಸ್ಲಿಮರಿಗೆ ಬಹಳ ಅನ್ಯಾಯವಾಗುತ್ತದೆ ಎಂದು ಪ್ರಾಪಗಾಂಡಾ ಮಾಡುವುದೇ ಅಲ್ಲದೆ ಮುಸ್ಲಿಮರ ಹಿತದೃಷ್ಟಿಯಿಂದ ಕಾಶ್ಮೀರ ಪಾಕಿಸ್ತಾನಕ್ಕೆ ಬರಬೇಕೆಂದು ಹೇಳುತ್ತಾರೆ. ಆದ್ದರಿಂದ ದಯೆಮಾಡಿ, ಮಾನ್ಯ ಮಂತ್ರಿಗಳು ಬಹಳ ದಕ್ಷರಾಗಿರತಕ್ಕಂಥ ಆಫೀಸರುಗಳನ್ನು ಸ್ಪೆಷಲ್ಲಾಗಿ ಸೆಲೆಕ್ಟ್ ಮಾಡಿ ಆ ಪ್ರದೇಶಗಳಿಗೆ ಹಾಕಬೇಕು. ಪೊಲೀಸು ಆಫೀಸರುಗಳನ್ನು ಸ್ಪೆಷಲ್ಲಾಗಿ ಸೆಲೆಕ್ಟ್ ಮಾಡಿ ಆ ಪ್ರದೇಶಗಳಿಗೆ ಹಾಕಬೇಕು. ಪೊಲೀಸು ಆಫೀಸರುಗಳು ಯಾರು ಒಳ್ಳೆಯವರೊ, ಯಾರು ಆ್ಯಬೋ ಕಮ್ಯುನಲಿಜಂ ಇದ್ದಾರೋ ಅಂಥವರನ್ನು ನೋಡಿ ಮುಖ್ಯವಾಗಿ ಮೂರು ಊರುಗಳಲ್ಲಿ ಹಾಕಬೇಕು ರಾಯಚೂರಿನಲ್ಲಿ ಅಂಥ ಘಟನೆಗಳು ಕಡಿಮೆಯಾಗಿ ಆಗಿವೆ. ಆದರೆ ಬಿದರೆ, ಯಾದಗಿರಿ ಮತ್ತು ಗುಲ್ಬರ್ಗಾದಲ್ಲಿ ಕಮ್ಯೂನಲ್ ಎಲಿಮೆಂಟುಗಳು ಇರುವುದರಿಂದ ಒಳ್ಳೆಯ ಆಫೀಸರುಗಳನ್ನು ನೇಮಕ ಮಾಡಿ, ದುರ್ಘಟನೆಗಳು ಆಗದ ಹಾಗೆ ನೋಡಿಕೊಳ್ಳಬೇಕು ಎಂದು ಮಾನ್ಯಮಂತ್ರಿಗಳಲ್ಲಿ ಮನವಿ ಮಾಡಿಕೊಳ್ಳುತ್ತೇನೆ.

ನನಗೆ ಇಷ್ಟರವರೆಗೆ ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರನ್ನು ವಂದಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

**(18) ಭಾಷಾವಾರು ತತ್ವದ ಆಧಾರದ ಮೇಲೆ ಭಾಷಾವರು ಪ್ರಾಂತಗಳ ರಚನೆಯ ಬಗ್ಗೆ ***

ಮಾನ್ಯ ಅಧ್ಯಕ್ಷರೇ, ಇಲ್ಲಿ ಬಂದಿರುವ ಈ ಠರಾವನ್ನು ಅನುಮೋದಿಸುತ್ತ ಕೆಲವು ಮಾತುಗಳನ್ನು ಇಲ್ಲಿ ಹೇಳಬೇಕಾಗಿದೆ. ಭಾಷಾವಾರು ತತ್ವದ ಆಧಾರದ ಮೇಲೆ ಭಾಷಾವಾರು ಪ್ರಾಂತಗಳಾಗಬೇಕೆಂದು ಎಲ್ಲ ಕಾಂಗ್ರೆಸ್ಸಿನವರೂ ಮತ್ತು ಬೇರೆ ಇತರ ಪಕ್ಷಗಳವರೂ ಕೂಡ ಪ್ರಚಾರ ಮಾಡುತ್ತಿದ್ದಂತೆ, ಭಾಷಾವಾರು ಪ್ರಾಂತಗಳೇನೋ ಆದವು. ಭಾಷಾವಾರು ಪ್ರಾಂತಗಳನ್ನು ರಚನೆ ಮಾಡುವ ಕಾಲಕ್ಕೆ ಎಕನಾಮಿಕ್ ವಯಬಿಲಿಟಿ, ವ್ಯಾಪಾರದ ಅವಶ್ಯಕತೆಗಳು ಮತ್ತು ಭಾಷಾವಾರು ತತ್ವದ ಮೇಲೆ ಮಾಡಬೇಕೆಂದು ಇತ್ತು. ಆಂಧ್ರ ಪ್ರಾಂತಾವಾಗಬೇಕೆಂದು ಹತ್ತು ವರ್ಷಗಳಿಂದ ಅಲ್ಲಿ ಚಳುವಳಿ ನಡೆಸಿದರೂ ಪೊಟ್ಟಿ ಶ್ರೀರಾಮುಲು ರವರು ನಿಧನರಾದ ಮೇಲೆ ಅಲ್ಲಿ ಆಂಧ್ರ ಪ್ರಾಂತ ವಾಯಿತು. ಹಾಗೇ ಇಲ್ಲಿಯೂ ಕೂಡ ಕರ್ನಾಟಕ ಪ್ರಾಂತವಾದಾಗ ಕರ್ನಾಟಕದ ಕೆಲವು ಭಾಗಗಳು ಆಂಧ್ರದಲ್ಲಿ, ಮಹಾರಾಷ್ಟ್ರದಲ್ಲಿ ಕೆಲವು ಭಾಗಗಳು ಆಂಧ್ರದಲ್ಲಿ ಹಾಗೂ ನಮಗೆ ಬರತಕ್ಕ ಕೆಲವು ಭಾಗಗಳು ಮದರಾಸಿನಲ್ಲಿ ಸೇರಿಹೋದವು. ಇದರ ಸಲುವಾಗಿ ಇನ್ನೂ ಯಾವ ಸರಿಯಾದ ಪ್ರಯತ್ನಗಳೂ ನಡೆದಿಲ್ಲ ಎಂದು ಇಲ್ಲಿ ಬಹಳ ದುಃಖದಿಂದ ಹೇಳ ಬೇಕಾಗಿದೆ. ಇಲ್ಲಿ ಈಗ ತಾನೇ ಮಾತನಾಡಿದ ಸದಸ್ಯರಾದ ಶ್ರೀಮಾನ್ ಕದುರವರು ವಿಲೇಜು ಯೂನಿಟ್ಟಿನ ಆಧಾರದ ಮೇಲೆ ಹೋಗುವುದಕ್ಕೆ ಸಾಧ್ಯವಿಲ್ಲ ಮತ್ತು ಮಹಾರಾಷ್ಟ್ರ ಸರಕಾರದಲ್ಲಿ ಒಂದು ಮ್ಯಾಪು ಇದೆ. ಅದರ ಪ್ರಕಾರ ಅದರ ಕಂಟಿಗ್ಯೂಯಿಟಿ ತೆಗೆದುಕೊಂಡು ಅಲ್ಲಿರುವ ಕಮ್ಯೂನಿಕೇಷನ್ನುಗಳು ಮತ್ತು ಇನ್ನಿತರ ಸೌಕರ್ಯಗಳನ್ನು ನೋಡಿಕೊಂಡು ತೆಗೆದುಕೊಳ್ಳುವುದಕ್ಕೆ ಸಾಧ್ಯ ಎಂದು ಹೇಳಿದ್ದಾರೆ. ಆದರೆ ಅವರು ಇದಕ್ಕಾಗಿ ಬಹಳ ಹಿಂದಿನ ಇತಿಹಾಸಗಳನ್ನು ಹೇಳಿದರು. ಹಾಗೆ ಇತಿಹಾಸದ ಆಧಾರದ ಮೇಲೆ ಹೇಳುವುದಾದರೆ ಈಗ ಮುಂಬಯಿ ರಾಜ್ಯದೊಳಗಿರುವ ಅಜಂತ ಹಾಗೂ ಎಲ್ಲೋರ ಗುಹಾಂತರ್ದೇವಾಲಯಗಳು ಇವನ್ನು ಕಟ್ಟಿದವರು ಕರ್ನಾಟಕದವರು ಎಂದು ಹೇಳಬಹುದು. ಈ ರೀತಿಯಾಗಿ 100-150 ವರ್ಷಗಳ ಹಿಂದಿನ ಇತಿಹಾಸವನ್ನು ಇಲ್ಲಿ ಹೇಳುವ ವಾದನವನ್ನು ನಾವು ಒಪ್ಪುವುದಿಲ್ಲ. ಹಾಗೆ ಔರಂಗಬಾದ್ ಜಿಲ್ಲೆಯಲ್ಲಿ ಒಂದು ತಾಲ್ಲೂಕಿಗೆ ಕನ್ನಡ ಎಂದು ಹೆಸರು ಇದೆ, ಅದು ನಮಗೆ ಬರಬೇಕು ಎಂದು ಹೇಳುವುದು ಸರಿಯಾಗಿರುತ್ತದೆಯೇ? ಯಾವಾಗ ಒಂದು ಬಾರಿ ಭಾಷಾವಾರು ಪ್ರಾಂತಗಳೆಂದು ಅಸ್ತಿತ್ವಕ್ಕೆ ಬಂದಮೇಲೆ ಆ ಭಾಗಕ್ಕೆ ಇಂತಹ ಭಾಗಗಳು ನಮಗೇ ಬೇಕು ಎಂದು ಕೇಳುವುದು ಸರಿ ಕಾಣುವುದಿಲ್ಲ. ಹಾಗೆ ಹಿಸ್ಟಾರಿಕಲ್ ಫ್ಯಾಕ್ಟ್‌ಗಳನ್ನು ತೆಗೆದುಕೊಳ್ಳುವುದಾದರೆ ಈಗ ಸಾಂಗ್ಲಿ ಜಿಲ್ಲೆ ತೆಗೆದುಕೊಂಡು ನೋಡಿದರೆ ಅದು ನಮ್ಮ ಕರ್ನಾಟಕದ ಭಾಗಕ್ಕೆ ಬರಬೇಕಾಗುತ್ತದೆ. ಹಾಗೆ ಮಂಗಳೂರಿನ ಕೆಲವು ಭಾಗಗಳು ಇಲ್ಲಿಗೆ ಬಂದಿವೆ, ಇವರಲ್ಲಿ

---

* ವಿಧಾನಸಭೆಯ ನಡವಳಿಕೆಯ ದಿನಾಂಕ 20ನೇ ಜೂನ್, 1964

ಎಲ್ಲೂರು ಕೊಂಕಣಿ ಭಾಷೆ ಮಾತಾಡುತ್ತಾರೆ. ಅದು ಮರಾಠಿ ಭಾಷೆಯ ಒಂದು ಉಪಭಾಷೆ ಎಂದು ಆ ಪ್ರದೇಶಗಳು ಮಹಾರಾಷ್ಟ್ರಕ್ಕೆ ಸೇರಬೇಕೆಂದು ಹೇಳುವುದು ಸರಿಯಾಗುವುದಿಲ್ಲ. ಇವು ಹಿಂದಿನಿಂದ ಬಂದಿವೆ, ಹಿಂದೆ ಉತ್ತರ ಹಿಂದೂಸ್ತಾನದಲ್ಲಿ ಬ್ರಿಟಿಷರು ಆಳುತ್ತಿದ್ದಾಗ ಒಂದು ರೀತಿಯಾದ ಆಡಳಿತ ಪದ್ಧತಿ ಇತ್ತು. ಆಗಿರುವ ಶಾಲೆಗಳೇ ಒಂದು ತರಹದಾಗಿದ್ದುವು. ನಮಗೆ ಶಾಲೆಗಳಲ್ಲಿ ಗುರುಗಳು ಪಾಠ ಹೇಳಿಕೊಟ್ಟವರು ಎಂದ ಹೇಗೆ ಗೌರವ ಇರುತ್ತದೋ ಆದರಂತೆ ಹಿಂದಿನಿಂದ ಆಡಳಿತ ಮಾಡುತ್ತಿದ್ದ ಬ್ರಿಟಿಷರಲ್ಲಿ ಒಂದು ತರಹದ ಗೌರವದಿಂದ ನಡೆದುಕೊಂಡು ಬರುತ್ತಿದೆ. ಆದರಿಂದ ನಮ್ಮ ದೇಶಕ್ಕೆ ಕರ್ನಾಟಕದವರು ಅರ್ಧದಷ್ಟು ಬರಬೇಕೆಂದು ಹೇಳುವುದು ಮಹಾರಾಷ್ಟ್ರದವರು ಅರ್ಧ ಭಾಗದಷ್ಟು ಬರಬೇಕೆಂದು ಹೇಳುವುದು ಏಕೆಂದರೆ ಇವರೆಲ್ಲ ಮಾರಾಠಿ ಭಾಷೆ ಮಾತನಾಡುವ ಜನ ಎಂದು ಹೇಳುವುದು ಸರಿಯಲ್ಲ. ನೂರು ನೂರೈವತ್ತು ವರ್ಷಗಳ ಹಿಂದಿನಿಂದ ಬ್ರಿಟಿಷರು ಆಳುತ್ತಿದ್ದಂತೆ ಮಾಡಿದುದನ್ನು ಈಗಲೂ ಮುಂದುವರಿಸಿಕೊಂಡು ಹೋಗಬೇಕೆಂದು ಹೇಳುವ ವಾದವನ್ನು ನಾವು ಒಪ್ಪುವುದಿಲ್ಲ. ಈ ರೀತಿ ಮೇಲಿಂದ ಮೇಲೆ ಪ್ರತಿ ಸಾರಿಯೂ ಇಲ್ಲಿ ಹೀಗೆ ನಿರ್ಣಯಗಳನ್ನು ತಂದು ಹೇಳುವುದನ್ನೂ ನಾನು ಒಪ್ಪುವುದಿಲ್ಲ. ಈಗಾಗಲೇ ಮಾನ್ಯ ಸದಸ್ಯರಾದ ಶ್ರೀಮಾನ್ ವಾಲಿ ಚೆನ್ನಪ್ಪನವರು ಹೇಳಿದಂತೆ ಈ ತರಹ ಹೋರಾಡುವುದು ಬೇಡ, ಇಷ್ಟವಿದ್ದರೆ ಈ ಪ್ರಾಂತದಲ್ಲಿ ಇರಬಹುದು ಇಲ್ಲದೆ ಇದ್ದರೆ ಈ ಪ್ರಾಂತವನ್ನು ಬಿಟ್ಟು ಹೋಗಬಹುದು. ಆದರೆ ನಮ್ಮ ಶ್ರೀ ವಾಲಿ ಚೆನ್ನಪ್ಪನವರು ಹೇಳಿದ ಹಾಗೆ ನಾನು ಅವರಿಗೆ ಟಿಕೆಟ್ ಕೊಟ್ಟು ಕಳುಹಿಸಬೇಕೆಂಬುದನ್ನು ಒಪ್ಪುವುದಿಲ್ಲ. ನಾನು ಹಾಗೆ ಹೇಳುವುದೂ ಇಲ್ಲ. ಅವರು ನಮ್ಮಲ್ಲೇ ಖಾಯಂ ಆಗಿರಲಿ. ಈ ದಿವಸ ನಾನು ಹೇಳುವುದಾದರೆ ಕಾಂಗ್ರೆಸ್ಸಿನವರು ಇಲ್ಲಿ ಇಷ್ಟು ಮಾತನಾಡುತ್ತಾರೆ. ಅವರು ಈ ದಿವಸ ಇಲ್ಲಿ ಮಂತ್ರಿಗಳಾಗಿರಬಹುದು, ಇಲ್ಲವೇ ಉಪಮಂತ್ರಿಗಳಾಗಿರಬಹುದು, ಮತ್ತು ಈ ಹಿಂದೆ ಮುಂಬೈ ಅಸೆಂಬ್ಲಿಯಲ್ಲಿ ನಮ್ಮ ಸದಸ್ಯರಾಗಿದ್ದ ಕನ್ನಡಿಗರು ಶ್ರೀ ದೊಡ್ಡಮೇಟಿಯವರು ಸಹಿತ ಆ ನಮ್ಮ ಸೋಲಾಪುರವನ್ನು ಕರ್ನಾಟಕಕ್ಕೆ ಉಳಿಸಿಕೊಳ್ಳಲು ಯಾರೇನು ಮಾಡಿದ್ದಾರೆ? ಈ ದಿವಸ ಕರ್ನಾಟಕಕ್ಕೆ ಬರಬೇಕಾದ ಮುಖ್ಯವಾದ 4 ಜಿಲ್ಲೆಗಳು ಕರ್ನಾಟಕವನ್ನು ಬಿಟ್ಟು ಮುಂಬೈಗೆ ಸೇರಿವೆ. ಈ ಬಗ್ಗೆ ಇಲ್ಲಿಯ ಕನ್ನಡಿಗರೇನು ಮಾಡಿದ್ದಾರೆ? ಅವುಗಳನ್ನೇಕೆ ಹಾಗೆ ಬಿಟ್ಟುಕೊಟ್ಟರು? ಇದನ್ನೆಲ್ಲಾ ನೋಡಿದರೆ ಕಳೆದ ನಮಗೆ ಸ್ವಾತಂತ್ರ್ಯ ಬಂದ ತರುವಾಯ, 5-10 ವರ್ಷಗಳಿಂದ ಈ ಭಾಷಾವಾರು ಪಾಂತ್ರಗಳ ಬಗ್ಗೆ ನಮ್ಮ ಕಾಂಗ್ರೆಸ್ಸಿನವರೆಷ್ಟು ದುಡಿಯಬೇಕಾಗಿತ್ತೋ ಅಷ್ಟನ್ನು ದುಡಿದಿಲ್ಲವೆಂದು ನಾನು ಖಚಿತವಾಗಿ ತಿಳಿಸಬೇಕಾಗಿದೆ. ಈ ದಿವಸ ಕರ್ನಾಟಕದ ವಿರೋಧಿಗಳು ನಮ್ಮ ಕನ್ನಡ ನಾಡಿಗೆ ಬಹಳ ಅನ್ಯಾಯ ಮಾಡಿದ್ದಾರೆ, ಕನ್ನಡ ನಾಡನ್ನು ಕತ್ತರಿಸಿ ತುಂಡರಿಸಿದ್ದಾರೆ. ಕನ್ನಡ ನಾಡಿಗೆ ಹೀಗೆ ತುಂಬಾ ಅನ್ಯಾಯ ಮಾಡಿದ್ದಾರೆ. ಇಂಥ ಒಂದು ಅನ್ಯಾಯ ಸುಮಾರು ಇಲ್ಲಿ 300 ವರ್ಷಗಳಿಂದಲೂ ಕನ್ನಡ ನಾಡಿಗೆ ಒಂದೇ ಸಮನೆ ಆಗುತ್ತಿದೆ.

ಆದರೂ ಕನ್ನಡಿಗರು ಅಷ್ಟು ಉಗ್ರವಾಗಿ ಮಾತನಾಡುತ್ತಿಲ್ಲ. ಹೀಗಿರುವಾಗ ನಮ್ಮ ಮಹಾರಾಷ್ಟ್ರ ಮಿತ್ರರು ಇಷ್ಟು ಫೆನಾಟಿಕ್ಕಾಗಿ ಮಾತನಾಡಬಾರದೆಂದು ಹೇಳುತ್ತೇನೆ. ಆದರೆ ಇದರಲ್ಲೊಂದು ವಿಚಾರ ಯಾವ ಒಂದು ಭಾಷೆಯನ್ನು ಮಾತನಾಡತಕ್ಕ ಜನರು 20 ಇದ್ದರೂ ಸಾಕು, ಅಂಥವರಿಗೆ ಅಗತ್ಯವಾಗಿ ಬೇಕಾದ ವಿದ್ಯಾ ಸೌಕರ್ಯಗಳನ್ನು ಈ ಸರ್ಕಾರ ಒದಗಿಸಿಕೊಡಲೇಬೇಕು. ಈ ವಿಚಾರದಲ್ಲಿ ನಮ್ಮ ಮಹಾರಾಷ್ಟ್ರದ ಮಿತ್ರರು ಆ ಬಾರ್ಡರಿನಲ್ಲಿ ಇರತಕ್ಕ ಮಹಾರಾಷ್ಟ್ರೀಯರಿಗೆ ಕೆಲವು ತೊಂದರೆಗಳಾಗುತ್ತಿವೆ ಎಂದು ಹೇಳುತ್ತಿದ್ದಾರೆ. ಹೀಗೆ ಅವರು ಹೇಳುತ್ತಿರುವುದು ನಿಜವಾಗಿದ್ದ ಪಕ್ಷದಲ್ಲಿ ನಮ್ಮ ಸರ್ಕಾರದವರು ದಯೆಯಿಟ್ಟು ಸರ್ವ ರೀತಿಯಲ್ಲೂ ಯಾವ ತೊಂದರೆಗಳೂ ಅವರಿಗುಂಟಾಗದಂತೆ ನೋಡಿಕೊಳ್ಳಬೇಕೆಂದು ಮನವಿ ಮಾಡಿಕೊಳ್ಳುತ್ತೇನೆ. ಹಾಗೂ ಅವರಿಗೆ ಬೇಕಾಗಿರತಕ್ಕ ಸೌಕರ್ಯಗಳನ್ನೆಲ್ಲಾ ಇವರು ಒದಗಿಸಿಕೊಡಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇನೆ. ಆದರೆ ಅವರು ಹೇಳುತ್ತಿರುವಂತೆ ಈ ವಿಚಾರದಲ್ಲಿ ವಿಲೇಜ್ ಯೂನಿಟ್ಟುಗಳನ್ನು ಮಾಡಬೇಕೆಂಬುದು ಖಂಡಿತ ಸಾಧ್ಯವಿಲ್ಲದ ಮಾತು. ಇದನ್ನಿನ್ನೂ ಬೇಕಾಗಿದ್ದರೆ ತಾಲ್ಲೂಕ್ ಯೂನಿಟ್ಟಿನಲ್ಲಿ ನಡೆಸಬಹುದು. ಆದರೆ ಈ ವಿಚಾರದಲ್ಲಿ ನಮ್ಮ ನಾಯಕರಾದ ಶ್ರೀ ಎಸ್. ನಿಜಲಿಂಗಪ್ಪನವರು ನಾಳೆ ಹೇಗೂ ಡೆಲ್ಲಿಗೆ ಹೋಗತಕ್ಕದವರಿದ್ದಾರೆ ಆ ವೇಳೆಯಲ್ಲಿ ಈ ವಿಚಾರವನ್ನು ಅಲ್ಲಿ ಚರ್ಚೆ ಮಾಡಿ ಇನ್ನು ಮೇಲೆ ಈ ಲಿಂಗ್ವಿಸ್ಟಿಕ್ ಬೇಸಿನ ಮೇಲೆ ಹಳ್ಳಿಗಳ ವರ್ಗಾವಣೆಯಿಲ್ಲ ಎಂಬುದನ್ನಾದರೂ ಖಚಿತ ಮಾಡಿ ಇಲ್ಲವೇ ಯಾವ ಮಟ್ಟದವರೆಗೆ ಇದನ್ನು ಮಾಡಬಹುದೆಂದು ಅಲ್ಲಿ ಒಂದು ತೀರ್ಮಾನಕ್ಕೆ ಬರುತ್ತೀರೋ ಆ ಮಟ್ಟದವರೆಗಾದರೂ ಮಾಡಿ. ಈ ವಿಚಾರದಲ್ಲಿ ಮುಖ್ಯ ಮಂತ್ರಿಗಳು ಏನಾದರೊಂದು ತೀರ್ಮಾನಕ್ಕೆ ಬರುವುದು ಉತ್ತಮ. ಇಲ್ಲವಾದರೆ ಸುಮ್ಮನೆ ನಾವು ನಮಗೆ ಇಂತಿಂಥಾ ರಾಜ್ಯದಲ್ಲಿ ಇಷ್ಟಿಷ್ಟು ಬರಬೇಕೆಂದು ನಾವೂ ಇತರರು ನಮಗೆ ಮೈಸೂರು ರಾಜ್ಯದಲ್ಲಿ ಇಂತಿಂಥ ಭಾಗಗಳು ಬರಬೇಕೆಂದು ಅವರೂ ಕಿತ್ತಾಡಬೇಕಾಗುವುದು. ಇನ್ನು ಮುಂದಕ್ಕೆ ಇನ್ನಾದರೂ ಈ ಪ್ರಶ್ನೆಯೆನ್ನೇ ಎತ್ತಕೂಡದು ಎಂತಲಾದರೂ ಒಂದು ಕೊನೆಯ ತೀರ್ಮಾನ ತಿಳಿಸಿಬಿಡುವುದುತ್ತಮ. ಎಲ್ಲಿಯವರೆಗೆ ಈ ಪ್ರಶ್ನೆಯನ್ನು ಹಾಗೇ ಮುಂದುವರಿಸಿಕೊಂಡು ಬರುತ್ತಿರೋ ಅಲ್ಲಿಯವರೆಗೆ ಈ ತಲೆನೋವು ಇದ್ದುದೇ. ಈ ಸಾರ್ತಿಯಾದರೂ ಶ್ರೀಮಾನ್ ನಿಜಲಿಂಗಪ್ಪನವರು ಡೆಲ್ಲಿಗೆ ಹೋದಾಗ ಈ ಪ್ರಶ್ನೆಯನ್ನು ತೀರ್ಮಾನ ಮಾಡಿಕೊಂಡೇ ಬರಬೇಕೆಂದು ಅವರಲ್ಲಿ ನಾನು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ನಮ್ಮ ಮಹಾರಾಷ್ಟ್ರದ ಸ್ನೇಹಿತರು ಕೇಳುತ್ತಿರುವಂತೆ ಆ ಕಾಸರಗೋಡಿನ ಜನರೂ ಮತ್ತು ಆಲೂರು, ಆದೋನಿ, ರಾಯದುರ್ಗ, ಅಲಂರೂಪ ಮತ್ತು ಗದ್ವಾಲ ಈ ಪ್ರಾಂತ್ಯದ ಜನರು ಮೈಸೂರಿಗೆ ಬರಬೇಕೆಂದಿದ್ದಾರೆ. ಆದರೆ ನಮ್ಮ ಮಹಾರಾಷ್ಟ್ರ ಮಿತ್ರರು ಇಲ್ಲಿಯೇ ಇರಬೇಕೆಂಬುದು ನನ್ನ ಆಶೆ. ಅವರಿಗೆ ಬೇಕಾದ ಫೆಸಿಲಿಟೀಸನ್ನು ಸರ್ಕಾರದವರು ಕಲ್ಪಿಸಿ ಕೊಡಬೇಕು. ಹಾಗೆ ಅದನ್ನು ಸರ್ಕಾರದವರು ಮಾಡಿಕೊಡದಿದ್ದರೆ ನಾನೂ ಸಹಾ ನಮ್ಮ ಮಹಾರಾಷ್ಟ್ರ ಮಿತ್ರರ

ಜೊತೆಯಲ್ಲಿ ಆ ಬಗ್ಗೆ ಹೋರಾಟ ನಡೆಸುವುದಕ್ಕೂ ಸಿದ್ಧನಿರುವೆನು. ಆದರೆ ನಮ್ಮ ಮಿತ್ರರು ಇಷ್ಟು ಫೆನಾಟಿಕ್ಕಾಗಿ ಮಾತನಾಡಬಾರದು. ಸರ್ಕಾರ ತೀರ್ಮಾನಕ್ಕೆ ಬಂದಲ್ಲಿ ನಮಗೆ ಬರುವುದು ನಮಗೆ ಬರಲಿ, ಅವರಿಗೆ ಹೋಗತಕ್ಕದ್ದು ಅವರಿಗೆ ಹೋಗಲಿ. ಹೇಗಾದರೂ ಒಂದು ರೀತಿಯಲ್ಲಿ ಇದನ್ನು ತೀರ್ಮಾನ ಮಾಡಲೇಬೇಕೆಂದು ಹೇಳಿ ನಾನು ನನ್ನ ಮಾತುಗಳನ್ನು ಮುಗಿಸಿ, ನನಗಿಷ್ಟು ಮಾತನಾಡಲು ಅವಕಾಶ ಮಾಡಿಕೊಟ್ಟ ಅಧ್ಯಕ್ಷರಿಗೆ ನನ್ನ ವಂದನೆಗಳನ್ನರ್ಪಿಸಿ ಕುಳಿತುಕೊಳ್ಳುತ್ತೇನೆ.

## (19) ಕಾರ್ಮಿಕರ ಸಮಸ್ಯೆಗಳ ವಿಧೇಯಕ *

ಸ್ವಾಮಿ, ಅಧ್ಯಕ್ಷರೆ, ಮಾನ್ಯ ಮಂತ್ರಿಗಳು ಈ ವಿಧೇಯಕವನ್ನು ಮಂಡಿಸುತ್ತ ಒಂದು ಒಳ್ಳೆಯ ಚಿತ್ರವನ್ನು ಕೊಟ್ಟಿದ್ದರು. ಆದರೆ ಈ ಹೊತ್ತುಕುಗ್ಗಿ ಹೇಳಿದ್ದಾರೆ. ನಾನು ಸಮಸ್ಯೆಗಳನ್ನು ನೋಡಿದ್ದೇನೆ. ಕೆಲಸಗಾರರು ಬಹಳ ಕೆಟ್ಟ ಸ್ಥಿತಿಯಲ್ಲಿದ್ದಾರೆ, ಮಾಲೀಕರು ಕೆಲಸಗಾರರನ್ನು ಶೋಷಣೆ ಮಾಡುತ್ತಿದ್ದಾರೆ ಎಂದು ಅವರು ಹೇಳಿದರು. ಆದರೆ ಈ ಹೊತ್ತು, ಪರಿಸ್ಥಿತಿಯ ಅಥವಾ ಸನ್ನಿವೇಶಗಳ ಒತ್ತಡದಿಂದ ನಿರ್ವಾಹವಿಲ್ಲದೆ ಅಷ್ಟು ಒಳ್ಳೆಯ ಭಾವನೆಯನ್ನು ಹೊಂದಿಲ್ಲವೆಂದು ಎನಿಸುತ್ತದೆ. ಮಾನ್ಯ ಮಂತ್ರಿಗಳು ಕಾರ್ಮಿಕರ ವಿಷಯದಲ್ಲಿ ಶ್ರದ್ಧೆ ವಹಿಸಿ ಅವರ ಸಮಸ್ಯೆಗಳನ್ನು ಬಗೆಹರಿಸುತ್ತಿದ್ದಾರೆ. ಮೂರು ನಾಲ್ಕು ಜನ ಮಂತ್ರಿಗಳು ಕಾರ್ಮಿಕರಿಗೆ ಹಿತವಾಗುವಂತೆ ಮಾಡಬೇಕೆಂದಿಚ್ಚಿಸಿದರೂ ಕೂಡ ಕೊನೆಗೆ ಅದು ತಮ್ಮಿಂದ ಸಾಧ್ಯವಿಲ್ಲ, ಎಷ್ಟೋ ಕಾನೂನುಗಳು ಕೇಂದ್ರ ಸರಕಾರದ ಕೈಲಿದೆ, ನಮ್ಮ ಸಂಸ್ಥೆಗೆ ನೀವು ಸೇರಿರುವುದರಿಂದ ನಿಮ್ಮ ಇಚ್ಛೆಯಂತೆ ಮಾಡುವುದಕ್ಕೆ ಬಿಡುವುದಿಲ್ಲವೆಂದು ಸಂಸ್ಥೆಯವರು ಹೇಳಿದುದು ನಮ್ಮ ಶ್ರೀಮಾನ್ ದೇವರಾಜ ಅರಸರ ತಲೆಗೂ ಬಂದಿರುತ್ತದೆಂದು ಕಾಣುತ್ತದೆ. ನಾನು ಹೆಸರು ಹೇಳುವುದಿಲ್ಲ. ಈ ವಿಧೇಯಕವನ್ನು ಸ್ವಾಗತಿಸಬೇಕೆಂದು ಎನಿಸುತ್ತದೆ. ದೇವರಾಜ ಅರಸನವರು ಇದೇ ಸ್ಥಾನದಲ್ಲಿ ಉಳಿದಿದ್ದರೆ ಈ ಹೊತ್ತಲ್ಲ ನಾಳೆಯಾದರೂ ಇದರಿಂದ ಲಾಭ ಸಿಕ್ಕಬಹುದೆಂದು ನಾವು ಇದನ್ನು ಸ್ವಾಗತಿಸಬೇಕೇ ವಿನಾ ಸ್ವಾಗತಿಸತಕ್ಕದ್ದು ಇದರಲ್ಲಿ ಯಾವುದೂ ಇಲ್ಲ. ಮೊದಲಿದ್ದ 29ನೇಯ ಕ್ಲಾಜನ್ನು ಹೊಡೆದು ಹಾಕಿದ ಮೇಲೆ ಈ ಕಾನೂನಿನಿಂದ ಏನೂ ಪ್ರಯೋಜನವಿಲ್ಲ ಎನಿಸುತ್ತದೆ. ಬೀಡಿ ಕಾರ್ಖಾನೆಗಳು ಮಾಲೀಕರಷ್ಟೇ ಅಲ್ಲದೆ ಕೆನರಾ ಛೇಂಬರ್ ಆಫ್ ಕಾಮರ್ಸ್ ಮತ್ತು ಮೈಸೂರು ಛೇಂಬರ್ ಆಫ್ ಕಾಮರ್ಸ್‌ನ ಪ್ರತಿನಿಧಿಗಳು ಬಂದು ಮನವಿ ಮಾಡಿಕೊಂಡಿದ್ದಾರೆ. ಮಂತ್ರಿಗಳು ಆ ಪ್ರಭಾವಕೊಳಪಟ್ಟಿದ್ದಾರೆಂದು ಮಾತ್ರವಲ್ಲ. ಇಡೀ ಸರಕಾರದ ಮೇಲೆ ಅವರು ಪ್ರಭಾವ ಬೀರಿದುದರಿಂದ ಹೀಗೆ ಆ ಕ್ಲಾಜನ್ನು ತೆಗೆದು ಹಾಕುವುದಕ್ಕೆ ಕಾರಣವಾಗಿದೆ ಎಂದು ಕಾಣುತ್ತದೆ. ಆ ಕ್ಲಾಜನ್ನು ತೆಗೆದು ಹಾಕಿದ ಮೇಲೆ ಇಂತಹ ಕಾನೂನಿನಿಂದೇನು ಪ್ರಯೋಜನ? ಒಂದು ಬೀಡಿ ಕಾರ್ಖಾನೆಯೊಳಗೆ ಮೂವತ್ತು ಜನ ಕೆಲಸಗಾರರಿರುವುದಿಲ್ಲ, ಆದರೆ ಹೊರಗಡೆ ಐನೂರು ಜನರಿರುತ್ತಾರೆ. ಬೇರೆ ಕಡೆಗಳಲ್ಲಿಯೂ ಇದೇ ಪರಿಸ್ಥಿತಿಯಿದೆ. ಮುಸ್ಲಿಮ್ ಹೆಣ್ಣುಮಕ್ಕಳು ಘರ್ದಾದಲ್ಲಿರುತ್ತಾರೆ, ಮನೆಯಲ್ಲಿರುತ್ತಾರೆ, ಎಂದು ಹೇಳಿದರು, ಆದರೆ ಅವರೂ ಕಾರ್ಖಾನೆಗೆ ಬರುತ್ತಾರೆ. ಸಾವಿರ ಬೀಡಿ ಕಟ್ಟಿದರೆ ಇಷ್ಟು ಪೈಸೆ ಎಂದು ಅವರು ಗೊತ್ತು ಮಾಡಿರುತ್ತಾರೆ, ಇಂಥವರು ಯಾರೂ ಕಟ್ಟುವುದಿಲ್ಲ. ಕೆಲವರು ಮಧ್ಯಮ ತರಗತಿಯ ಜನರು ಕೆಲಸವಿಲ್ಲದಿರುವವರು ಸಿನಿಮಾಕ್ಕೆ ಹೋಗುವುದಕ್ಕೆ, ಸೀರೆ ಪಂಚೆ ಕೊಂಡುಕೊಳ್ಳುವದಕ್ಕೆ ಹಣ ಸಿಕ್ಕುತ್ತದೆಂದು ಕಮೀಷನ್ ಪಡೆಯಲು ಬಡವರನ್ನು ಹಿಡಿದು ಈ ಕೆಲಸವನ್ನು ಅವರಿಗೆ

* ವಿಧಾನಸಭೆಯ ನಡವಳಿಕೆಯ ದಿನಾಂಕ 22ನೇ ಜೂನ್, 1964

ಹಚ್ಚುತ್ತಾರೆ. ಹೀಗಿರುವಾಗ ಈ ಕ್ಲಾಜನ್ನು ಹೊಡೆದು ಹಾಕಿರುವುದರಿಂದ ಏನೂ ಪ್ರಯೋಜನವಾಗುವುದಿಲ್ಲ.

ಕತ್ತರಿಸುವುದು ಮತ್ತು ತೋಯಿಸುವುದನ್ನೂ ಕಾರ್ಖಾನೆಯಲ್ಲಿ ಮಾಡಬೇಕೆಂದರೆ ಮಾಲೀಕ ಕಾರ್ಮಿಕರನ್ನು ಶೋಷಣೆ ಮಾಡುತ್ತಾನೆ. ಹೆಚ್ಚು ಕಾಲವನ್ನು ಕೊಟ್ಟಿದ್ದೀರಿ.

ಡಿ. ದೇವರಾಜ ಅರಸ್: ಹಾಗಾಗುವುದಿಲ್ಲ.

**ಗಂಗಾಧರ ನಮೋಶಿ:** ಇದರ ಅರ್ಥವೇನು ಎಂಬುದು ಗೊತ್ತಾಗುವುದಿಲ್ಲ. ಮದ್ರಾಸ್, ಕೇರಳ ರಾಜ್ಯಗಳಲ್ಲಿ ಈ ಕಾನೂನನ್ನು ಪಾಸು ಮಾಡಿ ಇಟ್ಟುಕೊಂಡಿದ್ದಾರೆಂದು ಹೀಗೆ ಈ ಮಸೂದೆ ತರಲಾಗಿದೆಯೇ? ಈ ಮಸೂದೆ ಇಲ್ಲಿ ಪಾಸಾದರೂ ಕೂಡ ಎಷ್ಟು ದಿವಸ ಕಾನೂನು ಜಾರಿಗೆ ತರದೆ ಹಾಗೇ ಕುಳಿತುಕೊಳ್ಳುತ್ತೀರೋ ಏನೋ? ಆ ರೀತಿ ಮಾಡದೆ ಆದಷ್ಟೆ ಬೇಗ ಜಾರಿಗೆ ತರಬೇಕೆಂದು ನಾನು ಹೇಳುತ್ತೇನೆ. ಹೋದ ವರ್ಷ ಸೆಪ್ಟೆಂಬರ್ ಅಧಿವೇಶನದಲ್ಲಿ ಈ ಮಸೂದೆ ಬಂದಿದೆ. ಎರಡುದಿವಸ ಸಭೆಯಲ್ಲಿ ಚರ್ಚೆಯಾಗಿದೆ. ಸೆಲೆಕ್ಟ್ ಕಮಿಟಿಯವರು ಇದನ್ನು ಪರಿಶೀಲನೆ ಮಾಡುವುದನ್ನು ನಾನು ಸ್ವಾಗತಿಸುತ್ತೇನೆ. ಆದರೂ ಕೂಡ ಈ ಕಾನೂನನ್ನು ಯಾವ ದಿವಸ ಜಾರಿಗೆ ಕೊಡುತ್ತೀರಿ ಎಂಬುದನ್ನು ಈ ಸಮಯದಲ್ಲಿ ಸ್ಪಷ್ಟಪಡಿಸಬೇಕು ಎಂದು ಕೇಳಿಕೊಳ್ಳುತ್ತೇನೆ. ಮಾನ್ಯ ಮಂತ್ರಿಗಳು ದಿಲ್ಲಿಗೆ ಹೋಗಿ ಕೇಂದ್ರ ಸರಕಾರಕ್ಕೆ ಬಹಳ ಕಳಕಳಿಯಿಂದ ಹೇಳಬೇಕು. ಇಡೀ ದೇಶಕ್ಕೆ ಅನ್ವಯಿಸುವ ಆಕ್ಟ್ ಮಾಡಬೇಕೆಂದು ತಮಗೆ ತಿಳಿಸಬೇಕು. ಇಲ್ಲದಿದ್ದರೆ ಇಷ್ಟು ದಿವಸಗಳಲ್ಲಿ ಜಾರಿಗೆ ತರುತ್ತೇವೆ ಎಂಬುದನ್ನು ಈಗ ಹೇಳಬೇಕು.

"ಅಭ್ಯರ್ಥಿಯ ಇಚ್ಛೆಯ ಪ್ರಕಾರ, ಈ ಕಾಯ್ದೆಯ ಪ್ರಕಾರ, ಒಮ್ಮೆ ನೀಡಲ್ಪಟ್ಟ ಲೈಸೆನ್ಸ್ ಮೂರು ವರ್ಷಗಳ ಅಥವಾ ಒಂದು ವರ್ಷದವರೆಗೆ ಊರ್ಜಿತದಲ್ಲಿರುತ್ತದೆ. ಅದನ್ನು ಪ್ರತಿ ಮೂರು ವರ್ಷಗಳ ಅಥವಾ ಒಂದು ವರ್ಷದಲ್ಲಿ ನವೀಕರಿಸಬಹುದು."

ಇದನ್ನು ಸ್ಪಷ್ಟಪಡಿಸಬೇಕೆಂದು ಕೇಳಿಕೊಳ್ಳುತ್ತೇನೆ.

ಸ್ವಾಮಿ, ನಾನು, ಈ ತಿದ್ದುಪಡಿಯನ್ನು ವಿರೋಧಿಸುತ್ತೇನೆ. ಬೀಡಿ ಕಟ್ಟುವ ಹೆಣ್ಣು ಮಕ್ಕಳು ಬೀಡಿ ಕಾರ್ಖಾನೆಗೆ ಬಂದು ಕೆಲಸ ಮಾಡಬೇಕಾದರೆ ಅವರಿಗೆ ಮುಂಜಾನೆ ಸ್ವಲ್ಪ ಆರಾಮ ಬೇಕು. ಸಾಯಂಕಾಲದ ವೇಳೆ ಅವರು ಕಟ್ಟಿದ ಬೀಡಿಗಳ ಲೆಕ್ಕವನ್ನು ಕೊಡಬೇಕಾದರೆ ಸ್ವಲ್ಪ ವೇಳೆ ಬೇಕಾಗುತ್ತದೆ. ನೂರು ಜನ ಕೆಲಸಗಾರರಿದ್ದರೆ ಎಲ್ಲರ ಲೆಕ್ಕವನ್ನು ತೆಗೆದುಕೊಳ್ಳಲು ಬಹಳ ಕಾಲ ಬೇಕಾಗುತ್ತದೆ. ಏಳು ಗಂಟೆವರೆಗೂ ಎಂದು ಈ ಬಿಲ್‌ನಲ್ಲಿರುವುದರಿಂದ ಏನೂ ಬಾಧಕವಾಗುವುದಿಲ್ಲ. ಹೆಣ್ಣು ಮಕ್ಕಳಿಗೆ ಬೇಗ ಹೋಗಬೇಕಾದ ಕೆಲಸವಿದ್ದರೆ ಅವರ ಮಕ್ಕಳನ್ನು ಅಥವಾ ಹುಡುಗರನ್ನು ಲೆಕ್ಕ ಕೊಡುವುದಕ್ಕೆ ಬಿಟ್ಟು ಹೆಣ್ಣು ಮಕ್ಕಳು ಮನೆಗೆ ಹೋಗಬಹುದು. ಆದುದರಿಂದ ಈ ತಿದ್ದುಪಡಿಯ ಅವಶ್ಯಕತೆ ಇಲ್ಲವೆಂದು ಹೇಳುತ್ತೇನೆ.

## (20) ಆಹಾರ ಧಾನ್ಯಗಳ ಬೆಲೆ ಏರಿಕೆಯ ಬಗ್ಗೆ*

ಸ್ವಾಮಿ, ಈ ಸರಕಾರದ ನೀತಿಯಿಂದಲೇ ಈ ಹೊತ್ತು ನಮ್ಮ ದೇಶದಲ್ಲಿ ಆಹಾರ ಧಾನ್ಯ ಮತ್ತು ಮನುಷ್ಯನಿಗೆ ಅವಶ್ಯಕವಾಗಿರುವ ಎಲ್ಲ ಪದಾರ್ಥಗಳ ಬೆಲೆಗಳು ಏರಿರುತ್ತವೆ. ಈ ವಿಚಾರ ಬಂದಾಗೆಲ್ಲ ಕೇಂದ್ರ ಸರಕಾರ ರಾಜ್ಯ ಸರಕಾರದ ಮೇಲೆ ಹೇಳುವುದು, ರಾಜ್ಯ ಸರಕಾರ ಕೇಂದ್ರ ಸರಕಾರದ ಮೇಲೆ ಜವಾಬ್ದಾರಿ ಹೊರಿಸುವುದು, ಹೀಗೆ ಮಾಡಿಕೊಂಡು ಕೂಡುತ್ತಿದ್ದಾರೆ. ಹಿಂದೆ ಬ್ರಿಟಿಷರ ಕಾಲದಲ್ಲಿ ಇಂತಹ ಸಂದರ್ಭಗಳಲ್ಲಿ ಬೇರೆಯವರ ಮೇಲೆ ಹಾಕಿ ಪಾರಾಗಬೇಕೆಂದಿದ್ದರು. ಅದೇ ನೀತಿಯನ್ನು ಈಗ ನಮ್ಮ ಸರಕಾರದವರು ಅನುಸರಿಸುತ್ತಿದ್ದಾರೆ. ಪಾರ್ಲಿಮೆಂಟಿನಲ್ಲಿ ಈ ಬಗ್ಗೆ ಪ್ರಶ್ನೆ ಹಾಕಿದರೆ, ನಾವೇನು ಮಾಡೋಣ ಆಹಾರ ಧಾನ್ಯಗಳನ್ನು ರೈತರು ಒಳ್ಳೆಯ ರೀತಿಯಲ್ಲಿ ಬೆಳೆಯಬೇಕು, ನಾವೇನೂ ನೇರವಾಗಿ ಮಾಡುವ ಹಾಗಿಲ್ಲ, ರಾಜ್ಯ ಸರಕಾರ ಹೆಚ್ಚು ಬೆಳೆದು ತಂದರೆ ನಾವು ಸಹಾಯ ಮಾಡುತ್ತೇವೆ ಎಂದು ಹೇಳುತ್ತಾರೆ. ಹೆಚ್ಚು ಬೆಳೆಯುವುದಕ್ಕೆ ಬೇಕಾದಷ್ಟು ಸೌಲಭ್ಯ ಬೇಕು, ನೀರಾವರಿ ಹೆಚ್ಚು ಮಾಡಬೇಕು ಎಂದು ಕೇಳಿದರೆ ನಮ್ಮಲ್ಲಿ ಹಣವಿಲ್ಲ, ಕೇಂದ್ರ ಸರಕಾರದವರು ಕೊಟ್ಟರೆ ನಾವು ಏರ್ಪಾಡು ಮಾಡುತ್ತೇವೆ ಎಂದು ಹೇಳುತ್ತಾರೆ. ಏಕೆ ಹೀಗಾಗುತ್ತದೆ ಎಂದರೆ ಸರಕಾರಕ್ಕೆ ಒಂದು ಕಟ್ಟು ನಿಟ್ಟಾದ ಧೋರಣೆಯಿಲ್ಲ. ಪರದೇಶಗಳಿಂದ ಬೇಕಾದಷ್ಟು ಹಣವನ್ನು ತಂದಿದ್ದರಿಂದ ಇನ್‌ಫ್ಲೇಷನ್ ಎಂದರೆ ಹಣದುಬ್ಬರ ಬಂದು ಈ ಪರಿಸ್ಥಿತಿ ಬಂದಿದೆ. ಇನ್‌ಫ್ಲೇಷನ ಬಂದು ಆಹಾರ ಧಾನ್ಯಗಳ ಬೆಲೆ ಸ್ಥಿಮಿತದಲ್ಲಿಲ್ಲ. ಇಷ್ಟೇ ಅಲ್ಲದೆ ಸರಕಾರದ ತೆರಿಗೆಯ ನೀತಿಯಿಂದಲೂ ಹೀಗಾಗುತ್ತಿದೆ ಇದೊಂದು ವಿಷಚಕ್ರವಾಗಿದೆ. ಅನ್ಯಧಾನ್ಯಗಳ ಮೇಲೆ ತೆರಿಗೆ ಹಾಕಿದರು, ಇದರಿಂದ ಬೆಲೆಗಳು ಹೆಚ್ಚಿ ಕಾರ್ಮಿಕರು ಹೆಚ್ಚು ತುಟ್ಟಿಭತ್ಯೆ ಕೇಳಿದರು. ಅನ್ನಧಾನ್ಯಗಳ ಬೆಲೆ ಹೆಚ್ಚಿದೆ, ನಮಗೆ ಹೆಚ್ಚು ತುಟ್ಟಿಭತ್ಯ ಕೊಡಬೇಕೆಂದು ಕೇಳಿದರು. ಅದನ್ನು ಕೊಟ್ಟ ಮೇಲೆ ಮಿಲ್ ಮಾಲೀಕರು ತಾವು ತಯಾರು ಮಾಡುವ ಪದಾರ್ಥಗಳ ಉತ್ಪಾದನಾ ವೆಚ್ಚ ಹೆಚ್ಚಾಗುತ್ತಿದೆ ಎಂದು ಬಟ್ಟೆ ಬರೆಗಳ ಧಾರಣೆ ಹೆಚ್ಚಿಸಿದರು. ಆಮೇಲೆ ಬೇರೆ ಸರಕಾರಿ ನೌಕರರು ನಮಗೆ ತುಟ್ಟಿಭತ್ಯೆ ಬೇಕೆಂದು ಕೇಳಿದರೆ ಇದನ್ನು ಸರಿದೂಗಿಸುವದಕ್ಕೆ ಸರಕಾರದ ಬಡ್ಜೆಟ್‌ನಲ್ಲಿ ಮೂರು ಕೋಟಿ ರೂಪಾಯಿ ಕಡಿಮೆ ಬಿದ್ದಿದೆ ಎಂದು ಮತ್ತೆ ಒಂದು ಒಂದೂವರೆ ಕೋಟಿ ರೂಪಾಯಿ ತೆರಿಗೆ ಹಾಕುವುದು. ಹೀಗೆ ಕುಳ್ಳ ಎಣ್ಣೆಗಾಣದ ಮೇಲೆ ಕುಳಿತು ಒಂದೇ ಕಡೆ ಸುತ್ತುತ್ತಿರುವಂತಾಗಿದೆ. ಮಾರಾಟ ತೆರಿಗೆಯನ್ನು ಹಾಕುವುದರಲ್ಲಿ ಶೇಖಡ ಒಂದಿದ್ದುದನ್ನು ಎರಡರಷ್ಟು ಮಾಡುವುದು, ಸಿಂಗಲ್ ಪಾಯಿಂಟ್ ಇದ್ದುದನ್ನು ಮಲ್ಟಿ ಪಾಯಿಂಟ್ ಮಾಡುವುದು ಹೀಗಾಗಿ ಒಂದೊಂದು ಸಾರಿಯೂ ಬೆಲೆಗಳು ದಿನೇ ದಿನೇ ಏರುತ್ತಿದೆ. ತೆರಿಗೆ ಹಾಕಿದರೆ ಕೈಗಾರಿಕೆಗಳ ಮಾಲೀಕರು ತೆರಿಗೆ ಮತ್ತು ಅದರ

---

* ವಿಧಾನಸಭೆಯ ನಡವಳಿಕೆಯ ದಿನಾಂಕ 30ನೇ ಜೂನ್, 1964

4145.7

ಮೇಲೆ ಲಾಭ ಎರಡರನ್ನೂ ಸೇರಿಸಿ ಬೆಲೆಗಳನ್ನು ಏರಿಸುತ್ತಾರೆ. ಉದಾಹರಣೆಗೆ ಸಿನೆಮಾಗಳ ಮೇಲೆ ತೆರಿಗೆ ಹಾಕಿದರು. ಹೀಗಾಗಿ ಸರಕಾರ ಧೋರಣೆಯಿಂದ ನಮಗೆ ತೊಂದರೆ ಬಂದಿದೆ. ದೇಶದಲ್ಲಿ ಬೇಕಾದಷ್ಟು ಹಣವಿದೆ, ದೇಶದಲ್ಲಿ ಬೇರೆ ಬೇರೆ ಕೆಲಸಗಳು ನಡೆಯುತ್ತಿವೆ, ಇದರಿಂದ ಜನರಲ್ಲಿ ಕೊಳ್ಳುವ ಶಕ್ತಿ ಹೆಚ್ಚಾಗಿದೆ ಎಂದು ಹೇಳಿದರು.

ಸ್ವಾಮಿ, ಯಾರ ಹತ್ತಿರ ಇದೆ ಪರ್ಚೇಜಿಂಗ್ ಪವರ್? ಅಧಿಕಾರಿಗಳ ಹಾಗೂ ಮಂತ್ರಿಗಳ ಮನೆಯಲ್ಲಿರತಕ್ಕಂಥ ಫ್ಯಾನ್ಸ್ ಒಳ್ಳೇ ಬಟ್ಟೆ ಹಾಕಿಕೊಂಡು ಸಿನಿಮಾ ನೋಡಿಕೊಂಡು ಇರುವುದನ್ನು ನೋಡಿದರೆ ಅವರು ಚೆನ್ನಾಗಿ ಇದ್ದಾರೆಂದು ಅನಿಸಬಹುದು. ಡ್ರೈಕ್ಲೀನಿಂಗ್ ಮಾಡಿದ ಬಟ್ಟೆ ಹಾಕಬಹುದು ಆದರೆ ಊಟಕ್ಕೆ ಏನಿದೆ? ಭಾರತ ದೇಶದ ಹವಾಗುಣಕ್ಕೆ ಅನುಗುಣವಾಗಿ ಮನುಷ್ಯ ಜೀವನ ಮಾಡಬೇಕಾದರೆ ಹಾಲು ಬೆಣ್ಣೆ, ತುಪ್ಪ, ಅಕ್ಕಿ, ಬೇಳೆ, ತರಕಾರಿ, ಮುಂತಾದ ವಿಟಾಮಿನ್ಸ್ ಎ. ಬಿ, ಸಿ, ಡಿ, ಉಳ್ಳ ಆಹಾರ ಯಾರಿಗೂ ಸಿಕ್ಕುವುದಿಲ್ಲ. ಸರಕಾರದ ಇಲಾಖಾ ಸೆಕ್ರೆಟರಿಗಳು ಕೂಡ ಸರಿಯಾಗಿ ಸತ್ವವುಳ್ಳ ಪದಾರ್ಥ ಆಹಾರ ಸೇವನೆ ಮಾಡುತ್ತಾರೋ ಇಲ್ಲವೋ ಗೊತ್ತಿಲ್ಲ. ಮಂತ್ರಿಗಳು ಮಾತ್ರ ಹೆಚ್ಚು ಆಹಾರ ತಿನ್ನುತ್ತಾರೆ ಎಂಬುದು ಎಲ್ಲರಿಗೂ ಗೊತ್ತಿದೆ. ಯಾಕೆಂದರೆ ಅವರು ಸಂಚಾರಕ್ಕೆ ಹೋದಾಗ್ಗ ಅವರಿಗೆ ಒಳ್ಳೇ ಪದಾರ್ಥಗಳನ್ನು ಕೊಟ್ಟು ಇನ್ನಿಷ್ಟು ತಿನ್ನಿರಿ ಇನ್ನಿಷ್ಟು ತಿನ್ನಿರಿ ಎಂದು ಬಲವಂತ ಮಾಡುವುದರಿಂದ ಅವರು ಆಹಾರ ಹೆಚ್ಚು ತಿಂದು ಅವರ ಹೊಟ್ಟೆ ಮಾತ್ರ ಮುಂದೆ ಬರುತ್ತಿದೆ. ಆದರೂ ಕೂಡ ಅವರು ಸೈಂಟಿಫಿಕ್ ಆಗಿ ಆಹಾರ ತಿನ್ನುವುದಿಲ್ಲ. ಶಾಸ್ತ್ರೀಯವಾಗಿ ತೆಗೆದುಕೊಳ್ಳಬೇಕಾದ ಆಹಾರ ಅನ್ನ ಎಷ್ಟು ಜನಕ್ಕೆ ನಮ್ಮ ದೇಶದಲ್ಲಿ ಸಿಕ್ಕುತ್ತದೆ? ಚಹಾ ಕುಡಿದು ಸಿಗರೇಟು ಸೇದಿಕೊಂಡು ಎಷ್ಟೋ ಜನ ಬದುಕಿರುತ್ತಾರೆ. ಎಷ್ಟೋ ಜನ ಹೋಟೆಲ್ ಊಟ ಮಾಡಿಕೊಂಡು ಇರುತ್ತಾರೆ. ದೇಶದಲ್ಲಿ ಜನರ ಕೈಯಲ್ಲಿ ಜಾಸ್ತಿ ದುಡ್ಡು ಇದೆ, ಇದಕ್ಕೆ ಉದಾರಹಣೆ ಎಂದರೆ ಸಿನಿಮಾ ಹೌಸಿನಲ್ಲಿ ಜನರು ಸಾಲು ಸಾಲಾಗಿ ಕ್ಯೂ ನಿಂತು ಟಿಕೆಟ್ ಕೊಂಡು ಕೊಳ್ಳುತ್ತಾರೆ. ಆದುದರಿಂದ ಜನರ ಪರ್ಚೇಜಿಂಗ್ ಪವರ್ ಹೆಚ್ಚು ಆಗಿದೆ ಎಂದು ಕೆಲವರು ಹೇಳಬಹುದು. ಈ ಬಗ್ಗೆ ಒಂದು ಮಾತು ಕೇಳುತ್ತೇನೆ. ಹಳ್ಳಿಗಾಡಿನ ಜನರ ಸಲುವಾಗಿ ಬಡ ಜನರ ಸಲುವಾಗಿ ನಿಮಗೆ ಬಹಳ ಪ್ರೇಮ ಇದೆ ಎಂದು ಹೇಳುತ್ತೀರಿ ಇಲ್ಲಿಯ ಕೆಳದರ್ಜೆಯ ನೌಕರರ ಡಿ.ಎ. ಐದು ರೂಪಾಯಿ ಹೆಚ್ಚು ಮಾಡಿದಿರಿ. ಆದರೆ ಹಳ್ಳಿಗಾಡಿನಲ್ಲಿ ಬಡವರು ಹೇಗೆ ಇದ್ದಾರೆ ನೋಡಿದ್ದೀರಾ? ಹಳ್ಳಿಗಾಡಿನ ಕಡೆ ಮಳೆಯಾಗಿಲ್ಲ. ಹೋದಸಲ ಕೂಡ ಮಳೆಯಾಗಲಿಲ್ಲ. ಈ ವರ್ಷ ಸಹ ಮಳೆಯಾಗಿಲ್ಲ ಲ್ಯಾಂಡ್‌ಲೆಸ್ಸ್ ಲೇಬರರ್ಸ್-ಅನ್‌ಎಂಪ್ಲಾಯಮೆಂಟ್ ಭೂತಾಕಾರವಾಗಿ ಬೆಳೆದಿದೆ. ಅವರಿಗೆ ಕೆಲಸವಿಲ್ಲ, ತಿನ್ನುವುದಕ್ಕೆ ಆಹಾರವಿಲ್ಲ. ಅವರ ಸಲುವಾಗಿ ಸರಕಾರ ಏನು ಮಾಡಿದೆ? ಸಿಟಿಯಲ್ಲಿ ಅಷ್ಟೇ ಜನರಿಗೆ ಪರ್ಚೇಜಿಂಗ್ ಪಾವರ್ ಇರಬಹುದು. ದೊಡ್ಡ ದೊಡ್ಡ ಯೋಜನೆಗಳಲ್ಲಿ ಕೆಲಸ ಮಾಡುವವರಿಗೆ, ಮಿಲಿಟೆರಿ ಸೆಂಟರ್ಸ್‌ಗಳಲ್ಲಿ ಕೆಲಸ ಮಾಡುವವರಿಗೆ ಕೆಲಸ

ಸಿಕ್ಕಬಹುದು. ಆದರೆ ಹಳ್ಳಿಗಳಲ್ಲಿ ಜನರಿಗೆ ಏನು ಕೆಲಸ ಇದೆ? ಹಳ್ಳಿಗಳಲ್ಲಿ ಇರತಕ್ಕ ಜನರಿಗೆ ಕೆಲಸ ಕೊಡಿಸುವುದರ ಸಲುವಾಗಿ ಏನು ಮಾಡುತ್ತೀರಿ? ದಿನ ದಿನಕ್ಕೆ ಹೆಚ್ಚೆಚ್ಚು ಆಹಾರ ಧಾನ್ಯಗಳ ಬೆಲೆ ಮೇಲೆ ಏರುತ್ತಿದೆ. ಈ ಧಾರಣೆ ಕೊಟ್ಟು ಜನ ಹೇಗೆ ಜೀವಂತ ಇರುತ್ತಾರೆ ಎಂಬುದನ್ನು ನೀವು ವಿಚಾರ ಮಾಡಿದ್ದೀರಾ? ರಾಜ್ಯದ ಮಂತ್ರಿಗಳ ಮುಖ್ಯ ಮಂತ್ರಿಗಳು ಕೇಂದ್ರ ಸರಕಾರ ಮಂತ್ರಿಗಳು ಸೇರಿ ಕಾನ್‌ಫರೆನ್ಸ್ ಮಾಡಿ ರಾಜ್ಯದಲ್ಲಿಯ ಆಹಾರ ಧಾನ್ಯಗಳ ವ್ಯಾಪಾರವನ್ನು ಸರಕಾರವೇ ತೆಗೆದುಕೊಂಡು ಅದಕ್ಕೆ ನಿಯಂತ್ರಣ ಹಾಕಿ ಒಳ್ಳೇ ರೀತಿಯಲ್ಲಿ ಕಟ್ಟುನಿಟ್ಟಾಗಿ ಜಾರಿಗೆ ತರುತ್ತೇವೆ ಎಂದು ಹೇಳಿರುವುದು ಪೇಪರಿನಲ್ಲಿ ನಡೆದಿದೆ. ನಮ್ಮ ಮಾನ್ಯ ಮುಖ್ಯ ಮಂತ್ರಿಗಳು ಬಹಳ ಒಳ್ಳೆಯ ಹೃದಯವುಳ್ಳವರು ಯಾರಾದರೂ ಮುಂದೆ ಬಂದು ಹೇಳಿದರೆ ಆಗಲಿ ಎಂದು ಹೇಳುತ್ತಾರೆ ಅವರು ಬಹಳ ಒಳ್ಳೆಯವರು. ಆದರೆ ದೇಶದಲ್ಲಿ ಆಹಾರ ಧಾನ್ಯಗಳ ವ್ಯಾಪಾರ ಮಾಡುವುದಕ್ಕೆ ಸೂಕ್ತ ಕ್ರಮ ತೆಗೆದುಕೊಳ್ಳುತ್ತಾರೆಯೇ? ಇದುವರೆಗೆ ನಮ್ಮ ದೇಶದಲ್ಲಿ ಡಿಫೆನ್ಸ್ ಆಫ್ ಇಂಡಿಯಾ ಆ್ಯಕ್ಟ್ ಜಾರಿಗೆ ಬಂತು. ಪ್ರಿವೆಂಟಿವ್ ಡಿಟೆನಶನ್ ಆ್ಯಕ್ಟ್ ಬಂತು ಅನೇಕ ಕಾನೂನುಗಳು ಬಂದಿವೆ. ಆದರೆ ಕಾಲಾ ಬಜಾರ್ ಮಾಡುವವರನ್ನು ಜೇಲಿಗೆ ಕಳಿಸಲಿಲ್ಲ. ದೊಡ್ಡ ದೊಡ್ಡ ಕ್ಯಾಪಿಟ್ಯಾಲಿಸ್ಟರನ್ನು ಕಳ್ಳನಂತೆ ವ್ಯಾಪಾರ ಮಾಡಿದರೂ ಕೂಡ ಅಂಥವರನ್ನು ಜೇಲಿಗೆ ಕಳಿಸಲಿಲ್ಲ. ಇವರು ಅವರಿಗೆ ಬರೀ ವಿನಂತಿ ಮಾಡುತ್ತಾರೆ. ವಿನಂತಿ ಮಾಡಿಕೊಂಡರೆ ಏನು ಉಪಯೋಗವಾಗುತ್ತದೆ? ಇಲೆಕ್ಷನ್ ಬಂದರೆ ಅಂಥವರು ಇವರಿಗೆ ಐವತ್ತು ಸಾವಿರ ರೂಪಾಯಿ, ಇಪ್ಪತ್ತು ಸಾವಿರ ರೂಪಾಯಿ ಚೆಕ್ ಕೊಡುತ್ತಾರೆ. ಇವರಿಗೆ ಅವರಿಂದಲೇ ಧನ ಸಹಾಯ ದೊರೆಯುತ್ತಿದೆ. ಕಳ್ಳಸಂತೆ ಮಾಡುವವರರೇ ಇವರ ಸುತ್ತು ಮುತ್ತಲೂ ಇರುತ್ತಾರೆ. ಅನ್ನ ಧಾನ್ಯದ ವಿಚಾರದಲ್ಲಿ ಸರಕಾರ ಸ್ಟೇಟ್ ಟ್ರೇಡಿಂಗ್ ಸರಿಯಾಗಿ ನಡೆಸುವುದಿಲ್ಲ. ದರಗಳು ಹತೋಟಿಗೆ ತರುವುದು ಸಾಧ್ಯವಿಲ್ಲ. ಗೋಧಿ ಕೊಡುವ ಕಡೆ ಅಕ್ಕಿ ಕೊಡುತ್ತಾರೆ. ಅಕ್ಕಿ ಕೊಡಬೇಕಾದ ಕಡೆ ಗೋಧಿ ಕೊಡುತ್ತಾರೆ. ಈ ಆಹಾರ ಧಾನ್ಯ ಹಂಚುವುದನ್ನು ಕೋ - ಅಪರೇಟಿವ್ ಸೊಸೈಟಿಗಳಿಗೆ ವಹಿಸಿಕೊಡುತ್ತಾರೆಂದು ಹೇಳುತ್ತಾರೆ. ಈಗಾಗಲೇ ಕೋ ಅಪರೇಟಿವ್ ಸೊಸೈಟಿಗಳಲ್ಲಿ ಎಷ್ಟೋ ಗದ್ದಲ ಇದೆ. ಮಹಾತ್ಮ ಗಾಂಧಿಯವರ ಹೆಸರನ್ನೇ ಹೇಳಿಕೊಂಡು ಇರುವ ಖಾದಿ ಬೋರ್ಡಿನಲ್ಲಿ ಗದ್ದಲ ಎದ್ದಿವೆ. ಅಲ್ಲಿಯೇ ಈ ರೀತಿಯಾದರೆ ಇನ್ನು ಬೇರೆ ಸೊಸೈಟಿಗಳಲ್ಲಿ ಏನು ನಡೆದಿರಬಹುದು ಎಂಬುದನ್ನು ಯೋಚನೆ ಮಾಡಬೇಕು. ಪಟ್ಟಣದ ಅಕ್ಕಿ ಎಂದು ಹೇಳಿ ಮಿಶಿನ್‌ನಲ್ಲಿ ತಯಾರ್‍ಮಾಡಿದ ಅಕ್ಕಿ ಕೊಟ್ಟು ಅನ್ಯಾಯ ಮಾಡುವ ಅನೇಕ ಕೋ ಅಪರೇಟಿವ್ ಸೊಸೈಟಿಗಳಿವೆ ಸಕ್ಕರೆ ಹಂಚಿಕೆಯಲ್ಲಿ ಸಹ ಅನ್ಯಾಯವಾಗುತ್ತಿದೆ. ಅವರ ಗುಂಪಿನಲ್ಲಿರುವ ಕಾಂಗ್ರೆಸ್ಸಿನವರೇ ಇಂಥ ಅನೇಕ ಪ್ರಶ್ನೆಗಳನ್ನು ಸರಕಾರದ ವಿರುದ್ಧ ಕೇಳುತ್ತಾರೆ. ಆದುದರಿಂದ 100ಕ್ಕೆ 99 ಸೊಸೈಟಿಗಳು ಸರಿಯಾದ ರೀತಿಯಲ್ಲಿ ನಡೆಯುತ್ತಿಲ್ಲ. ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಎಲ್ಲಿಯೋ ಒಂದು ಸೊಸೈಟಿ ಸರಿಯಾಗಿ ನಡೆದಿರಬಹುದು. ಕಣ್ಣಲ್ಲಿ ಮಣ್ಣು ಹಾಕುವ ಕೆಲಸ ಮಾತ್ರ ನಡೆದಿದೆ. ಆದುದರಿಂದ ಆಹಾರ ಧಾನ್ಯಗಳ ಪರಿಸ್ಥಿತಿ ಹತ್ತೋಟಿಗೆ ಬರುವುದಿಲ್ಲ. ಇಂಥ ಪರಿಸ್ಥಿತಿಯಲ್ಲಿ ದೇಶದಲ್ಲಿ ಆಲ್ಲೋಲ ಕಲ್ಲೋಲ ಉಂಟಾಗುತ್ತಿದೆ. ಇಂಡಸ್ಟ್ರಿಯಲ್ ಸರ್ಕರ್ಸ್ ಸಂಪು ಮಾಡಬಹುದು. ಎನ್.ಜಿ.ಒ.ದ ಮೂರನೇ ನಾಲ್ಕನೇ ದರ್ಜೆಯ ಕೆಳ ದರ್ಜೆಯ ಸರಕಾರೀ ನೌಕರರಲ್ಲಿ ಸಹ ಅನ್‌ರೆಸ್ಟ್ ಉಂಟಾಗಿ ಸಂಪು ಮಾಡಬಹುದು. ಸರಕಾರದ ವ್ಯವಸ್ಥೆ ಸರಿಯಾಗಿ ನಡೆಯುವುದಿಲ್ಲ ಎಂದು ಹೇಳಬೇಕಾಗುತ್ತದೆ. ದೇಶದಲ್ಲಿ ಪರಿಸ್ಥಿತಿ ಭೀಕರವಾಗುತ್ತದೆ. ಇಲ್ಲಿಯ ಮಾನ್ಯ ಸದಸ್ಯರಿಗೆ ಮೂರು ಗಂಟೆ ಅಸೆಂಬ್ಲಿಗೆ ಬಂದರೆ ಒಂದು ದಿನಕ್ಕೆ 16 ರೂಪಾಯಿ ಭತ್ಯೆ ದೊರೆಯುತ್ತದೆ. ಮುಂಜಾನೆ ಯಿಂದ ಸಂಜೆಯವರೆಗೆ ಕೆಲಸ ಮಾಡುವ ಕೂಲಿಕಾರನಿಗೆ ಏನೂ ಇಲ್ಲಾ ಅದು ಏಕೆ ಎಂದು ಕೇಳುತ್ತಾರೆ. ಪಾರ್ಲಿಮೆಂಟ್ ಸದಸ್ಯರು ಸಂಬಳ ಜಾಸ್ತಿ ಮಾಡಿಕೊಂಡರು, ಡಿ.ಎ. ಜಾಸ್ತಿ ಮಾಡಿಕೊಂಡರು, ನಮಗೆ 5-10 ರೂಪಾಯಿ ಆದರೂ ಕೊಡಿ ಎಂದು ಕೆಳದರ್ಜೆಯ ಸರಕಾರಿ ನೌಕರರು ಕೇಳುತ್ತಾರೆ. ನಮಗೂ ಏನದರೂ ಅನುಕೂಲ ಮಾಡಿಕೊಡಿ ತುಟ್ಟಿ ಭತ್ಯೆ ಕೊಡಿ ಎಂದು ಅವರು ಕೇಳುತ್ತಾರೆ. ತುಟ್ಟಿ ಭತ್ಯೆ ಹೆಚ್ಚು ಕೊಡುವುದಕ್ಕೆ ಜನತೆಯ ಮೇಲೆ ಟ್ಯಾಕ್ಸ್ ಹಾಕಬೇಕಾಗುತ್ತದೆ. ಇಂಥ ಒಂದು ವಿಷಸ್ ಸರ್ಕಲ್ ಅಂದರೆ ಒಂದು ವಿಷಚಕ್ರ ಉಂಟಾಗುತ್ತದೆ. ಇಂಥಾದ್ದಕ್ಕೆ ಆವಕಾಶ ಕೊಡದೆ ಸ್ಟೇಟ್ ಟ್ರೇಡಿಂಗ್ ಕಾರ್ಪೋರೇಷನ್ ನಡೆಸಿ ಒಳ್ಳೇ ರೀತಿಯಲ್ಲಿ ಮಾಡಬೇಕು ಎಂದು ಹೇಳುತ್ತೇನೆ. ಮನುಷ್ಯನಿಗೆ ಅವಶ್ಯಕವಾಗಿರತಕ್ಕಂಥ ಇಸೆನ್ಸಿಯಲ್ ಫುಡ್ ಗ್ರೇನ್ಸ್ ಮೇಲೆ ಟ್ಯಾಕ್ಸ್ ಹಾಕಬಾರದು. ಎಷ್ಟು ಹೇಳಿದರೂ ಕೇಳಲಿಲ್ಲ. ಜತ್ತಿಯವರು ಹಾಗೆ ಮಾಡಿದರು, ಮುಖ್ಯಮಂತ್ರಿಗಳು ಹೀಗೆ ಮಾಡಿದರು ಶ್ರೀ ಆರ್.ಎಂ. ಪಾಟೀಲರವರು ಮೋಟಾರ್ ವೆಹಿಕಲ್ಸ್ ಆ್ಯಕ್ಟ್ ತಂದರು ಇದರ ಪರಿಣಾಮ ಏನಾಗಿದೆ ಎಂದರೆ ರೈಲ್ವೆಯಿಂದ ಹೋಗತಕ್ಕ ಸಾಮಾನಿನ ನಾಲ್ಕರಷ್ಟು ಸಾಮಾನು ಮೋಟಾರಿ ನಿಂದ ಹೋಗುತ್ತಿದೆ. ಇದು ನನಗೆ ಚೆನ್ನಾಗಿ ಗೊತ್ತಿಗೆ. ದೊಡ್ಡ ದೊಡ್ಡ ಟ್ರಾನ್ಸ್‌ಪೋರ್ಟ್ ಕಂಪನಿಗಳಿವೆ. ಟ್ರೇನಿನಿಂದ ಮಾಲು ಕಳಿಸುವುದಿಲ್ಲ ಯಾಕೆಂದರೆ ತಡವಾಗುತ್ತದೆ. ತಡವಾಗಬಾರದೆಂದು ಮೋಟಾರಿನಿಂದ ಮಾಲು ಕಳಿಸುತ್ತಾರೆ. ಈಗ ಟ್ರಾನ್ಸ್‌ಪೋರ್ಟೇಶನ್ ಮೇಲೆ ಹೆವಿ ಟ್ಯಾಕ್ಸೇಶನ್ ಹಾಕಿದ್ದೀರಿ. ಆದುದರಿಂದಲೇ ಬೆಂಗಳೂರು ನಗರಕ್ಕೆ ನಮ್ಮ ಪ್ರದೇಶದಿಂದ ತೊಗರಿ ಬೇಳೆ ಬರುವುದಿಲ್ಲ. ಯಾಕೆಂದರೆ ತೊಗರಿ ಬೇಳೆ ಗುಲಬರ್ಗಾದಿಂದ ಸುಮಾರು 450 ಮೈಲಿ ಮೋಟಾರಿನಲ್ಲಿ ಬರಬೇಕಾಗುತ್ತದೆ. ಒಂದು ಚೀಲಕ್ಕೆ ನಾಲ್ಕೈದು ರೂಪಾಯಿ ಛಾರ್ಜ್ ಆಗುತ್ತದೆ. ಇದಲ್ಲದೆ ಹೆಚ್ಚು ಟ್ಯಾಕ್ಸ್‌ಕೊಡಬೇಕು. ಟ್ಯಾಕ್ಸೇಶನ ಪಾಲಿಸಿ ಸೆಂಟರಿನಲ್ಲಿಯೂ ಸ್ಟೇಟಿನಲ್ಲಿಯೂ ಈ ತರಹ ನಡೆಯುತ್ತಿದೆ. ಇದಲ್ಲದೆ ಬ್ಯಾಂಕುಗಳು ಅನ್ನ ಧಾನ್ಯದ ಮೇಲೆ ಅಡ್ವಾನ್ಸ್ ಹಣ ಕೊಡಬಾರದು ಎಂದಿದೆ. ಆದರೆ ಕೆಲವು ಷೆಡ್ಯೂಲ್ ಬ್ಯಾಂಕುಗಳು ಎಳ್ಳು ಇದೆಯೆಂದು ಹೇಳಿ ಒಳಗೆ ಜೋಳವಿದ್ದರೂ

ಕೂಡ ಹಣ ಕೊಡುತ್ತಿದ್ದಾರೆ. ಇದನ್ನು ಯಾರು ಹೇಗೆ ಚೆಕ್ ಮಾಡುತ್ತಾರೆ? ಸರಿಯಾದ ರೀತಿಯಲ್ಲಿ ಇನ್‌ವೆಸ್ಟಿಗೇಶನ್ ಸರಕಾರ ಮಾಡುವುದಕ್ಕೆ ತಯಾರ ಇದ್ದರೆ ನಾನು ಕೆಲವು ಕಡೆ ಇದನ್ನು ತೋರಿಸುತ್ತೇನೆ. ಎಲ್ಲಿಯ ವರೆಗೆ ಷೆಡ್ಯೂಲ್ ಬ್ಯಾಂಕ್ಸ್ ನ್ಯಾಷನಲೈಜ್ ಮಾಡುವುದಿಲ್ಲವೋ ಅಲ್ಲಿಯವರೆಗೆ ಈ ವ್ಯಾಪಾರ ಈ ತರಹ ನಡೆಯುತ್ತದೆ. ಪರಿಸ್ಥಿ ಸರಿಯಾಗಿ ಇಲ್ಲದಿದ್ದರೆ ತೊಂದರೆಯಾಗುತ್ತದೆ.

ಇನ್ನು ಜೋಳದ ಬಗ್ಗೆ ಹೇಳುವುದರೆ ಜೋಳ ನಮ್ಮ ಭಾಗದಲ್ಲಿ ಬೆಳೆಯುತ್ತದೆ. ಮಹಾರಾಷ್ಟ್ರ ಹಾಗೂ ಆಂಧ್ರ ರಾಜ್ಯಗಳ ಸ್ವಲ್ಪ ಭಾಗ ಮತ್ತು ಕರ್ನಾಟಕದಲ್ಲಿ ಜೋಳ ಬೆಳೆಯುತ್ತದೆ. ಆದರೆ ಇಂದು ನಮ್ಮ ಜನರಿಗೆ ತಿನ್ನುವುದಕ್ಕೆ ಜೋಳ ಇಲ್ಲ. ಏನು ಮಾಡುವುದು? ನಮ್ಮ ದುರ್ದೈವದ ಸಂಗತಿ ಎಂದರೆ 35 ರೂಪಾಯಿಗೆ ಒಂದು ಚೀಲ ಜೋಳ ಮಾರುತ್ತಿದ್ದರು. ಈಗ ಅದರ ಬೆಲೆ 60 ರೂ. ಆಗಿದೆ. ಈಗ ಬೆಲೆ ಕಡಿಮೆ ಹೇಗೆ ಆಗುವುದು? ಕಟ್ಟು ನಿಟ್ಟಾದ ಒಂದು ಪಾಲಿಸಿ ಇಲ್ಲಾ. ಮಹಾರಾಷ್ಟ್ರ ಸರಕಾರ ತನ್ನ ರಾಜ್ಯದಿಂದ ಧಾನ್ಯ ಹೊರಗೆ ಹೋಗುವುದಕ್ಕೆ ಕೊಡುವುದಿಲ್ಲ. ಕಾನೂನು ರೀತ್ಯ ಪರ್ಮಿಶನ್ ಕೊಡದೇ ಇದ್ದರೂ ಕೂಡ ಕೇಂದ್ರ ಸರಕಾರಕ್ಕೆ ರಿಕ್ವೆಸ್ಟ್ ಮಾಡಿಕೊಂಡು ತಡೆಗಟ್ಟಿದ್ದಾರೆ. ನಮ್ಮಲ್ಲಿ ಜೋಳದ ಬೆಲೆ ಒಂದು ಚೀಲಕ್ಕೆ 65 ರೂಪಾಯಿ ಇದ್ದುದು ನಾಲ್ಕು ಲಾರಿ ಲೋಡ್ ಜೋಳ ತೆಗೆದುಕೊಂಡು ಬಂದರೆ ಮರುದಿನವೇ ಬೆಲೆ 54 ರೂಪಾಯಿಗೆ ಇಳಿಯುತ್ತದೆ. 64 ರೂಪಾಯಿಗಳು ಆದ ಘಳಿಗೆ, ಅವರು ಕೆಲವು ಲೀಡರುಗಳು ಹತ್ತಿರ ಹೋದರು. ಅವರು ಅದಕ್ಕೆ ಕಾನೂನಿಲ್ಲ; ಡೆಪ್ಯುಟಿ ಕಮೀಷನರಿಗೆ ನೋಟೀಸು ಕೊಡುತ್ತೇವೆಂದು ಬೆದರಿಸಿ ಅಂತ ಹೇಳಿದರು. ಡೆಪ್ಯುಟಿ ಕಮೀಷನರು ಎಲ್ಲಿ ನೋಟೀಸು ಕೊಡುತ್ತಾರೋ ಎಂದು ಕ್ರಮ ತೆಗೆದುಕೊಳ್ಳಲಿಲ್ಲ. ಇದರಿಂದ ಪೊಲೀಸಿನವರೂ ಡಿಮೊರಾಲೈಸ್ ಆದರು. ಅವರು ಒಳಗಿಂದೊಳಗೆ ನಾಲ್ಕು ರೂಪಾಯಿ ಕಿಸೆಯೊಳಗೆ ಹಾಕಿಕೊಂಡರು. ಒಕ್ಕಲಿಗರೂ ಇದರಿಂದ ಲಾಭವಿಲ್ಲ. ಇದು ಸೆಂಟ್ರಲ್ ಸಬ್ಜೆಕ್ಟ್ ಅಲ್ಲ, ಇದು ಸ್ಟೇಟ್ ಸಬ್ಜೆಕ್ಟ್. ಜೋಳ ಪರದೇಶದಿಂದ ತರುವುದಕ್ಕೆ ಸಾಧ್ಯವಿಲ್ಲ. ಬೇರೆ ಪ್ರಾಂತ್ಯದಿಂದ ತರುವುದಕ್ಕೆ ಸಾಧ್ಯ. ಈ ಕಾರಣದಿಂದ ಜೋಳದ ವ್ಯವಹಾರದಲ್ಲಿ ಮಾತ್ರ ಮಾನ್ಯ ನಮ್ಮ ಅನ್ನದಾತ ಮಂತ್ರಿಗಳು ದೆಹಲಿಯಲ್ಲಿ ಹೆಚ್ಚಿಗೆ ಪ್ರಭಾವ ಬೀರಿ, ಜೋಳವನ್ನು ಹಾರ್‌ವೆಸ್ಟ್ ಸೀಸನ್‌ನಲ್ಲಿ ಪರ್ಚೇಸ್ ಮಾಡಿ ಸ್ಟಾಕ್ ಮಾಡಿ. ಸೀಸನ್ನಿನಲ್ಲಿ 10-12ರೂಪಾಯಿ ಡಿಫರೆನ್ಸ್ ಆಗುತ್ತದೆ. ಈವಾಗಂತೂ 20-25 ರೂಪಾಯಿ ಡಿಫರೆನ್ಸ್ ಆಗುತ್ತದೆ. ಸರಕಾರ ವ್ಯವಹಾರ ಮಾಡಿ, ನೋ ಲಾಸ್, ನೋ ಪ್ರಾಫಿಟ್ ಬೇಸಿಸ್ ಮೇಲೆ ಜೋಳ ಸ್ಟಾಕ್ ಮಾಡಬೇಕು. ಗುಲ್ಬರ್ಗಾದಲ್ಲಿ ಜೋಳದ ಧಾರಣೆ ಜಾಸ್ತಿಯಾಗಿರುವುಲ್ಲದೇ, ಅಲ್ಲಿ ಯಾವ ಇಂಡಸ್ಟ್ರಿಯೂ ಇಲ್ಲ. ಮೊದಲು ಇದ್ದವು ಮಾತ್ರ ಇದೆ. ಜನಗಳಿಗೆ ಬೇರೆ ಎಂಪ್ಲಾಯಿಮೆಂಟಿಗೆ ಅವಕಾಶವಿಲ್ಲ. ಅಲ್ಲಿ ಯಾವ ತರಹ ಇರಿಗೇಷನ್ ಫೆಸಿಲಿಟಿಯೂ ಇಲ್ಲ. ಅಲ್ಲಿ ಪಾಪ್ಯುಲೇಷನ್

ಬೆಳೆಯುತ್ತಾ ಇದೆ; ಅಲ್ಲಿ ಏನು ಕಡಿಮೆ ಇಲ್ಲವೆಂದು ಮಾನ್ಯ ಮಂತ್ರಿಗಳ ಗಮನಕ್ಕೆ ತರುತ್ತಿದ್ದೇನೆ. ಆ ಜಿಲ್ಲೆಗೆ ಅಕ್ಕಿ ಕೊಟ್ಟಿಲ್ಲ, ಗೋಧಿ ಕೊಡುತ್ತೇವೆಂದು ಹೇಳುತ್ತಾರೆ. ನಮ್ಮಲ್ಲಿ ಹೈದರಾಬಾದಿನ ಗಾದೆ ಮಾತು ಉಂಟು. 1901ರಲ್ಲಿ ದುಷ್ಕಾಲ್ಲ ಬಿತ್ತಂತೆ. ನಮ್ಮ ನೈಸಾಮ್ ಪಾಶಾ ಹತ್ತಿರ ಹೋದರೆ, ಅವರು ಹೇಳಿದರು; ನಮ್ಮಲ್ಲಿ ಜೋಳ ಇಲ್ಲ, ಘೀ ಖಿಚಡಿ ಖಾವ್ ಅಂತ. ಅಂದರೆ ಅನ್ನ, ತುಪ್ಪ ತಿನ್ನಿ ಅಂತ ಹೇಳಿದರು.

ಎಂ. ವಿ. ಕೃಷ್ಣಪ್ಪ: ಜೋಳ ರೂಪಾಯಿಗೆ ಒಂದೊವರೆ ಸೇರು ಕೂಡ ಮಾರುತ್ತಾ ಇಲ್ಲ. ಗೋಧಿ ರೂಪಾಯಿಗೆ ಎರಡೂವರೆ ಸೇರು ಮಾರುತ್ತಾರೆ. ತಾವು ಹೇಳುವ ಗಾದೆ ಅದಕ್ಕೂ ಇದಕ್ಕೂ ತದ್ವಿರುದ್ಧ.

ಗಂಗಾಧರ ನಮೋಶಿ: ಗೋಧಿ ತಿನ್ನಿ ಅಂತ ಮಾನ್ಯ ಮಂತ್ರಿಗಳು ಹೇಳುತ್ತಿದ್ದಾರೆ. ನಮಗೆ ಅಕ್ಕಿ, ರಾಗಿ ಕೊಡಿ ಜೋಳದಲ್ಲಿ ಚಪಾತಿ ಮಾಡಬೇಕಾದರೆ ಎಣ್ಣೆ, ತುಪ್ಪ ಬೇಕು. ಎಣ್ಣೆ ಧಾರಣೆ ಎಷ್ಟು ತುಟ್ಟಿಯಾಗಿದೆ ಎಂದು ಎಲ್ಲರಿಗೂ ಗೊತ್ತಿದೆ. ಹಿಟ್ಟು ಹಚ್ಚಿ ಅದನ್ನು ಮಂತ್ರಿಗಳು ಹೇಳುವಂತೆ ಮಾಡಲಿಕ್ಕಾಗುವುದಿಲ್ಲ. ತುಪ್ಪ ಅಥವಾ ಎಣ್ಣೆ ಇಲ್ಲದೆ ಮಾಡುವುದಕ್ಕೆ ಬರುವುದಿಲ್ಲ. ಅಕ್ಕಿ ಬೆಳಗಾಂ, ಬಿಜಾಪೂರದವರಿಗೆ ಕೊಡುತ್ತೀರ. ಅಕ್ಕಿ ನಮಗೂ ಏಕೆ ಕೊಡಬಾರದು? ನಮಗೂ ಕೊಡಿ. ಬೇಗನೆ ಅಕ್ಕಿ ಕೊಡಬೇಕೆಂದು ಮಾನ್ಯ ಮಂತ್ರಿಗಳಲ್ಲಿ ಅರಿಕೆ ಮಾಡಿಕೊಳ್ಳುತ್ತೇನೆ.

ಇಲ್ಲಿ ಈಗ ಅಗ್ರಿಕಲ್ಚರಲ್ ಮಿನಿಸ್ಟರ್ ಇದ್ದಿದ್ದರೆ ಒಳ್ಳೆಯದಾಗುತ್ತಿತ್ತು. ಅಗ್ರಿಕಲ್ಚರಲ್ ಮಿನಿಸ್ಟರು ಈ ಕಾಲದಲ್ಲಿ ಅಗ್ರಿಕಲ್ಚರಲ್ ಬಗ್ಗೆ ಮುತುವರ್ಜಿ ವಹಿಸಬೇಕು. ಅಮೇರಿಕದಲ್ಲಿ ಶೇಕಡ 20ರಷ್ಟು ಜನ ವ್ಯವಸಾಯದಲ್ಲಿ ತೊಡಗಿ ಅಲ್ಲಿ ಹೇರಳವಾಗಿ ಬೆಳೆದು ಆ ಹೊರಗೂ ಕಳುಹಿಸುತ್ತಾರೆ. ನಮ್ಮಲ್ಲಿ 85 ಪರ್ಸೆಂಟ್ ಜನರು ಅಗ್ರಿಕಲ್ಚರಿಸ್ಟರಿದ್ದು ಇಲ್ಲಿ ಜನರಿಗೆ ಹಾರದ ಕೊರತೆ ಇದೆ. ಅಲ್ಲಿ ಮೆಶಿನರಿಯನ್ನು ಉಪಯೋಗಿಸಿ ಅಧಿಕವಾಗಿ ಬೆಳೆಯುತ್ತಾರೆಂದು ನೀವು ಹೇಳಬಹುದು. ಇಲ್ಲಿ ಜನ ಮೆಶಿನರಿ ಉಪಯೋಗಿಸುವುದಿಲ್ಲವೆನ್ನಬಹುದು. ಆದರೆ ಮೊಟ್ಟಮೊದಲು ನಿಮ್ಮ ಕಡೆ ತಪ್ಪು ಆಗಿದೆ ಎಂದು ಒಪ್ಪಿಕೊಳ್ಳಿ. ಒಂದು ಉದಾಹರಣೆ ಹೇಳಬೇಕಾದರೆ ಒಂದು ಸರ್ತಿ ನಮ್ಮಲ್ಲಿ ತೊಗರಿ ಬೆಳೆಗೆ ಹುಳುಬಿತ್ತು ತೊಗರಿಕಾಯಿಗೆ ಮತ್ತು ಬೀಜಕ್ಕೆ ಬಿದ್ದ ಹುಳಕ್ಕೆ ಹೊಡೆಯುವ ಸಲುವಾಗಿ ಡಿ.ಡಿ.ಟಿ. ಇಲಾಖೆಯಿಂದ ತೆಗೆದುಕೊಂಡರೆ, ಆ ಡಿ.ಡಿ.ಟಿ. ಯಲ್ಲಿ ಸುಣ್ಣ ಮಿಕ್ಸ್ ಮಾಡಿ ಬಿಟ್ಟಿದ್ದರು. ಅದನ್ನು ಒಯ್ದು ಹೊಡೆದರೆ ಬೆಳೆ ಸುಟ್ಟು ಹೋಯಿತು. ಬಾಕಿಯವರು ಬಜಾರಿನಿಂದ ಡಿ.ಡಿ.ಟಿ. ತಂದು ಹೊಡೆದರು. ನಾರ್ಮಲ್ ಬೆಳೆ ಬಂದಾಗ 6 -7 ಚೀಲ ಬರುತ್ತಿತ್ತು ಅಂಥ ಕಡೆ 32 ಚೀಲ ಬೆಳೆದಿದ್ದಾರೆ. ಅಗ್ರಿಕಲ್ಚರ್ ಡಿಪಾರ್ಟ್‌ಮೆಂಟಿನವರು, ತಾಲ್ಲೂಕು ಡೆವಲಪ್‌ಮೆಂಟ್ ಬೋರ್ಡಿನವರು, ಬಿ.ಡಿ.ಓ.ಗಳು

ಡೆಪ್ಯುಟಿ ಬಿ.ಡಿ.ಓ.ಗಳು, ಅಗ್ರಿಕಲ್ಚರ್ ಅಸಿಸ್ಟೆಂಟುಗಳು ಬೆಳೆ ನಾಶವಾಗದ ಹಾಗೆ ತಮ್ಮ ಲಕ್ಷ್ಯವನ್ನು ಕೊಡಬೇಕು. ಇಲ್ಲದಿದ್ದರೆ 85 ಪರ್ಸೆಂಟ್ ಅಗ್ರಿಕಲ್ಚರಿಸ್ಟ್‌ಗಳು ಇರುವ ಈ ದೇಶದಲ್ಲಿ ದೇಶದ ಜನರಿಗೆ ಆಗುವಷ್ಟು ಅನ್ನ ಉತ್ಪತ್ತಿಯಾಗುವುದಿಲ್ಲವೆಂದರೆ ನಾಚಿಕೆಗೇಡು ಸ್ವಾತಂತ್ರ್ಯ ಬಂದ 17 ವರ್ಷಗಳ ನಂತರವೂ ಸ್ವಯಂ ಪೂರ್ಣತೆ ಆಹಾರದಲ್ಲಿ ಬಂದಿಲ್ಲವೆಂದರೆ, ಸರಕಾರದವರು ಸರಿಯಾಗಿ, ದಕ್ಷತೆಯಿಂದ ಕೆಲಸ ನಡೆಸುತ್ತಿಲ್ಲವೆಂದು ನಿಮ್ಮ ಮೇಲೆ ಆಪಾದನೆ ಕೊಡುತ್ತೇನೆ. ಈ ಅಗ್ರಿಕಲ್ಚರ್ ಡಿಪಾರ್ಟ್‌ಮೆಂಟ್ ನೌಕರುಗಳು ಎಂ.ಎಲ್.ಎ.ಗಳಲ್ಲಿ ಹಿಡಿದುಕೊಂಡು, ತಮ್ಮ ಪ್ರಮೋಷನ್ನೂ, ಇತ್ಯಾದಿ, ಸ್ವಂತ ಕೆಲಸಕ್ಕಾಗಿ ಲೆಜಿಸ್ಲೇಚರ್ ಹಾಸ್ಟಲಿನಲ್ಲಿ, ಮತ್ತು ಮಿನಿಸ್ಟರ್ ಆಫೀಸಿನಲ್ಲಿ ಇಲ್ಲಿ ಸುತ್ತಾಡುತ್ತಿರುತ್ತಾರೆ, ಅವರು ಇಲಾಖೆಯ ಕೆಲಸಕ್ಕೆ ಸ್ವಲ್ಪವೂ ಗಮನ ಕೊಡುತ್ತಿಲ್ಲವೆಂದು ಅಗ್ರಿಕಲ್ಚರ್ ಮಂತ್ರಿಗಳ ಸ್ಪೆಷಲ್ ಗಮನವನ್ನು ಸೆಳೆಯುತ್ತಿದ್ದೇನೆ. ಈ ಅಗ್ರಿಕಲ್ಚರ್ ಇಲಾಖೆಯ ನೌಕರುಗಳ ಕೆಲಸವನ್ನೂ, ಚಲನವಲನವನ್ನು ವೀಕ್ಷಿಸುವುದಕ್ಕಾಗಿ ಅಂಟಿ ಕರಪ್ಷನ್ ಡಿಪಾರ್ಟ್‌ಮೆಂಟಿನ ಹಾಗೆ, ಒಬ್ಬ ಸ್ಪೆಷಲ್ ಆಫೀಸರನ್ನು ಚೆಕಿಂಗಾಗಿ ಹಾಕಬೇಕು. ಒಂದೊಂದು ಡಿಸ್ಟ್ರಿಕ್ಟಿಗೂ ಒಬ್ಬೊಬ್ಬ ಅಂಥ ಸ್ಪೆಷಲ್ ಆಫೀಸರನ್ನು ನೇಮಕ ಮಾಡಬೇಕು. ಆ ಅಫೀಸರಿಗೆ ಮಿನಿಸ್ಟರ್ ಜೊತೆಯಲ್ಲಿ ನೇರವಾದ ಸಂಬಂಧವಿರಲಿ. ಅವಾಗ ಪ್ರೊಡಕ್ಷನ್ ಎಷ್ಟು ಹೆಚ್ಚಾಗುತ್ತದೆಂಬುದನ್ನು ತಿಳಿದುಕೊಳ್ಳಬೇಕು.

ಈ ಡೆವಲಮೆಂಟ್ ಕೌನ್ಸಿಲ್ಲುಗಳಲ್ಲಿ ಪ್ಲಾನುಗಳ, ಪ್ರೋಗ್ರಾಮಗಳ ತಯಾರಿಕೆಗೆ ಎಷ್ಟೋ ದುಡ್ಡನ್ನು ಖರ್ಚು ಮಾಡುತ್ತೇವೆ. ಆದರೆ ಅಗ್ರಿಕಲ್ಚರ್ ಆಫೀಸನಲ್ಲಿರತಕ್ಕಂಥವರು ಅವೆಲ್ಲಾ ಭೋಗಸ್ ಅಂಥ ಹೇಳುತ್ತಾರೆ. ಅವನ್ನೆಲ್ಲಾ ಇಂಪ್ಲಿಮೆಂಟ್ ಮಾಡುವುದಕ್ಕೆ ಇಕ್ವಿಪಮೆಂಟ್ ಇಲ್ಲ. ಡಿ.ಡಿ.ಟಿ. ಇಲ್ಲ, ಬೇಕಾದ ಫೆಸಿಲಿಟಿಗಳನ್ನು ಸರಿಯಾಗಿ ಕೊಡುವುದಿಲ್ಲ; ಅವೆಲ್ಲಾ ಯಶಸ್ವಿಯಾಗುವುದಿಲ್ಲ ವೆಂದು ನಿರಾಶೆ ವ್ಯಕ್ತ ಪಡಿಸುತ್ತಾರೆ. ನಮ್ಮ ರಾಜ್ಯದ ಅಧಿಕಾರಿಗಳಿಗೆ ಅವುಗಳಲ್ಲಿ ನಂಬಿಕೆ ಇಲ್ಲ. ಆದರೆ ಆಂಧ್ರದಲ್ಲಿ ಪ್ರೋಗ್ರೆಸ್ ತೋರಿಸಲಿಕ್ಕೆ ಹತ್ತಿದ್ದಾರೆ. ನಮ್ಮಲ್ಲಿ ಭಾರೀ ಭಾರೀ ಇರಿಗೇಷನ್ ಪ್ರಾಜೆಕ್ಟಗಳನ್ನು ಕಟ್ಟುತ್ತಾ ಇದ್ದೇವೆ. ತುಂಗಭದ್ರಾ ಪ್ರೊಜೆಕ್ಟಿನಲ್ಲಿ ಎಷ್ಟರ ಮಟ್ಟಿಗೆ ನೀರು ಯುಟಿಲೈಸ್ ಮಾಡಿಲಿಕ್ಕೆ ಹತ್ತಿದ್ದಾರೆ ಎಂದರೆ ನಮ್ಮ ಜನರು ಅಗ್ರಿಕಲ್ಚರ್ ಮೈಂಡೆಡ್ ಅಲ್ಲ. ಅವರಿಗೆ ಇರಿಗೇಟ್ ಮಾಡುವ ಮನೋವೃತ್ತಿ ಇಲ್ಲವೆಂದು ಹೇಳುತ್ತೀರಾ. ನಾನು ಕಾರಣ ಹೇಳುತ್ತೇನೆ. ನೀವು ಯಾವವರೆಗೆ ಲ್ಯಾಂಡ್ ರಿಫಾರ್ಮ ಮಾಡುವುದಿಲ್ಲ, ಟಿಲ್ಲರ್ಸ್‌ಗೆ ಲ್ಯಾಂಡ್ ಕೊಡುವುದಿಲ್ಲ, ಅವರಿಗೆ ಹೆಚ್ಚು ಆಹಾರ ಬೆಳೆಯಲು ಸಾಧ್ಯವಿಲ್ಲ. ಗುಲಬರ್ಗಾದಲ್ಲಿ ಜಮೀನಿರುವ ಎಷ್ಟೋ ಜನ ಬೆಂಗಳೂರಿನಲ್ಲಿದ್ದಾರೆ; ಅವರು ಇಲ್ಲಿ ಆಫೀಸರುಗಳಾಗಿದ್ದಾರೆ. ಜಮೀನಿಗೆ ನೀರು ತೆಗೆದುಕೊಂಡು ಇರಿಗೇಟ್ ಮಾಡಬೇಕಾದರೆ ನಾಲ್ಕು ಐದು ಸಾವಿರ ರೂಪಾಯಿಗಳ ಬೇಕು. ಆ ಐದು ಸಾವಿರ ರೂಪಾಯಿಗಳನ್ನು ಇಲ್ಲಿರುವವರು ಅಲ್ಲಿ ಇನ್‌ವೆಸ್ಟ್ ಮಾಡಲಿಕ್ಕೆ ತಯಾರಿಲ್ಲ. ಟೆನೆಂಟಿಗೆ ಸಾಮರ್ಥ್ಯವಿಲ್ಲ.

ರಾಯಚೂರು ಡಿಸ್ಟ್ರಿಕ್ಟ್‌ನಲ್ಲಿ ಬೇಕಾದಷ್ಟು ಅಂಥ ನಿದರ್ಶನಗಳನ್ನು ತೋರಿಸುತ್ತೇನೆ. 60 -70 ಮಂದಿ ಇರಬಹುದು. ಅವರು ಜಮೀನನ್ನು ತೆಗೆದುಕೊಂಡು ಅದನ್ನು ಅಭಿವೃದ್ಧಿ ಮಾಡಿಲ್ಲ. ಇನ್ನು ಎರಡನೆಯದು ಜಮೀನು ಇದ್ದು ಕೂಡಾ ಅಷ್ಟು ಫಲವತ್ತಾದ ಜಮೀನು ಅದು ಎಂಬುದು ಅವರಿಗೆ ಗೊತ್ತಿಲ್ಲ. ಆದ್ದರಿಂದ ಸರಕಾರದವರು ಪ್ರಾಪಗೇಟ್ ಮಾಡಬೇಕು. ಯಾರು ಬಡಜನರು ಇರುತ್ತಾರೆ ಸರಿಯಾದ ಅನುಕೂಲತೆಗಳನ್ನು ಒದಗಿಸಿಕೊಡದಿದ್ದರೆ ಏನು ಪ್ರಯೋಜನವಾಗುವುದಿಲ್ಲ. ಯಾರೋ ಆಫೀಸರುಗಳು ಇರುತ್ತಾರೆ; ಎಂ.ಎಲ್.ಎ. ಗಳು ಮುಂಚೆ ಎಲೆಕ್ಷನ್‌ನಲ್ಲಿ ಉಪಯೋಗಕ್ಕೆ ಬರುತ್ತಾರೆ ಎಂದು ಹೇಳಿ ಅವರಿಗೆ ಭೂಮಿ ಕೊಡುವುದು ಇದೆ. ಲಕ್ಷಾವಧಿ ರೂಪಾಯಿ ವ್ಯಾಪಾರ ಮಾಡುವುದು, ಇಂಥವರು ನಮ್ಮ ತಾಲ್ಲೂಕಿನಲ್ಲಿ ಸಾಲ ತೆಗೆದುಕೊಂಡಿದ್ದಾರೆ, ಸಾಲ ಕೊಡುವುದು ಇದರಿಂದ ಏನೂ ಪ್ರಯೋಜನ ವಿಲ್ಲ. ಅಂಥವರು ನಿಜವಾಗಿಯೂ ಜಮೀನನ್ನು ಅಭಿವೃದ್ಧಿ ಮಾಡುತ್ತಾರೆಯೇ ಎಂದು ಕೇಳುತ್ತೇನೆ. ಸರಕಾರದವರು ಅಂಕಿ ಅಂಶಗಳನ್ನು ತರಿಸಿ ಜಮೀನನ್ನು ಪಡೆದವರು ಏಕೆ ಅದನ್ನು ಅಭಿವೃದ್ಧಿ ಮಾಡುತ್ತಿಲ್ಲ ಅವರಿಗೆ ತೊಂದರೆ ಏನಿದೆ ಎಂಬುದನ್ನು ನೋಡಬೇಕು. ಕೆನಾಲ್ ಏರಿಯಾದಲ್ಲಿ ಪ್ಲಾನು ಪ್ರೋಗ್ರಾಂ ಏನಿದೆ ಅದರ ಪ್ರಕಾರ ಕೆಲಸ ಕಾರ್ಯಗಳನ್ನು ಕಾರ್ಯರೂಪಕ್ಕೆ ತರದಿದ್ದರೆ ಅಲ್ಲಿರತಕ್ಕವರು ಬೆಳೆ ಬೆಳೆಯುವುದಕ್ಕೆ ಸಾಧ್ಯವಿಲ್ಲ. ಅನ್ನದ ಸಲುವಾಗಿ ಒಂದು ಹತೋಟಿಯನ್ನು ಹಾಕಬೇಕು, ನಮ್ಮ ದೇಶಕ್ಕೆ ಎಷ್ಟು ಅನ್ನಬೇಕು ಅಷ್ಟು ಅನ್ನವನ್ನು ಈ ಲ್ಯಾಂಡ್ ಡೆವಲೆಪ್ ಮಾಡತಕ್ಕ ಜನ ಬೆಳೆಯುತ್ತಾ ಇಲ್ಲಾ, ಕ್ಯಾಶ ಕ್ರಾಪ್‌ನ್ನು ಬೆಳೆಯುತ್ತಾ ಇದ್ದಾರೆ, ತಂಬಾಕು ಅರಳೆ ಬೆಳೆಯುತ್ತಾರೆ. ಆದ್ದರಿಂದ ಈ ಪದಾರ್ಥಗಳನ್ನು ಬೆಳೆಯುವುದನ್ನು ಲಿಮಿಟ್ ಮಾಡಿ ಗೋಧಿ, ಅಕ್ಕಿ ಜೋಳ ಬೆಳೆಯುವುದಕ್ಕೆ ಹೆಚ್ಚು ಒತ್ತಾಯ ಮಾಡಬೇಕು. ಶೇಕಡ 85 ಜನ ನಮ್ಮ ಹಳ್ಳಿಗಳಲ್ಲಿ ವಾಸ ಮಾಡತಕ್ಕವರು ಇದ್ದಾರೆ, ಅವರಿಗೆ ಸರಿಯಾದ ಒಂದು ಯೋಜನೆಯನ್ನು ಮಾಡಿಕೊಟ್ಟು ಅವರು ಅಕ್ಕಿ, ಜೋಳ, ಗೋಧಿ, ರಾಗಿ ಮುಂತಾದ ಆಹಾರ ಧಾನ್ಯಗಳನ್ನು ಬೆಳೆಯುವಂತೆ ಮಾಡಬೇಕು. ಈಗ ಕಬ್ಬು ವಿಶೇಷವಾಗಿ ಬೆಳೆದು ಸಕ್ಕರೆ ಉತ್ಪಾದನೆ ಮಾಡಿ ಅದನ್ನು ಹೊರದೇಶಗಳಿಗೆ ಕಳುಹಿಸುತ್ತಾ ಇದ್ದೇವೆ, ಶೇಂಗಾ ಬೆಳೆದು ಅದನ್ನೂ ಕೂಡಾ ಹೊರ ದೇಶಗಳಿಗೆ ಕಳುಹಿಸುತ್ತಾ ಇದ್ದೇವೆ. ಇದನ್ನೆಲ್ಲಾ ಸದಸ್ಯಕ್ಕೆ ನಿಲ್ಲಿಸಿ ಈಗ ಒದಗಿರತಕ್ಕ ಕ್ಷಾಮ ನಿವಾರಣೆ ಮಾಡಬೇಕೆಂದು, ಅಧ್ಯಕ್ಷರು ಇಷ್ಟು ಮಾತನಾಡಲು ಅವಕಾಶ ಕೊಟ್ಟದ್ದಾಕ್ಕಾಗಿ ಅವರನ್ನು ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## (21) ರಾಜ್ಯ ವಿದ್ಯುಚ್ಛಕ್ತಿ ಮಂಡಲಿಯ ಬಗ್ಗೆ*

ಸ್ವಾಮಿ, ಅಧ್ಯಕ್ಷರೆ, ಒಂದೆರಡು ಪಾಯಿಂಟ್‌ಗಳನ್ನು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ. ಈ ವಿದ್ಯುಚ್ಛಕ್ತಿ ಬೋರ್ಡ್‌ನವರು ವ್ಯವಸ್ಥಿತವಾದ ರೀತಿಯಲ್ಲಿ ಕೆಲಸ ಮಾಡುತ್ತಿಲ್ಲವೆಂದು ನನ್ನ ಆಪಾಧನೆ. ಕೆಲಸ ಸರಿಯಾಗಿ ನಡೆಯದೆ ಇರುವುದಕ್ಕೆ ಕಾರಣ, ಮೊದಲನೆಯದಾಗಿ ಅಲ್ಲಿ ಕೆಲಸಮಾಡುವವರಲ್ಲಿ 50 ಪರ್‌ಸೆಂಟ್ ಟೆಂಪರರಿಯಾಗಿರುವುದು, ಒಂದೊಂದು ಕಡೆ ಒಂದೊಂದು ರೂಲ್ಸ್ ಮಾಡುವುದು. ನಮ್ಮ ಗುಲ್ಬರ್ಗಾದಲ್ಲಿ ಯಾವ ತರಹದ ಸೌಲಭ್ಯವನ್ನೂ ಒದಗಿಸಿಲ್ಲ. ಈ ಬಡ್ಜೆಟ್ಟಿನಲ್ಲಿ ನಮ್ಮ ಗುಲ್ಬರ್ಗಾಕ್ಕೆ ನಾಲ್ಕು ಲಕ್ಷ ಹೆಚ್ಚು ಹಣ ಒದಗಿಸಿರುವುದು ಕಂಡುಬರುತ್ತಿದೆ. ಮೈಸೂರಿನ ಕೆಲವು ಭಾಗಗಳಲ್ಲಿ ಇರುವ ಲೈನ್‌ಗಳನ್ನೇ ದೊಡ್ಡದು ಮಾಡಿಕೊಂಡು ಹೋಗಬಹುದು. ಆದರೆ ಗುಲ್ಬರ್ಗಾದಲ್ಲಿ ಹೆಚ್ಚು ಹಣ ಖರ್ಚು ಮಾಡಿದರೂ ಸಹ ಕೆಲಸ ಹೆಚ್ಚು ಆಗುವುದಿಲ್ಲ. ಆದ್ದರಿಂದ ಮಾನ್ಯ ಮಂತ್ರಿಗಳಲ್ಲಿ ವಿನಂತಿ ಮಾಡಿಕೊಳ್ಳುವುದೇನೆಂದರೆ, 50 ಪರ್ಸೆಂಟ್ ವರ್ಕರ್ಸ್ಸ್ ಪರಮನೆಂಟ್ ಮಾಡಬೇಕು. ಅವರಿಗೆ ಸರಿಯಾದ ಸೌಲಭ್ಯಗಳನ್ನು ಒದಗಿಸಿಕೊಡಬೇಕು.

ಇಲ್ಲದೇ ಹೋದರೆ ಕೆಲಸಗಾರರು, ನಾವು ಹೇಗೂ ಟೆಂಪರರೀ ಕೆಲಸಗಾರರು, ಎಂದು ತಿಳಿದುಕೊಂಡು ಪೋಲ್ ನಿಲ್ಲಿಸುವಾಗ ಸರಿಯಾಗಿ ಸಿಮೆಂಟ್ ಹಾಕದೆ ಕಲ್ಲು ಮಣ್ಣು ತುಂಬುತ್ತಾರೆ. ಇದರಿಂದ ಸರಿಯಾಗಿ ಲೈಟ್‌ಗಳು ಹತ್ತುವುದಿಲ್ಲ. ಇವರು ನೆಡುವ ಕಂಬಗಳನ್ನು ಸೂಪರ್‌ವೈಜರ್‌ಗಳು, ಜೂನೀಯರ್ ಇಂಜನೀಯರ್‌ಗಳು, ಅಸಿಸ್ಟೆಂಟ್ ಇಂಜಿನೀಯರ್‌ಗಳು ಸರಿಯಾಗಿ ನೋಡುವುದಿಲ್ಲ. ಇವರುಗಳಿಗೆ ಸರಿಯಾದ ಸೌಲಭ್ಯಗಳನ್ನು ಒದಗಿಸುವುದಿಲ್ಲ, ಸೈಕಲ್‌ಗಳನ್ನು ಬಾಡಿಗೆಗೆ ತೆಗೆದುಕೊಂಡು ಹೋಗಬೇಕು. ಆದ್ದರಿಂದ ಇವರುಗಳಿಗೆ ಸರಿಯಾದ ಸೌಲಭ್ಯಗಳನ್ನು ಒದಗಿಸಿಕೊಡಬೇಕು.

ಎರಡನೆಯದಾಗಿ ಇಂಟರ್ ಸ್ಟೇಟ್ ಪವರ್ ಸಪ್ಲೈ ಸಲುವಾಗಿ ಹೇಳಬೇಕಾಗಿದೆ.

ಸಭಾಧ್ಯಕ್ಷರು: ಎಲ್ಲಿಯವರೆಗೆ ನಾವು ಇಲ್ಲಿ ಕೂಡಬೇಕಾಗುತ್ತದೆ? ನಾವು ಸಾಯಂಕಾಲ 7 ಗಂಟೆಯವರೆಗೆ ಕೂಡಬಹುದೇ?

ಆದರಣೀಯ ಸದಸ್ಯರು: ಹೌದು.

ಸಭಾಧ್ಯಕ್ಷರು: ಅದರಂತೆಯೇ ನಾವು ಸಾಯಂಕಾಲ 7 ಗಂಟೆಯವರೆಗೆ ಕೂಡಬಹುದು. ಅವರ ಉತ್ತರ ಸಾಯಂಕಾಲ 7 ಗಂಟೆಗೆ ಪ್ರಾರಂಭವಾಗಬಹುದು. ಅಲ್ಲಿಯವರೆಗೆ ಚರ್ಚೆ ಮುಂದುವರೆಯುವುದು.

---

* ವಿಧಾನಸಭೆಯ ನಡವಳಿಕೆಯ ದಿನಾಂಕ 21ನೇ ಜುಲೈ, 1966

ಗಂಗಾಧರ ನಮೋಶಿ: ಈ ವರದಿಯಲ್ಲಿ ಈ ತರಹ ಇದೆ. "ಭೀಕರ ಮಳೆಯ ವಿಫಲತೆಯಿಂದ ಮದ್ರಾಸ್ ಮತ್ತು ಆಂಧ್ರ ಪ್ರದೇಶ ರಾಜ್ಯಗಳು ವಿದ್ಯುತ್‌ಶಕ್ತಿಗಾಗಿ ಸಹಾಯ ಕೋರಿದ್ದಾಗ, ಅವರುಗಳಿಗೆ ಅದನ್ನು ಸರಬರಾಜು ಮಾಡಲು ಸಾಧ್ಯವಾಯಿತು. ಅದಕ್ಕಾಗಿಯೋ, ಬೆಂಗಳೂರಿನಿಂದ ಹೊಸೂರುವರೆಗೆ (ಮದ್ರಾಸ್ ಸರಹದ್ದು ಕಡೆ) 220 ಕೆ.ವಿ. ಮಾರ್ಗವನ್ನು ಕಟ್ಟಿಸಲಾಯಿತು" ಬೇರೆ ಕಡೆ ನಾವು ನೋಡುತ್ತೇವೆ. ಉತ್ತರ ಪ್ರದೇಶದಿಂದ ಹಿಡಿದು ಮಧ್ಯ ಪ್ರದೇಶದವರೆಗೂ ಕೊಟ್ಟಿರತಕ್ಕ ಲೈನನ್ನು ನೋಡಿದರೆ ಉತ್ತರ ಪ್ರದೇಶದ ಪ್ರಭಾವ ಡೆಲ್ಲಿಯಲ್ಲಿ ಬೇಕಾದಷ್ಟು ಇದೆ ಎಂದು ಗೊತ್ತಾಗುತ್ತದೆ. ಇದನ್ನು ನಾವು ಪೇಪರ್‌ಗಳಲ್ಲಿ ನೋಡುತ್ತಿರುತ್ತೇವೆ. ಆದರೆ ಕೇಂದ್ರ ಸರ್ಕಾರದವರು ನಮ್ಮ ರಾಜ್ಯಕ್ಕೆ ಮಾಡುತ್ತಿರುವ ಅನ್ಯಾಯವನ್ನು ಸಹಿಸಿಕೊಂಡು ಸಹ ಅವರ ಒಂದು ಪ್ರಭಾವಕ್ಕೆ ಒಳಗಾಗಿ ಆಂಧ್ರದವರಿಗೆ, ಮದ್ರಾಸ್‌ನವರಿಗೆ, ಗೋವಾದವರಿಗೆ ಪವರ್ ಕೊಡುತ್ತಿದ್ದಾರೆ. ನಮ್ಮ ಭಾಗಗಳಿಗೆ ಪವರ್ ಕೊಡಲು ಸಲಕರಣೆಗಳಿಲ್ಲವೆಂದು ಹೇಳುತ್ತಾರೆ. ಅಂದರೆ ಮದ್ರಾಸ್ ರಾಜ್ಯದ ಕಾಮರಾಜರ ಪ್ರಭಾವಕ್ಕೊಳಗಾಗಿ ಪವರ್‌ನ್ನು ಕೊಡುತ್ತಿದ್ದೀರಿ. ಈ ರೀತಿ ದಯವಿಟ್ಟು ಮಾಡಬಾರದು. ಮದ್ರಾಸ್ ಸರ್ಕಾರದವರು ನಮ್ಮಿಂದ 9 ಪೈಸೆ ಲೆಕ್ಕದಲ್ಲಿ ಪವರನ್ನು ತೆಗೆದುಕೊಂಡು ಅದನ್ನು 13 ಪೈಸೆಗೆ ಬೇರೆಯವರಿಗೆ ಮಾರುತ್ತಿದ್ದಾರೆ. ಇದರಿಂದ ನಮ್ಮ ರಾಜ್ಯಕ್ಕೆ 50 ಪರಸೆಂಟ್ ಲಾಸಾಗುತ್ತದೆ. ಯಾವುದೋ ಕೇಂದ್ರದಲ್ಲಿರುವ ಅಧ್ಯಕ್ಷರ ಪ್ರಭಾವಕ್ಕೊಳಗಾಗಿ, ತಮಗೆ ಈಗಿರುವ ಕೆಲಸ ಉಳಿದುಕೊಳ್ಳುವಂತೆ ಮಾಡಿಕೊಳ್ಳಲು, ತಮ್ಮ ಪಾರ್ಟಿಯವರಿಗೆ ಇನ್ನೂ 4-5 ಟಿಕೇಟ್‌ಗಳು ಹೆಚ್ಚು ಸಿಕ್ಕಿದರೆ ತಮ್ಮ ಮಂತ್ರಿ ಮಂಡಲವೇ ಇರುವುದು ಎಂದು ತಿಳಿದುಕೊಂಡು, ಅವರು 13 ಪೈಸೆಗೆ ಮಾರಿಕೊಳ್ಳುತ್ತಿರುವುದು ತಿಳಿದೂ ಸಹ 9 ಪೈಸೆಗೆ ಮಾರುತ್ತಿದ್ದಾರೆ.

ಅಧ್ಯಕ್ಷರು: ಕೇಂದ್ರ ಸರ್ಕಾರದ ಅಧ್ಯಕ್ಷರು ಯಾರು?

**ಗಂಗಾಧರ ನಮೋಶಿ:** ಕಾಂಗ್ರೆಸ್ ಅಧ್ಯಕ್ಷರಾದ ಕಾಮರಾಜರು. ನಮ್ಮ ಭಾಗಗಳಿಗೆ ಹೆಚ್ಚು ಹೆಚ್ಚು ಲೈನ್‌ಗಳನ್ನು ಹಾಕಿ ಎಂದರೆ ಕಂಬಗಳಿಲ್ಲ; ಟ್ರಾನ್ಸ್ ಫಾರ್ಮರ್ ಇಲ್ಲ, ವೈರ್ ಇಲ್ಲ, ಎಂದು ಹೇಳುತ್ತಾರೆ. ಅದೇ ಮದ್ರಾಸ್‌ನವರಿಗೆ, ಗೋವಾದವರಿಗೆ ಮತ್ತು ಆಂಧ್ರದವರಿಗೆ ಲೈನ್ ಕೊಡಲು ಎಲ್ಲಾ ಸಲಕರಣೆಗಳೂ ಇರುತ್ತವೆ. ನಮ್ಮ ಕಡೆಗೆ ಕೇವಲ ಒಂದು ಕೆ.ವಿ.ಲೈನ್ ಹಾಕುವುದಕ್ಕೆ ಸರ್ಕಾರದವರು ದುಡ್ಡು ಇಲ್ಲವೆಂದು ಹೇಳುತ್ತಾರೆ. ದಯವಿಟ್ಟು ಈ ರೀತಿ ಮಾಡಬಾರದು.

ಇನ್ನೊಂದು ವಿಷಯವೆಂದರೆ, ಈ ಕಾಂಗ್ರೆಸ್ ಸರ್ಕಾರದವರು ಆಂಧ್ರಕ್ಕೆ ತುಂಗಭದ್ರಾ ಜಲಾಶಯದ ನೀರನ್ನು ಕೊಟ್ಟಿರುವ ಕಾರಣ ಗುಲ್ಬರ್ಗಾಕ್ಕೆ ಹೆಚ್ಚಿನ ಹಾನಿಯಾಗುತ್ತದೆ. ಶರಾವತಿಯಿಂದ ಗುಲ್ಬರ್ಗಾಕ್ಕೆ ಪವರ್ ಬಂದಿದೆ. ಇದೇ ಗುಲ್ಬರ್ಗಾ ಡಿವಿಜನ್‌ಗೆ ಒಂದೇ

ಒಂದು ಲೈನ್ ಇರುವುದರಿಂದ ಆಗಾಗ್ಗೆ ಇನ್ಟರಪ್ಷನ್ ಆಗುವುದರಿಂದ ಪವರ್ ಹೋಗಿ ಲೈಟುಗಳು ಬಂದಾಗುತ್ತಾವೆ. ಇದರಿಂದ ಅನೇಕ ಸಾರಿ ಫ್ಯಾಕ್ಟರಿ ಕೆಲಸಗಳನ್ನು ನಿಲ್ಲಿಸಬೇಕಾಗುತ್ತದೆ ಈ ರೀತಿ ಕೆಲಸ ನಿಲ್ಲುವುದರಿಂದ 2 ಲಕ್ಷ ರೂಪಾಯಿಗಳ ನಷ್ಟ ಬರುತ್ತದೆ. ಕೆಲಸಗಾರರಿಗೆ ಸರಿಯಾಗಿ ಕೆಲಸ ಇರುವುದಿಲ್ಲ, ಇದಕ್ಕೆಲ್ಲಾ ಯಾರು ಹೊಣೆಗಾರರು? ಯಾವ ಆಧಾರದ ಮೇಲೆ ತುಂಗಭದ್ರಾ ಪವರ್ ಸ್ಟೇಷನ್ ಕೆಲಸ ನಿಲ್ಲಿಸಿ ಆಂಧ್ರದವರಿಗೆ ನೀರನ್ನು ಕೊಟ್ಟರಿ ಎಂಬುದನ್ನು ತಿಳಿಸಬೇಕು. ಈ ರೀತಿ ನೀರನ್ನು ಕೊಟ್ಟಿರುವುದರಿಂದ ಹೈದರಾಬಾದ್ ಸ್ಟೇಟ್‌ನಲ್ಲಿ ವಿವಿಧ ರೀತಿಯ ನೀರಾವರಿ ಸೌಕರ್ಯಗಳಿಗೆ ಅವಕಾಶವಾಗಿದೆ. ಆದ್ದರಿಂದ ಇನ್ನು ಮೇಲಾದರೂ ಸಣ್ಣ ಸಣ್ಣ ಕಾರ್ಖಾನೆಗಳವರಿಗೆ, ನೀರಾವರಿ ಕೆಲಸಗಳಿಗೆ ಹೆಚ್ಚು ಹೆಚ್ಚು ಪವರನ್ನು ಒದಗಿಸುವುದಕ್ಕೆ ಏರ್ಪಾಡು ಮಾಡಬೇಕೆಂದು ವಿನಂತಿ ಮಾಡಿಕೊಂಡು, ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

(22) ರಾಜ್ಯ ಮರುವಿಂಗಡಣಾ ಕಾಯ್ದೆಯ - ಏಕ ಸದಸ್ಯ ಆಯೋಗದ ಬಗ್ಗೆ *

ಸ್ವಾಮಿ, ಅಧ್ಯಕ್ಷರೆ, ಏಕ ಸದಸ್ಯ ಆಯೋಗ' ಕ್ಕೆ ನಾನು ವಿರೋಧ ಮಾಡುತ್ತಾ ಕೆಲವು ವಿಚಾರಗಳನ್ನು ಹೇಳುತ್ತೇನೆ. ಈ ದೇಶದಲ್ಲಿ ಆಹಾರ ಪರಿಸ್ಥಿತಿ ಹದಗೆಟ್ಟು ಹೋದಾಗ ರೂಪಾಯಿನ ಅಪಮೌಲ್ಯ ಮಾಡಿದ ನಂತರ, ಇದಕ್ಕೆ ಈ ಕಾಲದಲ್ಲಿ ಅವಶ್ಯಕತೆ ಇತ್ತೋ ಅಥವಾ ಇಲ್ಲವೋ ಎನ್ನುವ ಪ್ರಶ್ನೆ ಬರುತ್ತದೆ. ಈ ಕಾಲದಲ್ಲಿ ಯಾವಾಗಲೂ ಸರ್ಕಾರದ ಧೋರಣೆ ಏನು ಇದೆ ಎಂದರೆ, ಜನರು ಯಾವುದಾದರೂ ಒಂದು ಬೇಡಿಕೆ ಬೇಡಿದರೆ ಅವರ ದೃಷ್ಟಿಯನ್ನು ಬೇರೆ ಕಡೆ ತಿರುಗಿಸಿ ಆ ಪ್ರಶ್ನೆಯನ್ನು ಹಿಂದಕ್ಕೆ ಹಾಕಿ ಬೇರೆ ಪ್ರಶ್ನೆಯನ್ನು ಉದ್ಭವಿಸಿ ಜನರಲ್ಲಿ ಒಬ್ಬರಿ ಗೊಬ್ಬರಿಗೆ ವೈಮನಸ್ಸು ಉಂಟು ಮಾಡುವುದು. ನಿಮಗೆ ಹೇಳಬೇಕಾದರೆ ಆಂಧ್ರದಲ್ಲಿ 80 ಪೈಸೆಗೆ ಒಂದು ಕೆ.ಜಿ. ಅಕ್ಕಿ ಸಿಕ್ಕುತ್ತದೆ. ಸ್ವಲ್ಪ ನಮ್ಮ ಬಾರ್ಡ್ರ್‌ಗೆ ಬಂದರೆ, ನಮ್ಮ 1 ರೂಪಾಯಿ 40 ಪೈಸೆಗೆ ಒಂದು ಕೆ.ಜಿ. ಅಕ್ಕಿ ಸಿಕ್ಕುತ್ತದೆ. ಸೋಲಾಪುರಕ್ಕೆ ಹೋದರೆ ಎರಡೂವರೆ ರೂಪಾಯಿ, ಪೂನಾ, ಬೊಂಬಾಯಿಗೆ, ಹೋದರೆ 4 ರೂಪಾಯಿ, ಮಹಾರಾಷ್ಟ್ರದವರನ್ನು ಅಕ್ಕಿ ಕೊಡಿರಿ ಎಂದು ಹೇಳಿದರೆ ಬೆಳಗಾಮ್ ಕೊಡುತ್ತೀರಾ ಎಂದು ಕೇಳುತ್ತಾರೆ. ಮಹಾರಾಷ್ಟ್ರದವರು ನಮ್ಮ ಮೇಲೆ ಪ್ರಭಾವ ಬೀರಿ ಈ ರೀತಿ ವೈಮನಸ್ಸು ಮಹಾರಾಷ್ಟ್ರ ಕನ್ನಡ ಜನಗಳಲ್ಲಿ ಬರುತ್ತಾ ಇದೆ. ಇದಕ್ಕೆ ಜವಾಬ್ದಾರರು ಯಾರು? ಎರಡು ಪ್ರಾಂತಗಳ ಕಾಂಗ್ರೆಸ್ ಮಂಡಲಿಗಳು, ಕಾಂಗ್ರೆಸ್ ಸಂಸ್ಥೆ ಜವಾಬ್ದಾರರು ಎಂದು ಒತ್ತಿ ಹೇಳಬೇಕಾಗಿದೆ. ಯಾವ ವೇಳೆಯಲ್ಲಿ ಅಕ್ಕಿ ಕೊಡಿರಿ ಎಂದರೂ ಬೆಳಗಾಮ್ ಕೊಡುತ್ತೀರಾ ಎಂದು ಕೇಳುತ್ತಾರೆ. ಜೋಳ ಕೊಡರಿ ಎಂದರೂ ಬೆಳಗಾಮ್ ಕೊಡುತ್ತೀರಾ ಎನ್ನುತ್ತಾರೆ. ಅಷ್ಟೇ ಅಲ್ಲ ಮಹಾರಾಷ್ಟ್ರ ಪ್ರಶ್ನೆ ಬರೀ ಕರ್ನಾಟಕದ ಜೊತೆಯಲ್ಲಿ ಅಲ್ಲ ಮಹಾರಾಷ್ಟ್ರದ ಪ್ರಶ್ನೆ ಗುಜರಾತ್ ಜೊತೆಗೂ ಇದೆ. ಇದೇ ಕಾಲಕ್ಕೆ ಈ ಕಮೀಷನ್ ಗುಜರಾತ್ ಭಾಗ ಸೇರಿಸಬೇಕು ಎಂದು ಹೇಳಲಿಲ್ಲ. ಮಾನ್ಯ ಮುಖ್ಯ ಮಂತ್ರಿಗಳ ಸ್ವಭಾವ ಮೈಸೂರಿಗೆ ಅಲ್ಲ ಜಗತ್ತಿಗೆಲ್ಲಾ ಗೊತ್ತಿದೆ. ಯಾರು ಏನು ಹೇಳಿದರೂ ಒಪ್ಪಿಕೊಂಡು ಬರುವುದು. ಅವರು ಆಗಲಿ, ಎಂದು ಒಪ್ಪಿಕೊಂಡು ಬಂದಿದ್ದಾರೆ; ಕೇರಳದ ಕಾಸರಗೋಡನ್ನು ಸೇರಿಸುತ್ತೇನೆ ಎಂದು ಹೇಳುತ್ತಾರೆ. ನಾನು ಹೇಳುತ್ತೇನೆ ಕಾಸರಗೋಡು ಸಿಕ್ಕುವುದಿಲ್ಲ. ಆದರೆ ಮಹಾರಾಷ್ಟ್ರ ಸರ್ಕಾರದ ಪ್ರಭಾವ ಡಿಲ್ಲಿ ಸರ್ಕಾರದ ಮೇಲೆ ಇದ್ದ ಕಾರಣ ನಮ್ಮ ಭಾಗ ಕೈಬಿಟ್ಟು ಹೋಗುವುದು ನಿಜ. ನಮಗೆ ಏತಕ್ಕೆ ಸಿಕ್ಕುವುದಿಲ್ಲ ಎಂದು ಹೇಳುತ್ತೇನೆ; ಕೇಳಿ. ಮೈಸೂರು ಮುಖ್ಯ ಮಂತ್ರಿಗಳೂ ಮಹಾರಾಷ್ಟ್ರ ಮುಖ್ಯಮಂತ್ರಿಗಳೂ ಇಬ್ಬರೂ ಒನ್ ಮ್ಯಾನ್ ಕಮೀಷನ್ನಿಗೆ ಒಪ್ಪಿಕೊಂಡರೂ, ಆಗಲೇ ಕೇರಳದ ಗವರ್ನರ್ ನಾನು ಒಪ್ಪುವುದಕ್ಕೆ ತಯಾರಿಲ್ಲ ಎಂದು ಹೇಳಿದ್ದಾರೆ. ಗಂಡ ಹೆಂಡತಿ ಇಬ್ಬರೂ ಒಪ್ಪಿದ ಮೇಲೆ ಏನು ಮಾಡುತ್ತೀರಿ? ಯಾವುದೇ ಮಂತ್ರ ಹೇಳಿ ಲಗ್ನ ಮಾಡುತ್ತೀರಿ. ಕೇರಳದ ಗವರ್ನರ್ ಒಪ್ಪಲಿಲ್ಲ ಎಂದು ಆ ಭಾಗವನ್ನು ಬಿಟ್ಟು ಬಿಟ್ಟು ಪ್ರಶ್ನೆ ಬಗೆಹರಿಸೋಣ ಎಂದು ಹೊರಡುತ್ತೀರಿ. ಈಗ ಬೆಳಗಾಮ್, ಗುಲಬರ್ಗಾ ಮುಂದೆ ಏನು ಬೇಕಾದರೂ ಕೇಳುತ್ತಾರೆ. ಅವರು ಯಾವುದಕ್ಕೂ ಹಿಂದು ಮುಂದು ನೋಡುವುದಿಲ್ಲ.

* ವಿಧಾನಸಭೆಯ ನಡವಳಿಕೆಯ ದಿನಾಂಕ 26ನೇ ಜುಲೈ, 1966

## ಪ್ರಶ್ನೋತ್ತರಗಳು

ವಿಷಯ: ಲೋಕಸೇವಾ ಆಯೋಗದ (ಕೆ.ಪಿ.ಎಸ್.ಸಿ) ಬಗ್ಗೆ ಕೇಳಿದ ಕೆಲವು ಪ್ರಶ್ನೆಗಳು

ಪ್ರಶ್ನೆ: ಶ್ರೀ ಗಂಗಾಧರ ಸಾಮೋಶಿ (ಗುಲಬಾರ್ಗ)

ಮಾರ್ಚ್ ಮತ್ತು ಸೆಪ್ಟೆಂಬರ್ 1962ರಲ್ಲಿ ನೋಟಿಫೈ ಆಯಿತು. ಆ ಕಾಲಾವಧಿಯಲ್ಲಿ ಪಿ.ಎಸ್.ಪಿ. ಮೆಂಬರುಗಳ ಪೈಕಿ ಕೆಲವು ಜನರ ಕಾಲಾವಧಿ ಮುಗಿಯುವ ಪ್ರಶ್ನೆ ಬಂದಿತ್ತೇ?

ಉತ್ತರ: ಶ್ರೀ ಎಸ್. ನಿಜಲಿಂಗಪ್ಪ (ಮುಖ್ಯಮಂತ್ರಿಗಳು)

ಅದನ್ನು ಈಗ ಹೇಳುವುದಕ್ಕೆ ಆಗುವುದಿಲ್ಲ. ಅವರ ಕಾಲಾವಧಿ ಏನು ಎಂದು ಕೇಳಿದ್ದರೆ ಹೇಳುತ್ತಾರೆ ಇದ್ದೆ.

ಪ್ರಶ್ನೆ: ಶ್ರೀ ಗಂಗಾಧರ ನಾಮೋಶಿ:

ಈ ಹುದ್ದೆಗಳಲ್ಲಿ ಪಿ.ಎಸ್.ಸಿ. ಮೆಂಬರುಗಳು ಮತ್ತು ಮಿನಿಸ್ಟರುಗಳ ಸಂಬಂಧೀಕರು ಎಷ್ಟು ಜನ ಇರಬಹುದು?

ಉತ್ತರ: ಶ್ರೀ ಎಸ್.ನಿಜಲಿಂಗಪ್ಪ (ಮುಖ್ಯಮಂತ್ರಿಗಳು):

ಅದೆಲ್ಲಾ ನ್ಯಾಯ ವಿಚಾರಣಾಧೀನ ಅಧಿಕಾರ.

ಪ್ರಶ್ನೆ: ಶ್ರೀ ಗಂಗಾಧರ ನಾಮೋಶಿ:

ಇಂಟರವ್ಯೂ ಆಯಿತು ಎಂದು ಹೇಳಿದಿ. ಓರಲ್ ಟೆಸ್ಟೇ ಅಥವಾ ರಿಟನ್ ಟೆಸ್ಟೇ?

### ರಾಜ್ಯಕ್ಕಾಗಿ ಸಮರ್ಪಕ ಸಾರಿಗೆ ಸವಲತ್ತುಗಳ ಸಲುವಾಗಿ ಕೈಕೊಂಡ ಕ್ರಮಗಳ ಬಗ್ಗೆ *

ಪ್ರಶ್ನೆ: ಶ್ರೀ ಗಂಗಾಧರ ನಮೋಶಿ (ಗುಲಬರ್ಗಾ):

ಕೈಗಾರಿಕೆ ಮತ್ತು ವಾಣಿಜ್ಯ ಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:

(ಎ) ಮಾನ್ಯ ಕೈಗಾರಿಕಾ ಮಂತ್ರಿಗಳು ತಿಳಿಸಿದ ಹಾಗೆ, ರಾಜ್ಯದಲ್ಲಿ ಸಾರಿಗೆ ಸವಲತ್ತುಗಳ ಕೊರತೆಯಿಂದಾಗಿ, ಭಾರಿ ಪ್ರಮಾಣದ ವ್ಯಾಪಾರವನ್ನು ನೆರೆ ರಾಜ್ಯಕ್ಕೆ ಬದಲಾಗಿಸಲಾಗಿದೆ.

(ಬಿ) ಈ ನಿಟ್ಟಿನಲ್ಲಿ ಸರಕಾರವು ಅಂದಾಜು ಮಾಡಿರುವುದೇ?

(ಸಿ) ರಾಜ್ಯಕ್ಕಾಗಿ ಸಮರ್ಪಕ ಸಾರಿಗೆ ಸವಲತ್ತುಗಳನ್ನು ಪಡೆಯಲು ಯಾವ

ಕ್ರಮಗಳನ್ನು ಕೈಗೊಳ್ಳಲಾಗಿದೆ ಎಂಬುದನ್ನು ತಿಳಿಸುವಿರಾ?

ಉತ್ತರ: ಶ್ರೀ ಕೆ. ಮಲ್ಲಪ್ಪ (ಕೈಗಾರಿಕೆ ಮತ್ತು ವಾಣಿಜ್ಯ ಮಂತ್ರಿಗಳು):

(ಎ) ಹೌದು.

(ಬಿ) ಇಲ್ಲ.

(ಸಿ) ಸಮರ್ಪಕ ಸಾರಿಗೆ ಮತ್ತು ಬಂದರು ಸವಲತ್ತುಗಳನ್ನು ಪಡೆಯಲು, ಕೇಂದ್ರ ಸರಕಾರವನ್ನು ಒತ್ತಾಯಿಸಲು ಪ್ರತಿಯೊಂದು ಅವಕಾಶವನ್ನು ಉಪಯೋಗಿಸಿಕೊಳ್ಳಲಾಗಿದೆ.

ಶ್ರೀ ಗಂಗಾಧರ ನಮೋಶಿ: (ಸಿ) ಗೆ ಉತ್ತರವಾಗಿ ಕೇಂದ್ರ ಸರಕಾರವನ್ನು ಸಮಯ ದೊರೆತಾಗಲೆಲ್ಲಾ ಒತ್ತಾಯ ಮಾಡಲಾಗುತ್ತಿದೆ ಎಂದು ಹೇಳಿದ್ದೀರಿ, ನಿಮ್ಮ ಒತ್ತಾಯಕ್ಕೆ ಕೇಂದ್ರ ಸರಕಾರದವರೇನಾದರೂ ಮಾನ್ಯತೆ ಕೊಟ್ಟಿದ್ದಾರೆಯೇ? ಅದಕ್ಕೇನಾದರೂ ಮಾನ್ಯತೆ ಉಂಟೇ? ಇದ್ದರೆ ಇದುವರೆಗೂ ಯಾವ ಯಾವ ಕೇಳಿಕೆಯ ಮೇಲೆ ಅವರು ಮಾನ್ಯತೆ ಕೊಟ್ಟಿದ್ದಾರೆ?

ಸಭಾಧ್ಯಕ್ಷರು: ಪ್ರಶ್ನೆಯನ್ನು ಒಪ್ಪಲಾಗುವುದಿಲ್ಲ. ರಾಜ್ಯ ಸರಕಾರದ ಸಲುವಾಗಿ, ಕೇಂದ್ರ ಸರಕಾರಕ್ಕೆ ಹೆಚ್ಚಿನ ಗೌರವವಿದೆ. ಅದರ ಬಗ್ಗೆ ಯಾವ ಸಂದೇಹವಿಲ್ಲ.

ಗಂಗಾಧರ ನಮೋಶಿ: ಹಾಗಾದರೆ, ಪೂನಾದಿಂದ ಬೆಂಗಳೂರಿನವರೆಗೆ ಬ್ರಾಡ್‌ಗೇಜ್ ಹಾಕುತ್ತೇವೆ ಎಂದು ಹೇಳಿದ್ದುದನ್ನು ಪತ್ರಿಕೆಯಲ್ಲಿ ಓದಿದ್ದೆವು ಮತ್ತು ಆ ರೀತಿ ಒಂದು ಭರವಸೆಯನ್ನು ಕೊಟ್ಟಿದ್ದಾರೆ ಎಂದು ಈ ಸಭೆಯಲ್ಲೂ ಹೇಳಿದ್ದೀರಿ. ಈಗ ಕೇಳುತ್ತಾ ಇದ್ದೇವೆ. ಅದು ಪೂನಾದಿಂದ ಮಿರಜ್‌ವರೆಗೆ ಮಾತ್ರ ಹಾಕುತ್ತಾರೆ ಮತ್ತು ಅದನ್ನು ಮುಂದುವರಿಸುವುದಿಲ್ಲ ಎಂದು ಇದಕ್ಕೆ ಕಾರಣವೇನು? ಈ ಬಗ್ಗೆ ಸರ್ಕಾರದವರು ಏನು ಕಾರ್ಯಕ್ರಮ ತೆಗೆದುಕೊಂಡಿದ್ದಾರೆ?

ಶ್ರೀ ಕೆ. ಮಲ್ಲಪ್ಪ: ಬೆಂಗಳೂರಿನಿಂದ ಪೂನಾದವರೆಗೂ ಬ್ರಾಡ್‌ಗೇಜ್ ಮಾಡಬೇಕೆಂದು ಇಂಡಿಯಾ ಸರ್ಕಾರದವರಿಗೆ ಹೇಳಿದ್ದೇವೆ.

(3) ವಿಷಯ: ಹೈದ್ರಾಬಾದ್ - ಕರ್ನಾಟಕ ಪ್ರದೇಶಕ್ಕೆ ತುಂಗಭದ್ರಾ ಹೈಡ್ರೋ ಎಲೆಕ್ಟ್ರಿಕ್ ಕಾಮಗಾರಿಗಳಿಂದ ವಿದ್ಯುತ್ ಪೂರೈಕೆ.

ಪ್ರಶ್ನೆ: ಶ್ರೀ ಗಂಗಾಧರ ನಮೋಶಿ:-

ಮಾನ್ಯ ಮುಖ್ಯಮಂತ್ರಿಗಳು, ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:

(ಎ) ತುಂಗಭದ್ರಾ ಹೈಡ್ರೋ ಎಲೆಕ್ಟ್ರಿಕ್ ಕಾಮಗಾರಿಗಳಿಂದ ಹೈದರಾಬಾದ್ ಕರ್ನಾಟಕಕ್ಕೆ ಎಂದಿನಿಂದ ವಿದ್ಯುತ್ ಪೂರೈಕೆ ಮಾಡಲಾಗುವುದೆಂಬುದನ್ನು

(ಬ) ಈ ಮೂಲದಿಂದ ವಿದ್ಯುಚ್ಛಕ್ತಿಯ ಪ್ರಮಾಣವು ಲಭ್ಯವಿರುವ ಬಗ್ಗೆ ಈ ವಿದ್ಯುಚ್ಛಕ್ತಿಗೆ, ಹೈದರಾಬಾದ್ ಕರ್ನಾಟಕ ಪ್ರದೇಶದಿಂದ ಇರುವ ವಿವಿಧ ಗ್ರಾಹಕರ ಬೇಡಿಕೆಯ ಬಗ್ಗೆ.

(ಕ) ಯೋಜನೆಗಾಗಿ ಬೇಕಾಗುವ ಒಟ್ಟು ಖರ್ಚಿನ ಬಗ್ಗೆ (ಎಲ್ಲ ವಿವರಗಳೊಂದಿಗೆ)

(ಡ) ಗುಲಬರ್ಗಾ ಮತ್ತು ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿನ ವಿದ್ಯುತ್‌ಚ್ಛಕ್ತಿಯ ಕೊರತೆಯನ್ನು ನಿವಾರಿಸಲು, ತುಂಗಭದ್ರಾ ಹೈಡ್ರೋ ಎಲೆಕ್ಟ್ರಿಕ್ ಯೋಜನೆಯು ಪೂರ್ಣಗೊಳ್ಳುವ ತನಕ ಯಾವುದಾದರೂ ಪರ್ಯಾಯ ವ್ಯವಸ್ಥೆಯನ್ನು ಮಾಡಿರುವುದರ ಬಗ್ಗೆ.

ಉತ್ತರ: ಎಸ್. ನಿಜಲಿಂಗಪ್ಪ (ಮುಖ್ಯಮಂತ್ರಿಗಳು):

(ಅ) 1963ರ ಮಧ್ಯದಿಂದ.

(ಬ) 18,000 ಕಿಲೋ ವ್ಯಾಟ್.

ಪ್ರಸ್ತುತ್ - ವಿದ್ಯುಚ್ಛಕ್ತಿಗಾಗಿ ಇರುವ ಬೇಡಿಕೆ.

ದಿನದ ವಿದ್ಯುಚ್ಛಕ್ತಿ - 13,230 ಕಿಲೋ ವ್ಯಾಟ್.

ರಾತ್ರಿ ವಿದ್ಯುಚ್ಛಕ್ತಿ - 12, 265 ಕಿಲೋ ವ್ಯಾಟ್.

ಉದ್ಯಮಿಯ ಮತ್ತು - 10, 575 ಕಿಲೋ ವ್ಯಾಟ್.

ನೊಂದಾಯಿಸಿದ

ಹೆಚ್ಚುವರಿ:

(ಕ) 312,17,811,00 (ವಿವರ ಕೆಳಗಡೆ ಲಗತ್ತಿಸಲಾಗಿದೆ).

## ತುಂಗಭದ್ರಾ ಹೈಡ್ರೋ-ಎಲೆಕ್ಟ್ರಿಕ್ ಪ್ರಾಜೆಕ್ಟ್‌ನ ಮುನಿರಾಬಾದ್ 1962ರ ಫೆಬ್ರವರಿ ತನಕ ಖರ್ಚು ಮಾಡಲಾದ ಒಟ್ಟು ಖರ್ಚಿನ ವಿವರ

| | ವಿಷಯ | ಅಂದಾಜು ವೆಚ್ಚ | ಒಟ್ಟು ಖರ್ಚು ಮಾಡಲಾದ ಹಣ ಫೆಬ್ರವರಿ, 1962ರ ಅಂತ್ಯದವರೆಗೆ | ವೆಚ್ಚ ಮಾಡಬೇಕಾದ ವಿವರ |
|---|---|---|---|---|
| 1. | ಸಿವಿಲ್ ಕಾಮಗಾರಿಗಳು- | 129,55,00 | 83,17,936 | 46,37,064 |
| 2. | ಇನ್‌ಟೇಕ್ ಗೇಟ್ ಮತ್ತು ಡ್ರಾ ಫ್ಟ್ ಟ್ಯೂಬ್ ಸಾಮಗ್ರಿ | 12,84,000 | 9,06,154 | 3,77,846 |
| 3. | .ಜನರೇಟಿಂಗ್ ಪ್ಲ್ಯಾಂಟ್ ಮತ್ತು ಔಟಡೋರ್ ಸ್ವಿಚ್ ಗಿಯರ್ ಸಾಮಗ್ರಿ. | 156,46,000 | 8,26,637 | 75,19,363 |
| 4. | ಸಬ್ - ಸ್ಟೇಷನ್ಸ್ | 65,40,000 | 28,53,130 | 36,85,861 |
| 5. | 110 ಕೆ.ವಿ., 66 ಕೆ.ವಿ. ಮತ್ತು 33 ಕೆ.ವಿ. ಟ್ರಾನ್ಸ್‌ಮಿಶನ್ ಲೈನ್ಸ್ | 169,94,000 | 13,69,803 | 156,24,197 |
| 6. | 11 ಕೆ.ವಿ. ಡಿಸ್ಟ್ರಿಬುಶನ್ ಲೈನ್ಸ್ | 35,00,000 | 8,54,518 | 6,45,182 |
| 7. | ಎಸ್ಟಾಬ್ಲಿಷ್‌ಮೆಂಟ್ | 35,01,000 | 9,63,008 | 25,37,192 |
| 8. | ಇತರ ಮತ್ತು ಸಲಕರಣೆಗಳು ಮತ್ತು ಪ್ಲ್ಯಾಂಟ್ | ವಿಷಯ 3ರಲ್ಲಿ ಒದಗಿಸಿದೆ | 4,83,015 | ---- |
| 9. | ನೆಟ್ ಸಸ್ಪೆನ್ಸ್ | ---- | 53,27,179 | ---- |
| | ಒಟ್ಟು | 604,20,000 | 292,02,189 | 312,17,811 |

(ಡ) ಹೌದು.

**ಪ್ರಶ್ನೆ: ಶ್ರೀ ಗಂಗಾಧರ ನಾಮೋಶಿ:-**

ನನ್ನ (ಬ) ಪ್ರಶ್ನೆಗೆ ಉತ್ತರವಾಗಿ ಹದಿನೆಂಟು ಸಾವಿರ ಕಿಲೋ ವ್ಯಾಟ್ ವಿದ್ಯುಚ್ಛಕ್ತಿ ಉತ್ಪತ್ತಿಯಾಗುತ್ತದೆ ಎಂದು ಹೇಳಿದ್ದೀರಿ, ಅದರಲ್ಲಿ ಎಷ್ಟು ಕಿಲೋ ವ್ಯಾಟ್ ವಿದ್ಯುಚ್ಛಕ್ತಿ ವೇಸ್ಟಾಗುತ್ತಿದೆ?

**ಉತ್ತರ: ಶ್ರೀ ಎಸ್. ನಿಜಲಿಂಗಪ್ಪ:-**

ಸುಮಾರು 12 ವರ್ಷಗಳ ಕಾಲ ಎರಡನೇ ಜನರೇಟರ್ ಪ್ರೊಡ್ಯೂಸ್ ಅನ್ನು

ಅಲ್ಲಿಂದ ಮುಂದಕ್ಕೆ ಕಳುಹಿಸುವುದಕ್ಕಾಗುವುದಿಲ್ಲ. ಅದನ್ನು ಬೇರೆ ಕಡೆಗೆ ಕಳುಹಿಸುವುದಕ್ಕೆ ಪ್ರಯತ್ನ ಮಾಡಬೇಕು. ಅಲ್ಲಿ ಬಹುಶಃ ಸಾವಿರಾರು ಕಿಲೋವ್ಯಾಟ್ ವಿದ್ಯುಚ್ಛಕ್ತಿ ಹಾಳಾಗುತ್ತ ಇರಬಹುದು.

ಪ್ರಶ್ನೆ:- ಶ್ರೀ ಗಂಗಾಧರ ನಮೋಷಿ:-

ನ್ಯೂ ಇಂಜಿನಿಯರಿಂಗ್ ಎ.ಸಿ.ಸಿ. ಫ್ಯಾಕ್ಟರಿಗೆ 1962ನೇ ಇಸವಿಯಲ್ಲಿ ವಿದ್ಯುಚ್ಛಕ್ತಿಯನ್ನು ಒದಗಿಸುತ್ತೇವೆಂದು ಹೇಳಿದ್ದೀರಿ. ಆದರೆ ಅಲ್ಲಿಗೆ ಇನ್ನೂ ವಿದ್ಯುಚ್ಛಕ್ತಿಯನ್ನು ಒದಗಿಸದೆ ಇರುವುದರಿಂದ ಅಲ್ಲಿ ಕೆಲವು ಎಕ್ಸ್‌ಟೆನ್‌ಷನ್ ವರ್ಕ್ಸ್ ನಿಂತಿದೆಯೆಂದು ಸರ್ಕಾರದವರ ಗಮನಕ್ಕೆ ಬಂದಿದೆಯೇ?

ಉತ್ತರ:- ಶ್ರೀ ಎಸ್. ನಿಜಲಿಂಗಪ್ಪ:

ಈ ವರ್ಷದ ಕೊನೆಯ ಒಳಗಾಗಿ ಅಲ್ಲಿಗೆ ವಿದ್ಯುಚ್ಛಕ್ತಿಯನ್ನು ಕೊಡಬೇಕೆಂದಿದ್ದೇವೆ. ಅಲ್ಲಿಗೆ ಸಾಮಾನುಗಳನ್ನು ಕಳುಹಿಸಲು ರೈಲ್ವೇ ಅನಾನುಕೂಲತೆ ಇದೆ. ಈಗ ಟ್ರಕ್ ಕಳುಹಿಸುತ್ತಿದ್ದೇವೆ. ಅದಷ್ಟು ಜಾಗ್ರತೆ ಲೈಟನ್ನು ಕೊಡುತ್ತೇವೆ.

(3) ವಿಷಯ:- ರಾಜ್ಯದ ಇತರ ಸ್ಥಳಗಳಲ್ಲಿ ಮತ್ತು ಬೆಂಗಳೂರು ನಗರದಲ್ಲಿ, ಖಾಸಗಿ ಸಂಸ್ಥೆಗಳು ನಿರ್ವಹಿಸುತ್ತಿರುವ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲೆಗಳ ಬಗ್ಗೆ.*

ಪ್ರಶ್ನೆ:- ಶ್ರೀ **ಗಂಗಾಧರ ನಮೋಶಿ**:- (ಗುಲಬರ್ಗಾ):

ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದ ಇತರ ಪ್ರದೇಶಗಳಲ್ಲಿ ಮತ್ತು ಬೆಂಗಳೂರು ನಗರದಲ್ಲಿ, ಖಾಸಗಿ ಸಂಸ್ಥೆಗಳು ನಿರ್ವಹಿಸುತ್ತಿರುವ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢ ಶಾಲೆಗಳಿಗೆ ಸರಕಾರದಿಂದ ಸಹಾಯ ಧನ ಎಷ್ಟು ಸಿಗುತ್ತದೆ ಎಂಬುದನ್ನು (ಅಂಕಿ ಸಂಖ್ಯೆಗಳೊಂದಿಗೆ)

(ಬ) ಆ ಶಾಲೆಗಳಲ್ಲಿ ಕೆಲಸ ಮಾಡುತ್ತಿರುವ ಶಿಕ್ಷಕರ ಸಂಖ್ಯೆಯನ್ನು,

(ಕ) ಖಾಸಗಿ ಶಾಲೆಗಳಲ್ಲಿನ ಶಿಕ್ಷಕರಿಗೆ ಸಂಬಳ ಕೊಡುತ್ತಿಲ್ಲವೆಂಬುದನ್ನು ಸರಕಾರದ ಗಮನಕ್ಕೆ ಬಂದಿಯೇ ಎಂಬುದನ್ನು (ಇಂದಿನವರೆಗೆ ಇರುವ ಮಾಹಿತಿಯೊಂದಿಗೆ)

(ಡ) ಸರಕಾರದಿಂದ ಸಹಾಯಧನ ಪಡೆಯುತ್ತಿರುವ ಶಾಲೆಗಳಲ್ಲಿ ಮತ್ತು ಸರಕಾರಿ ಶಾಲೆಗಳಲ್ಲಿ ಕೆಲಸ ಮಾಡುತ್ತಿರುವ ಶಿಕ್ಷಕರ ನಡುವೆ ಇತರ ಲಾಭಗಳ ವಿಷಯದಲ್ಲಿ ಏನಾದರೂ ವ್ಯತ್ಯಾಸ ಇದೆಯೇ, ಎಂಬುದನ್ನು;

(ಇ) ಸರಕಾರಿ ಶಾಲೆಗಳ ಶಿಕ್ಷಕರ ಮತ್ತು ಖಾಸಗಿ ಶಾಲೆಗಳ ಶಿಕ್ಷಕರ ಮಧ್ಯ ಯಾವ ತಾರತಮ್ಯ ಮಾಡದಂತೆ, ಸರಕಾರ ಯಾವ ಕ್ರಮವನ್ನು ಸೂಚಿಸುತ್ತದೆಂಬುದನ್ನು ತಿಳಿಸುವಿರಾ?

ಉತ್ತರ: ಶ್ರೀ ಎಸ್.ಆರ್.ಕಂಠಿ (ಶಿಕ್ಷಣ ಮಂತ್ರಿಗಳು):

| | | | ಬೆಂಗಳೂರು ನಗರ | ಇತರ ಪ್ರದೇಶಗಳು |
|---|---|---|---|---|
| (ಅ) | ಶಾಲೆಗಳು:- | | | |
| | ಪ್ರಾಥಮಿಕ ಶಾಲೆಗಳು | - | 161 | 2914 |
| | ಮಾಧ್ಯಮಿಕ ಶಾಲೆಗಳು | - | 66 | 70 |
| | ಪ್ರೌಢ ಶಾಲೆಗಳು | - | 48 | 489 |
| (ಬ) | ಶಿಕ್ಷಕರ ಸಂಖ್ಯೆ | | | |
| | ಪ್ರಾಥಮಿಕ ಶಾಲೆಗಳು | - | 1153 | 5588 |
| | ಮಾಧ್ಯಮಿಕ ಶಾಲೆಗಳು | - | 553 | 442 |
| | ಪ್ರೌಢ ಶಾಲೆಗಳು | - | 748 | 5759 |

* ವಿಧಾನಸಭೆಯ ನಡವಳಿಕೆಯು ದಿನಾಂಕ 21ನೇ ಸೆಪ್ಟೆಂಬರ್, 1963

(ಕ) ಇಲ್ಲ.

(ಡ) ಇಲ್ಲ. ಖಾಸಗಿ ಸಂಸ್ಥೆಗಳಲ್ಲಿ ಸಹಾಯಧನ ಪಡೆಯುವ ಶಾಲೆಗಳಲ್ಲಿ ಶಿಕ್ಷಕರು ಭವಿಷ್ಯ ನಿಧಿಯ (ಪ್ರಾವಿಡೆಂಟ್ ಫಂಡ್) ಲಾಭ ಪಡೆದರೆ, ಸರಕಾರಿ ಶಾಲೆಗಳ ಶಿಕ್ಷಕರು, ಪಿಂಚಣಿ (ಪೆನ್‌ಷನ್) ಯ ಲಾಭ ಪಡೆಯುತ್ತಾರೆ.

(ಇ) ಇಲ್ಲ. ಪಿಂಚಣಿ, ಗ್ರ್ಯಾಚುಟಿ ಮತ್ತು ವಿಮಾ ಲಾಭಗಳನ್ನು ಖಾಸಗಿ ಶಾಲೆಗಳ ಶಿಕ್ಷರಿಗ, ವಿಸ್ತರಿಸುವುದನ್ನು ಪೂರ್ಣಗೊಸಲಾಗುತ್ತಿದೆ.

ಪ್ರಶ್ನೆ:- ಶ್ರೀ **ಗಂಗಾಧರ ನಾಮೋಶಿ:**

ಸರ್ಕಾರದಿಂದ ಧನ ಸಹಾಯವನ್ನು ಪಡೆಯುತ್ತಿರುವಂಥ ಸ್ಕೂಲುಗಳಲ್ಲಿ ಉಪಾಧ್ಯಾಯರಿಗೆ ಎಲ್ಲ ತರಹ ಫೆಸಿಲಿಟೀಸ್ ಸಿಕ್ಕುತ್ತವೆಂದು ಹೇಳಿದ್ದೀರಿ. ಕೆಲವು ಸ್ಕೂಲುಗಳಲ್ಲಿ 8-9 ತಿಂಗಳುಗಳವರೆಗೂ ಉಪಾಧ್ಯಾಯರಿಗೆ ಸಂಬಳವನ್ನು ಕೊಡುವುದಿಲ್ಲ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಉತ್ತರ: ಶ್ರೀ ಎಸ್. ಆರ್. ಕಂಠಿ:

ಅದು ಬಂದಿಲ್ಲ.

ಪ್ರಶ್ನೆ: ಶ್ರೀ **ಗಂಗಾಧರ ನಾಮೋಷಿ:**

ಆ ತರಹ ಅರ್ಜಿಗಳೇನಾದರೂ ತಮ್ಮ ಹತ್ತಿರ ಬಂದಿವೆಯೇ?

ಉತ್ತರ: ಶ್ರೀ ಎಸ್.ಆರ್.ಕಂಠಿ:

ಆ ತರಹ ಅರ್ಜಿಗಳು ನಮಗೆ ಬಂದಿಲ್ಲ. ಮಾನ್ಯ ಸದಸ್ಯರು ಕೊಟ್ಟರೆ ಅದನ್ನು ತೋರಿಸುತ್ತೇನೆ.

ಪ್ರಶ್ನೆ: ಶ್ರೀ ಗಂಗಾಧರ ನಾಮೋಶಿ:

ಹಿಂದಿ ಪಾಠಶಾಲೆಗಳಲ್ಲಿರತಕ್ಕ ಮತ್ತು ಮಿಡಲ್ ಸ್ಕೂಲ್‌ಗಳಲ್ಲಿರತಕ್ಕ ಉಪಧ್ಯಾಯರುಗಳೇನಾದರೂ ಆ ವಿಷಯದಲ್ಲಿ ಅರ್ಜಿಯನ್ನು ಕಳುಹಿಸಿದ್ದಾರೆಯೇ?

ಉತ್ತರ: ಶ್ರೀ ಎಸ್.ಆರ್. ಕಂಠಿ:

ಈ ಮಾನ್ಯ ಸದಸ್ಯರು ಈಗತಾನೆ ನನ್ನ ಗಮನಕ್ಕೆ ತರುತ್ತಿದ್ದಾರೆ. ಅದನ್ನು ನಾನು ನೋಡುತ್ತೇನೆ.

ಪ್ರಶ್ನೆ: ಶ್ರೀ **ಗಂಗಾಧರ** ನಾಮೋಶಿ:

ಏಡೆಡ್ ಸ್ಕೂಲುಗಳಲ್ಲಿ ಸರಿಯಾದ ರೀತಿಯಿಂದ ನಡೆಯದೇ ಇರುವುದಕ್ಕೆ ಕಾರಣವೇನೆಂದರೆ 9 ತಿಂಗಳು, ಒಂದು ವರ್ಷದ ಮೇಲೆ ಗ್ರಾಂಟು ಕೊಡುತ್ತೀರಿ ಅದಕ್ಕೇ ಉಪಧ್ಯಾಯರಿಗೆ ಸಂಬಳ ಕೊಡುವುದಕ್ಕಾಗುವುದಿಲ್ಲ ಎಂದು ಗುಲ್ಬರ್ಗಾದಿಂದ ಯಾವುದಾದರೂ ಹೈಸ್ಕೂಲಿನ ರೆಪ್ರಸೆಂಟೇಷನ್ ಬಂದಿದೆಯೇ?

ಉತ್ತರ: ಶ್ರೀ ಎಸ್.ಆರ್. ಕಂಠಿ:

ಇಲ್ಲ.

ಉತ್ತರ: ಶ್ರೀ ಎಸ್. ನಿಜಲಿಂಗಪ್ಪ:

ಎರಡೂ ಮಾಡುತ್ತೇವೆ.

ವಿಷಯ:- ಗುಲಬರ್ಗಾ ಡೆಪ್ಯೂಟಿ ಕಮೀಷನರ ಅವರು ಗುಲ್ಬರ್ಗಾ ನಗರ ಮುನಿಸಿಪಾಲಿಟಿಯ ಕಟ್ಟಡವನ್ನು ಉಪಯೋಗಿಸಿ ಕೊಂಡಿರುವ ಬಗ್ಗೆ.*

ಪ್ರಶ್ನೆ: ಶ್ರೀ ಗಂಗಾಧರ ನಮೋಶಿ (ಗುಲ್ಬರ್ಗಾ):

ಮುನಿಸಿಪಲ್ ಆಡಳಿತದ ಮಾನ್ಯ ಉಪ ಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವಿರಾ?

(ಅ) ಗುಲಬರ್ಗಾ ಡೆಪ್ಯುಟಿ ಕಮೀಶನರರು, ತಿಂಗಳಿಗೆ ಕನಿಷ್ಟ ಬಾಡಿಗೆಗೆ ಕೊಟ್ಟು, ತಮ್ಮ ವಾಸಸ್ಥಾನಕ್ಕಾಗಿ, ಗುಲಬರ್ಗಾ ಸಿಟಿ ಮುನ್ಸಿಪಾಲಿಟಿಯ ಬೃಹತ ಕಟ್ಟಡವನ್ನು ಉಪಯೋಗಿಸಿಕೊಂಡಿರುವುದು ಸತ್ಯವೇ?

(ಬ) ಬಹಳ ಕಾಲದಿಂದಲೂ, ಆ ಕಟ್ಟಡ ಖಾಲಿ ಮಾಡುವಂತೆ ಗುಲಬರ್ಗಾ ಸಿಟಿ ಮುನ್ಸಿಪಾಲ್ಲಿಯವರು ಬೇಡಿಕೆ ಮಾಡುತ್ತಿರುವುದು ಸತ್ಯವೇ? ಹಾಗಿದ್ದರೆ, ಆ ವಿಷಯದಲ್ಲಿ ಇಲ್ಲಿಯವರೆಗೆ ಏಕೆ ಕ್ರಮ ಕೈಗೊಂಡಿರುವುದಿಲ್ಲ?

(ಕ) ಸೂಕ್ತ ಕಟ್ಟಡವಿಲ್ಲವಾದ್ದರಿಂದ ಗುಲ್ಬರ್ಗಾ ಸಿಟಿ ಮುಸಿಪಾಲಿಟಿಯ ಕಚೇರಿಯು ಟೌನ್‌ಹಾಲಿನಲ್ಲಿ ಇರುವುದು ನಿಜವೇ?

(ಡ) ಆ ಕಟ್ಟಡವನ್ನು ಡೆಪ್ಯುಟಿ ಕಮಿಶನರರು ಖಾಲಿ ಮಾಡುವುಂತೆ, ಸರಕಾರವು ನಿರ್ದೇಶನ ನೀಡುವರೇ?

ಉತ್ತರ: ರಾಮಚಂದ್ರ (ಮುನ್ಸಿಪಲ್ ಆಡಳಿತದ ಉಪ ಮಂತ್ರಿಗಳು):

(ಅ) ಹೌದು.

(ಬ) ಇಲ್ಲ. ಆ ಕಟ್ಟಡವನ್ನು ಸರಕಾರವು ಖರೀದಿಸಲು ಕ್ರಮ ಕೈಗೊಂಡಿದೆ. ಮುನ್ಸಿಪಾಲಿಟಿಯು ಆ ಕಟ್ಟಡವನ್ನು ಸರಕಾರಕ್ಕೆ ಮಾರಾಟ ಮಾಡಲು ಒಪ್ಪಿಕೊಂಡಿದೆ.

(ಕ) ಹೌದು.

(ಡ) ಆ ಪ್ರಶ್ನೆಯೇ ಇಲ್ಲ. ಏಕೆಂದರೆ, ಬ, ಪ್ರಶ್ನೆಗೆ ಈಗಾಗಲೇ ಉತ್ತರಿಸಲಾಗಿದೆ.

ಪ್ರಶ್ನೆ: ಶ್ರೀ ಗಂಗಾಧರ ನಮೋಶಿ:- ಈ ಮುನ್ಸಿಪಾಲಿಟಿಯ ಕಟ್ಟಡಕ್ಕೆ ಬಾಡಿಗೆ ಎಷ್ಟು ಕೊಡುತ್ತಿದ್ದಾರೆ?

ಉತ್ತರ: ಶ್ರೀ ವೈ. ರಾಮಚಂದ್ರ:- 31 ರೂಪಾಯಿ 42 ನಯೇಪೈಸೆ.

ಪ್ರಶ್ನೆ: ಶ್ರೀ ಗಂಗಾಧರ ನಮೋಶಿ:- ಈಗ ಹಾಲಿ ಇರುವ ಡೆಪ್ಯುಟಿ ಕಮಿಷನರವರು ಇರುವ ಹಾಲಿ ಮುನ್ಸಿಪಾಲಿಟಿಯ ಕಟ್ಟಡಕ್ಕಾಗಿ ಸುಮಾರು ಐದು, ಐದೂವರೆಸಾವಿರದಷ್ಟು

* ವಿಧಾನಸಭೆಯ ನಡವಳಿಕೆಯ ದಿನಾಂಕ 3ನೇ ಸೆಪ್ಟೆಂಬರ್, 1963

ಹಣವನ್ನು ಖರ್ಚು ಮಾಡುತ್ತಿದ್ದಾರೆನ್ನುವುದು ಸರಕಾರಕ್ಕೆ ಗೊತ್ತಿದೆಯೇ?

ಉತ್ತರ: ಶ್ರೀ ವೈ ರಾಮಚಂದ್ರ:- ಆ ರೀತಿಯಲ್ಲಿ ಮುನ್ಸಿಪಾಲಿಟಿಯವರು ಇಷ್ಟ ಪಟ್ಟಾಗ ಖರ್ಚು ಮಾಡುತ್ತಾರೆ.

ಪ್ರಶ್ನೆ: ಶ್ರೀ **ಗಂಗಾಧರ ನಮೋಶಿ:-** ಮುನ್ಸಿಪಾಲಿಟಿಯವರು ಇದು ಅವರಿಗೆ ಬೇಕಾಗಿಲ್ಲ ಮತ್ತು ಇದನ್ನು ಮೆಂಟೇನ್ ಮಾಡುವುದು ಕಷ್ಟ ಎಂದು ಸರಕಾರಕ್ಕೆ ತಿಳಿಸಿದುದರಿಂದ ಈಗ ಸರಕಾರ ಅದನ್ನು ತೆಗೆದುಕೊಂಡಿಯೇ?

ಉತ್ತರ: ಶ್ರೀ ವೈ. ರಾಮಚಂದ್ರ:- 14-8-1963ರಲ್ಲಿ ಮುನ್ಸಿಪಾಲಿಟಿಯವರು ಇದನ್ನು 25,000 ರೂಪಾಯಿಗಳಿಗೆ ಮಾರಲು ಮೊದಲು ಮುನ್ಸಿಪಾಲಿಟಿಯಲ್ಲಿ ನಿರ್ಣಯ ಮಾಡಿರುತ್ತಾರೆ ಮತ್ತು ಅದನ್ನು ಈಗ ಪಿ.ಡಬ್ಲ್ಯೂ.ಡಿ. ಕೊಂಡುಕೊಳ್ಳಲು ಒಪ್ಪಿದೆ.

ವಿಷಯು: ಗುಲಬರ್ಗಾ, ರಾಯಚೂರು ಮತ್ತು ಬೀದರ್‌ಗಳ ಭೂಗರ್ಭದ ಮ್ಯಾಪಿಂಗ್‌ನ * ಬಗ್ಗೆ.

ಪ್ರಶ್ನೆ: **ಗಂಗಾಧರ ನಮೋಶಿ:-**

ವಾಣಿಜ್ಯ ಮತ್ತು ಕೈಗಾರಿಕಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ?

(ಎ) ಗುಲಬರ್ಗಾ, ರಾಯಚೂರು ಮತ್ತು ಬೀದರ್ ಜಿಲ್ಲೆಗಳ ಭೂಗರ್ಭ ಮ್ಯಾಪಿಂಗ್ ಮಾಡಿದ ಬಗ್ಗೆ;

(ಬಿ) ಆ ಪ್ರದೇಶಗಳಲ್ಲಿ ಮಹತ್ವದ ಖನಿಜಗಳು ಲಬಿಸಿದ ಬಗ್ಗೆ (ಹಾಗಿದ್ದಲ್ಲಿ, ಅವುಗಳ ವಿವರಗಳ ಬಗ್ಗೆ);

(ಸಿ) ಆ ಖನಿಜಗಳನ್ನು ಸದುಪಯೋಗಗೊಳಿಸಲು ಯಾವುದಾದರೂ ಕಾರ್ಯ ಕ್ರಮಗಳನ್ನುಹಾಕಿಕೊಂಡ ಬಗ್ಗೆ ತಿಳಿಸುವಿರಾ.

ಉತ್ತರ: ಕೆ. ಮಲ್ಲಪ್ಪ (ಕೈಗಾರಿಕೆ ಮತ್ತು ವಾಣಿಜ್ಯ ಸಚಿವರು):-

(ಎ) ಹೌದು.

(ಬಿ) ಹೌದು ವಿವರ ಕೆಳಗಿನಂತಿದೆ

| | ಪ್ರದೇಶ | ಖನಿಜಗಳು |
|---|---|---|
| 1. | ಗುಲಬರ್ಗಾ | ಸುಣ್ಣದ ಕಲ್ಲು, ಫುಲರ್ಸ್ ಮಣ್ಣು, ಜಿಪ್ಸಮ್, ಕ್ವಾರ್ಟಜ್. |
| 2. | ಬೀದರ್ | ಚೀನಾ ಮಣ್ಣು. |
| 3. | ರಾಯಚೂರು | ಬಂಗಾರು, ಫೆಲ್ಡ್‌ಸ್ಪಾರ್, ಕ್ವಾರ್ಟ್ಜ್ |

(ಸಿ) ಕೆಲವು ಖನಿಜಗಳನ್ನು ಉಪಯೋಗಿಸಲಾಗುತ್ತದೆ.

**ಗಂಗಾಧರ ನಮೋಶಿ:-**

ಗುಲಬರ್ಗಾ ಜಿಲ್ಲೆಯಲ್ಲಿ ತಿಂತಿಣಿ ಹತ್ತಿರ ಕಬ್ಬಿಣ ಸಿಗುತ್ತದೆ ಎನ್ನುವುದು ಸರಕಾರಕ್ಕೆ ಗೊತ್ತಿದೆಯೇ?

**ಕೆ.ಮಲ್ಲಪ್ಪ:-** ಇಲ್ಲ.

**ಗಂಗಾಧರ ನಮೋಶಿ:-**

* ವಿಧಾನಸಭೆಯ ನಡವಳಿಕೆಯ ದಿನಾಂಕ ಡಿಸೆಂಬರ್, 1963

ಬೀದರು ಜಿಲ್ಲೆಯಲ್ಲಿ ಕಲ್ಯಾಣಿಯ ಬಳಿ ಬ್ಯಾಕ್ಸೈಟು ಸಿಕ್ಕುತ್ತದೆ ಎನ್ನುವುದು ಸರಕಾರಕ್ಕೆ ಗೊತ್ತಿದೆಯೇ?

**ಕೆ.ಮಲ್ಲಪ್ಪ:-** ಬ್ಯಾಕ್ಸೈಟು ಅಲ್ಲ. ಚೈನಾ ಕ್ಲೇ ಎನ್ನುವುದು ಸಿಕ್ಕುತ್ತದೆ ಎಂದು ಕಂಡು ಬಂದಿದೆ.

**ಗಂಗಾಧರ ನಮೋಶಿ:** ಕುಷ್ಟಗಿ ತಾಲ್ಲೂಕಿನಲ್ಲಿ ಕಬ್ಬಿಣದ ಅದಿರು ಸಿಕ್ಕುತ್ತದೆ ಎನ್ನುವುದು ಸರಕಾರಕ್ಕೆ ಗೊತ್ತಿದೆಯೇ?

**ಕೆ.ಮಲ್ಲಪ್ಪ:** ಇಲ್ಲ.

**ಗಂಗಾಧರ ನಮೋಶಿ:** ಫುಲ್ಲರ್ಸ್ ಆರ್ತ್‌ನ್ನು ಉಪಯೋಗ ಮಾಡಲು ಸರಕಾರ ಏನು ಕ್ರಮ ತೆಗೆದುಕೊಂಡಿದೆ?

**ಕೆ.ಮಲ್ಲಪ್ಪ:** ಇದನ್ನು ಪರಿಶೋಧನೆ ಮಾಡಲು ಲೈಸೆನ್ಸ್‌ನ್ನು ಕೊಡಲಾಗಿದೆ, ಇನ್ನೂ ಯಾವ ಯಾವ ಏರಿಯಾದಲ್ಲಿ ಸಿಕ್ಕುತ್ತದೆ ಎನ್ನುವುದನ್ನು ಪರಿಶೋಧನೆ ಮಾಡಲು ಪ್ರಯತ್ನ ನಡೆಯುತ್ತಿದೆ.

**ಗಂಗಾಧರ ನಮೋಶಿ:** ಫುಲ್ಲ್‌ರ್ಸ್ ಆರ್ತ್ ಏರಿಯಾ ಎಷ್ಟಿದೆ?

**ಕೆ. ಮಲ್ಲಪ್ಪ:** ಕೊರವಿ ಮತ್ತು ಚಿಂಚೋಳಿ ತಾಲ್ಲೂಕಿನಲ್ಲಿ ಸಿಕ್ಕಿದೆ. ಏರಿಯ ವಿವರ ನನ್ನಲ್ಲಿಲ್ಲ.

**ಗಂಗಾಧರ ನಮೋಶಿ:** ಫುಲ್ಲ್‌ರ್ಸ್ ಆರ್ತ್ ಬಗ್ಗೆ ರಾಜಾಸ್ಥಾನ ಮತ್ತು ಆಂಧ್ರ ಪ್ರದೇಶದಲ್ಲಿ ಯಾವ ಪಾಲಿಸಿ ಇದೆಯೋ ಅದನ್ನೇ ಇಲ್ಲಿಯೂ ಅನುಸರಿಸುತ್ತಿದ್ದೀರೋ, ಅಥವಾ ಪಾಲಿಸಿ ಬೇರೆ ಇದೆಯೋ?

**ಕೆ.ಮಲ್ಲಪ್ಪ:** ಇದರಲ್ಲಿ ಯಾವ ಪಾಲಿಸಿಯೂ ಇಲ್ಲ ಯಾವುದನ್ನು ಉಪಯೋಗಕ್ಕೆ ತರಬೇಕೋ ಅದನ್ನು ಉಪಯೋಗಕ್ಕೆ ತರುವ ಪ್ರಯತ್ನ ಮಾಡುತ್ತೇವೆ. ಇದು ಒಂದು ಚಿಕ್ಕ ಖನಿಜ.

**ವಿಷಯ:- ರಾಜ್ಯದಲ್ಲಿನ ಪಾನ ನಿಷೇಧ ನೀತಿಯನ್ನು ಬದಲಿಸುವ ಬಗ್ಗೆ** *

**ಗಂಗಾಧರ ನಮೋಶಿ: (ಗುಲಬರ್ಗಾ) (ಶ್ರೀ ಎ.ಕೃಷ್ಣಶೆಟ್ಟಿಯ ವತಿಯಿಂದ ಮಂಗಳೂರು)**

**ಕಾನೂನು ಸಚಿವರು ಈ ವಿಷಯವನ್ನು ದಯವಿಟ್ಟು ತಿಳಿಸುವರೆ:**

ರಾಜ್ಯದಲ್ಲಿ ಸದ್ಯದ ಪಾನ ನಿಷೇಧ ನೀತಿಯನ್ನು ಬದಲಾವಣೆ ಮಾಡಲು ಅಥವಾ ಸಡಿಲಿಸಲು ಸರಕಾರವು ಉದ್ದೇಶ ಹೊಂದಿರುವ ಬಗ್ಗೆ ತಿಳಿಸುವಿರಾ?

**ಉತ್ತರ: ಎಂ.ವಿ. ರಾಮರಾವ್ (ಕಾನೂನು ಮಂತ್ರಿಗಳು):**

ಕೇಂದ್ರ ಸರ್ಕಾರವು ನೇಮಿಸಿದ ಪಾನ ನಿಷೇಧ ಅಧ್ಯಯನ ತಂಡದ ವರದಿಯನ್ನು ನಿರೀಕ್ಷಿಸಲಾಗಿದೆ. ಆ ವರದಿಯ ಆಧಾರದ ಮೇಲೆ, ಸಧ್ಯದ ನೀತಿಯನ್ನು ಪರಿಗಣಿಸಲಾಗುವುದು.

ಗಂಗಾಧರ ನಮೋಶಿ: ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಯಲ್ಲಿ ಪಾನವನ್ನು ಕುಡಿಯಿರಿ ಬೇರೆ ಕಡೆ ಕುಡಿಯಬೇಡಿ ಎಂದು ಹೇಳುವುದು ಯಾವ ನ್ಯಾಯ ಸ್ವಾಮಿ?

(ಎಂ.ವಿ.ರಾಮರಾವ್)ಈ ಪ್ರಶ್ನೆಯಿಂದ ಅದು ಉದ್ಭವಿಸುವುದಿಲ್ಲ.

**ಗಂಗಾಧರ ನಮೋಶಿ:** ಬೇರೆ ಡಿಸ್ಟ್ರಿಕ್ಟ್‌ನ ಬೂಟ್‌ಲೆಗ್ಗರಿಗೆ ಏನು ಫೆಸಿಲಿಟೀಸ್ ಸರಕಾರದವರು ಕೊಟ್ಟಿದ್ದಾರೆಯೋ ಆ ಫೆಸಿಲಿಟೀಸ್‌ನ್ನು ಎಲ್ಲಾ ಕಡೆಗೂ ಕೊಡತಕ್ಕ ಇಚ್ಛೆ ಸರಕಾರಕ್ಕೆ ಇದೆಯೇ?

ಎಂ.ವಿ. ರಾಮರಾವ್: ಸರ್ಕಾರದವರು ಯಾವ ಬೂಟಲೆಗ್ಗರುಗಳಿಗೂ ಯಾವ ಫೆಸಿಲಿಟೀಸ್ ಅನ್ನೂ ಕೊಟ್ಟಿಲ್ಲ. ಮಾನ್ಯ ಸದಸ್ಯರು ಯಾವ ಬೂಟಲೆಗ್ಗರಿಗೆ ಯಾವ ಫೆಸಿಲಿಟೀಸ್ ಕೊಡಬೇಕೆಂದು ಹೇಳಿದರೆ ಅದನ್ನು ಆಲೋಚನೆ ಮಾಡೋಣ.

ಗಂಗಾಧರ ನಮೋಶಿ: ಆಂಧ್ರ ಪ್ರದೇಶದಲ್ಲಿ ಸ್ವೀಟ್ ಟಾಡಿಯನ್ನು ಜನರ ಸಹಾಯದ ಸಲುವಾಗಿ ಒದಗಿಸುತ್ತಿದ್ದಾರೆ. ಇಲ್ಲಿಯೂ ಅದನ್ನು ತರಬೇಕೆಂದು ಸರ್ಕಾರದವರು ಆಲೋಚನೆ ಮಾಡುತ್ತಾರೆಯೇ?

ಎಂ.ವಿ. ರಾಮರಾವ್: ಅದು ಮಾನ್ಯ ಸದಸ್ಯರ ಸಲಹೆ. ಅದನ್ನು ಪರಿಶೀಲನೆ ಮಾಡಿ ಆ ಬಗ್ಗೆ ಏನು ಮಾಡಬೇಕೆಂಬುದನ್ನು ನಿರ್ಧಾರ ಮಾಡುತ್ತೇನೆ.

ಗಂಗಾಧರ ನಮೋಶಿ: ಮಹಾರಾಷ್ಟ್ರ ಮತ್ತು ಆಂಧ್ರ ಸರ್ಕಾರದಲ್ಲಿ ಈ ಪಾನ ನಿರೋಧ ನೀತಿಯನ್ನು ಸಡಿಲಗೊಳಿಸಿ ಸರ್ಕಾರಕ್ಕೆ ಹರಾಜು ಮೂಲಕ ಹಣ ಬರುವಂತೆ ಯೋಚನೆ ಮಾಡಿದ್ದಾರೆ. ಅದೇ ರೀತಿ ನಮ್ಮ ಸಂಸ್ಥಾನದ ಸರ್ಕಾರವೂ ಆ ನೀತಿಯನ್ನು ಸಡಿಲಗೊಳಿಸಿ ನಮ್ಮ ಸರ್ಕಾರಕ್ಕೂ ಹಣ ಬರುವಂತೆ ಯೋಚನೆ ಮಾಡಬೇಕೆಂದೂ ಅದರಿಂದ ಜನಗಳಿಗೆ ಅನುಕೂಲವಾಗುತ್ತದೆಂದೂ ಹೇಳುತ್ತೇನೆ. ಆ ಒಂದು ವಿಷಯದಲ್ಲಿ ಮಾತ್ರ ಮುಂದುವರಿಯೋಣವೆಂದು ನನ್ನ ಅಭಿಪ್ರಾಯ.

ಎಂ.ವಿ. ರಾಮರಾವ್:

ಮಹಾರಾಷ್ಟ್ರ ಮತ್ತು ಆಂಧ್ರ ರಾಜ್ಯಗಳಲ್ಲಿ ಪಾನ ನಿರೋಧ ನೀತಿಯನ್ನು ಸಡಿಲಗೊಳಿಸಬೇಕೆಂಬ ಉದ್ದೇಶದಿಂದಲೇ ನೀರಾ ಕೇಂದ್ರಗಳನ್ನು ಹೆಚ್ಚು ಮಾಡಲಿಲ್ಲ.

* ವಿಧಾನಸಭೆಯ ನಡವಳಿಯ ದಿನಾಂಕ 24ನೇ ಮಾರ್ಚ್ 1964

ಕಂಪನಿಯವರು ಸರ್ಕಾರಕ್ಕೆ ಸ್ವಲ್ಪ ಹೆಚ್ಚಿನ ಟಿ.ಎ., ಡಿ.ಎ. ಮತ್ತು ಸಿಟಿಂಗ್ ಫೀಜು ಇತ್ಯಾದಿಗಳನ್ನು ಕಟ್ಟುತ್ತಿದ್ದರು. ಅದರಿಂದ ಸರ್ಕಾರಕ್ಕೆ ಎಷ್ಟೋ ದುಡ್ಡು ಬರುತ್ತಿತ್ತು. ಅಂಥಾ ದುಡ್ಡು ಈ ಸರ್ಕಾರಕ್ಕೆ ಎಷ್ಟು ನಷ್ಟವಾಗುತ್ತಿದೆ.

**ಸ್ಪೀಕರ್:** ಹಾನಿ ಅಥವಾ ಲಾಭದಲ್ಲಿ ಅದು ಹೇಗೆ?

**ಗಂಗಾಧರ ನಮೋಶಿ:** ಆ ಕಂಪನಿಯಲ್ಲಿ ಮೀಟಿಂಗ್ ನಡೆದಾಗ ಡೈರೆಕ್ಟರುಗಳಿಗೆ ಒಂದು ದಿವಸಕ್ಕೆ ಸೀಟಿಂಗ್ ಫೀಸು ಎಷ್ಟು?

**ಕೆ. ಮಲ್ಲಪ್ಪ:** ಅದರ ಬಗ್ಗೆ ನನಗೆ ಮಾಹಿತಿ ಇಲ್ಲ.

**ಗಂಗಾಧರ ನಮೋಶಿ:** ಮೊದಲು ಶ್ರೀ ನಾರಾಯಣ ಸ್ವಾಮಿಯವರು ಡೈರೆಕ್ಟರಾಗಿದ್ದಾಗ ಅವರು ಆ ಕಂಪೆನಿಗೆ ಹೋಗಿ ಬಂದದ್ದಕ್ಕೆ ಸರ್ಕಾರದ ರೂಲ್ಸ್ ಪ್ರಕಾರ ಅವರ ಟಿ.ಎ. ಗೋಸ್ಕರ ಎಷ್ಟು ಹಣ ಖರ್ಚಾಗಿದೆ?

**ಕೆ.ಮಲ್ಲಪ್ಪ:** ರೂಲ್ಸ್ ಪ್ರಕಾರ ಎಷ್ಟು ಟಿ.ಎ.ಯನ್ನು ಅವರಿಗೆ ಕೊಡಬೇಕೋ ಅಷ್ಟು ಹಣವನ್ನು ಡ್ರಾ ಮಾಡಿ ಅವರಿಗೆ ಕೊಟ್ಟಿದೆ.

**ವಿಷಯ: ಗುಲಬರ್ಗಾ ಜಿಲ್ಲೆಯಲ್ಲಿ ಅಪರಾಧ ಹೆಚ್ಚುವಿಕೆ ತಡೆಯಲು ಇಲಾಖೆ ಕೈಕೊಂಡ ಕ್ರಮ ***

**ಗಂಗಾಧರ ನಮೋಶಿ (ಗುಲಬರ್ಗಾ):** ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವುರಾ ?

(ಅ) ಗುಲಬರ್ಗಾ ಜಿಲ್ಲೆಯಲ್ಲಿ ಅಪರಾಧಗಳ ಸಂಖ್ಯೆ ಇತ್ತೀಚಿನ ದಿನಗಳಲ್ಲಿ ಹೆಚ್ಚುತ್ತಿರುವುದು ಸತ್ಯಾಂಶ ವೆಂಬುದರ ಬಗ್ಗೆ;

(ಬ) ಜಿಲ್ಲೆಯಲ್ಲಿ ಅಪರಾಧದ ಏರುವಿಕೆಯ ಸಂಖ್ಯೆಯನ್ನು ತಡೆಯಲು ಸಂಬಂಧಪಟ್ಟ ಇಲಾಖೆಯು ತೆಗೆದುಕೊಂಡ ಕ್ರಮಗಳ ಬಗ್ಗೆ;

(ಕ) ಪೊಲೀಸ್ ಇಲಾಖೆಯು ನೊಂದಾಯಿಸಿದ ಪ್ರಕಾರಣಗಳ ಸಂಖ್ಯೆ

(ಡ) ವಿಫಲವಾದ ಪ್ರಸಂಗಗಳ ಸಂಖ್ಯೆ;

(ಇ) ಪತ್ತೆಯಾಗದೇ ಮುಚ್ಚಲ್ಪಟ್ಟ ಪ್ರಕರಣಗಳ ಸಂಖ್ಯೆ;

(ಎಫ್) ನಿರಪರಾಧಿಗಳನ್ನು, ದೋಷಪೂರಿತ ವಿಚಾರಣೆ ಕಾರಣವೇ? ಹಾಗಿದ್ದಲ್ಲಿ, ವಿಚಾರಣಾ ಪದ್ಧತಿಗಳನ್ನು ಸುಧಾರಿಸಲು ಕೈಕೊಂಡ ಕ್ರಮಗಳ ಬಗ್ಗೆ.

ಶ್ರೀ ಆರ್.ಎಂ.ಪಾಟೀಲ್ (ಗೃಹ ಮಂತ್ರಿ): (ಅ) ಕೆಲವು ಅಪರಾಧಗಳ ಸಂಖ್ಯೆ ಸ್ವಲ್ಪ ಹೆಚ್ಚುವಿಕೆಯನ್ನು ಬಿಟ್ಟರೆ ಯಾವುದೂ ಆಗಿಲ್ಲ.

(ಬ) ಅಪರಾಧವನ್ನು ಪ್ರತಿಬಂಧಿಸಲು, ಕಾನೂನಿನ್ವಯ ಪೊಲೀಸ್ ಇಲಾಖೆಯು, ಎಲ್ಲಿ ಪ್ರತಿಬಂಧಕ ಮತ್ತು ಮುನ್ನೆಚ್ಚರಿಕೆಯ ಕ್ರಮಗಳನ್ನು ತೆಗೆದುಕೊಂಡಿರುವುದು.

(ಕ), (ಡ) ಮತ್ತು (ಇ) ಪ್ರಶ್ನಗಳಿಗೆ ಕೆಳಗಿನ ಹೇಳಿಕೆ ಹೀಗೆ ಇದೆ.

(ಎಫ್) ಕೆಲವು ದೋಷಪೂರಿತ ವಿಚಾರಣೆಯಿಂದ ಕೆಲವು ಪ್ರಕಾರಣಗಳು ನಿರಪರಾಧವೆಂದು ಕೊನೆಗೊಂಡಿವೆ. ವಿಚಾರಣೆಗಳಲ್ಲಿನ ದೋಷಗಳನ್ನು ಸರಿಪಡಿಸಲು ತಕ್ಕ ಕ್ರಮವನ್ನು ತೆಗೆದುಕೊಳ್ಳಲಾಗಿದೆ.

ಶ್ರೀ ಗಂಗಾಧರ ನಮೋಶಿ: ಸ್ವಾಮಿ, ಗುಲಬರ್ಗಾ ಡಿಸ್ಟ್ರಿಕ್ಟ್‌ನಲ್ಲಿ ಕಳ್ಳತನ ಮತ್ತು ದರೋಡೆ ಇವುಗಳು 1961-62ನೇ ಇಸವಿಗಿಂತ 1962-63ನೇ ಸಾಲಿನಲ್ಲಿ 50 ಪರ್ಸೆಂಟ್ ಅಧಿಕ ಆಗಲಿಕ್ಕೆ ಕಾರಣವೇನು ?

ಆರ್.ಎಂ.ಪಾಟೀಲ್: ಆ ಪ್ರದೇಶದಲ್ಲಿ ಒಂದು ಗೂಂಡಾ ಗ್ಯಾಂಗ್ ಕೆಲಸ ಮಾಡುತ್ತಿತ್ತು. ಗ್ಯಾಂಗನ್ನು ಇತ್ತೀಚೆಗೆ ಸೆರೆ ಹಿಡಿಯಲಾಗಿದೆ.

---

* ವಿಧಾನಸಭೆಯ ನಡವಳಿಕೆಯ ದಿನಾಂಕ [illegible], 1964

**ಗಂಗಾಧರ ನಮೋಶಿ:** ಆ ಗ್ಯಾಂಗಿಗೆ ಪೊಲೀಸರ ಸಂಬಂಧ ಇದೆಯೆಂದು ಕೆಲವು ಅರ್ಜಿಗಳನ್ನು ಕಳುಹಿಸಿದ್ದಾರೆ ಅದರ ಬಗ್ಗೆ ಏನಾದರೂ ಕ್ರಮವನ್ನು ತೆಗೆದುಕೊಂಡಿದ್ದೀರಾ? ಅಥವಾ ಇದು ನಿಜವೇ?

**ಆರ್. ಎಂ. ಪಾಟೀಲ್:** ಅರ್ಜಿ ಬಂದಿದ್ದು ಎನ್‌ಕ್ವೈರಿಗೆ ಹೋಗುತ್ತದೆ. ಆ ಗ್ಯಾಂಗಿಗೆ ಪೊಲೀಸರ ಸಂಬಂಧ ಇದೆಯೆಂದು ಹೇಳುವುದು ಸರಿ ಕಾಣುವುದಿಲ್ಲ.

**ಗಂಗಾಧರ ನಮೋಶಿ:** ಸ್ಟೇಟ್‌ಮೆಂಟಿನ ನಾಲ್ಕನೆಯ ಐಟಂನಲ್ಲಿ 1961 ಮತ್ತು 1962ರಲ್ಲಿ 175ರ ಪೈಕಿ 113 ಮತ್ತು 183ರ ಪೈಕಿ 107 ಕೇಸುಗಳು ಪತ್ತೆ ಆಗಿಲ್ಲ. ಎಂದರೆ ಪೊಲೀಸಿನವರು ಕೆಲಸ ಮಾಡುತ್ತಿದ್ದಾರೆಯೋ ಇಲ್ಲವೋ ಅಥವಾ ಮಲಗಿದ್ದಾರೆಯೋ, ಇವರ ಮೇಲೆ ಏನು ಕ್ರಮ ತೆಗೆದುಕೊಂಡಿದ್ದೀರಿ?

**ಆರ್.ಎಂ. ಪಾಟೀಲ್:** ಮಲಗುವುದು ಏಳುವುದು ಪ್ರಶ್ನೆಯಲ್ಲ, ನಾನು ಹೇಳಿದ ಹಾಗೆ ಕೆಲವು ಜನ ಬಾರ್ಡ್‌ರ್ ಏರಿಯಾದಲ್ಲಿ ಆಪರೇಟ್ ಮಾಡುತ್ತಿರುತ್ತಾರೆ.

**ಗಂಗಾಧರ ನಮೋಶಿ:** ಇನ್‌ವೆಸ್ಟಿಗೇಷನ್ ಸರಿಯಾಗಿ ಆಗಲಾರದ ಕಾರಣ ಕೇಸುಗಳು ಫೇಲ್ಯೂರ್ ಆಗಿವೆ ಎಂದು ಹೇಳಿದ್ದಾರೆ. ಸ್ಪೆಷಲ್ ಅಧಿಕಾರಿಗಳನ್ನು ಅಲ್ಲಿಗೆ ಕಳಿಸುತ್ತೀರಾ ಅಥವಾ ಕಳಿಸಿದ್ದೀರಾ?

**ಆರ್.ಎಂ. ಪಾಟೀಲ್:** ಆ ಪ್ರದೇಶದಿಂದ ಕೆಲವು ಅಧಿಕಾರಿಗಳನ್ನು ವರ್ಗಾಯಿಸಲಾಗಿದೆ. ಮುನ್ಸೂಚನೆಯನ್ನು ಪಡೆದ ನಂತರ, ಅವರು ತನಿಖೆಯ ಗುಣಮಟ್ಟವನ್ನು ಸುಧಾರಿಸಿದ್ದಾರೆ.

ವಿಷಯ: ರಾಜ್ಯದಲ್ಲಿ ಕೈಗಾರಿಕೆಗಳನ್ನು ಪ್ರಾರಂಭಿಸಲು ಶಿಫಾರಸ್ಸು ಅರ್ಜಿಗಳ ಮಾಡಿದ ಬಗ್ಗೆ.*

ಪ್ರಶ್ನೆ: ಶ್ರೀ ಗಂಗಾಧರ ನಮೋಶಿ (ಗುಲಬರ್ಗಾ):-

ಕೈಗಾರಿಕೆ ಮತ್ತು ವಾಣಿಜ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವಿರಾ?

(ಎ) 1-1-1960 ರಿಂದ ಪ್ರತಿವರ್ಷ, ಭಾರತ ಸರ್ಕಾರಕ್ಕೆ ರಾಜ್ಯ ಸರಕಾರವು ಕೈಗಾರಿಕೆಗಳನ್ನು ಪ್ರಾರಂಭಿಸಲು, ಲೈಸನ್ಸ್‌ಗಾಗಿ ಅರ್ಜಿಗಳ ಸಂಖ್ಯೆಯನ್ನು ಶಿಫಾರಸ್ಸು ಮಾಡಿದ ಬಗ್ಗೆ.

(ಬಿ) ಕೈಗಾರಿಕೆಗಳ ಬಗೆಗಳ ಸ್ವರೂಪದ ಬಗ್ಗೆ ಶಿಫಾರಸ್ಸು ಮಾಡಿದ ಅಂಥ ಅರ್ಜಿಗಳ ಬಗ್ಗೆ.

(ಸಿ) ಆ ಅವಧಿಯಲ್ಲಿ ಭಾರತ ಸರಕಾರವು ಮಂಜೂರಾತಿ ನೀಡಿದ ಲೈಸೆನ್ಸ್‌ಗಳ ಸಂಖ್ಯೆಯ ಬಗ್ಗೆ.

(ಡಿ) ಮೇಲೆ ತಿಳಿಸಿದ ವರ್ಷಗಳಲ್ಲಿ ಖಾಸಗಿ ಅಥವಾ ಸಾರ್ವಜನಿಕ ಕ್ಷೇತ್ರದಲ್ಲಿ ಲೈಸೆನ್ಸ್ ಮಂಜೂರಾತಿಯಾದ ಕೈಗಾರಿಕೆಗಳನ್ನು ಪ್ರಾರಂಭಿಸಿದ ಬಗ್ಗೆ.

ಉತ್ತರ: ಶ್ರೀ ಕೆ. ಮಲ್ಲಪ್ಪಾ (ಕೈಗಾರಿಕೆ ಮತ್ತು ವಾಣಿಜ್ಯ ಮಂತ್ರಿ):

(ಎ)

| | 1960 | 1961 | 1962 | 1963 | 1964<br>31-8-1964 | ಒಟ್ಟು |
|---|---|---|---|---|---|---|
| (1) ಹೊಸ ಕೈಗಾರಿಕೆಗಳಿಗಾಗಿ | 28 | 33 | 34 | 6 | 19 | 120 |
| (2) ಪ್ರಸ್ತುತ ಘಟಕಗಳಲ್ಲಿ ಸಾಕಷ್ಟು ವಿಸ್ತರಣೆ ಮಾಡಲು | 29 | 34 | 9 | 7 | 13 | 92 |
| (3) ಪ್ರಸ್ತುತ ಘಟಕಗಳಲ್ಲಿ ಹೊಸ ಹೊಸ ಸರಕುಗಳನ್ನು ತಯಾರಿಸಲು | 9 | 8 | 6 | 7 | 7 | 37 |
| (4) ಪ್ರಸ್ತುತ ಘಟಕದ ವ್ಯವಹಾರವನ್ನು ಮುಂದುವರೆ (ರೆಗುಲ ರೈಜೇಷನ್) | 3 | - | - | - | - | 3 |
| (5) ಸ್ಥಳವನ್ನು ಬದಲಿಸಲು | - | - | - | - | 2 | 2 |
| | 69 | 75 | 49 | 20 | 41 | 254 |

(ಬಿ)

| | 1960 | 1961 | 1962 | 1963 | 1964 | ಒಟ್ಟು |
|---|---|---|---|---|---|---|
| (1) ಕಾಗದ ಮತ್ತು ಪಲ್ಪ್ | 5 | - | 1 | 1 | - | 7 |
| (2) ಸಕ್ಕರೆ | 5 | 2 | - | 1 | - | 8 |
| (3) ಸಿಮೆಂಟ್ | 2 | 2 | 2 | - | 2 | 8 |
| (4) ರಸಾಯನಗಳು | 13 | 17 | 12 | 1 | 4 | 47 |
| (5) ಟೆಕ್ಸ್‌ಟೈಲ್ಸ್ | 14 | 23 | 11 | 2 | 10 | 60 |
| (6) ಇಂಜನಿಯರಿಂಗ್, ಕೈಗಾರಿಕೆಗಳು | 22 | 27 | 22 | 14 | 21 | 105 |
| (7) ಇತರೆ ಕೈಗಾರಿಕೆಗಳು | 08 | 4 | 2 | 1 | 4 | 19 |
| | 69 | 75 | 49 | 20 | 41 | 254 |

(ಸಿ)

| | 1960 | 1961 | 1962 | 1963 | 1964 | ಒಟ್ಟು |
|---|---|---|---|---|---|---|
| (1) ಹೊಸ ಕೈಗಾರಿಕೆಗಳಿಗಾಗಿ | 17 | 10 | 18 | 12 | 3 | 60 |
| (2) ಪ್ರಸ್ತುತ ಘಟಕಗಳ ವಿಸ್ತರಣೆ | 24 | 17 | 14 | 10 | 6 | 71 |
| (3) ಪ್ರಸ್ತುತ ಘಟಕಗಳಲ್ಲಿ ಹೊಸ ಸರಕುಗಳನ್ನು ತಯಾರಿಸಲು. | 15 | 4 | 2 | 4 | 2 | 27 |
| (4) ಘಟಕಗಳ ಕೆಲಸ ಮುಂದೂವರಿಸು | 12 | 1 | - | - | - | 13 |
| (5) ಸ್ಥಳದ ಬದಲಾವಣೆಗಾಗಿ | - | - | - | - | 1 | 1 |
| | 68 | 32 | 34 | 26 | 12 | 172 |

(ಡಿ)

| | ಖಾಸಗಿ ವಲಯದಲ್ಲಿ | ಸಾರ್ವಜನಿಕ ವಲಯದಲ್ಲಿ | ಒಟ್ಟು |
|---|---|---|---|
| (1) ಹೊಸ ಕೈಗಾರಿಕೆಗಳು | 9 | 2 | 11 |
| (2) ಗಣನಾರ್ಹ ವಿಸ್ತರಣೆ | 7 | 15 | 22 |
| (3) ಹೊಸ ಸರಕುಗಳ ತಯಾರಿಕೆಗಾಗಿ | 4 | 6 | 10 |

* ವಿಧಾನಸಭೆಯ ನಡವಳಿಕೆಯ ದಿನಾಂಕ 22ನೇ ಏಪ್ರಿಲ್, 1965

ವಿಷಯು: ಆಹಾರ ಧಾನ್ಯಗಳ ಬೆಲೆಗಳಲ್ಲಿ ಮಿತಿ ಮೀರಿದ ಏರಿಕೆ ಕುರಿತು.*

ಪ್ರಶ್ನೆ: ಶ್ರೀ ಗಂಗಾಧರ ನಮೋಶಿ (ಗುಲಬರ್ಗಾ):

ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:

(ಎ) ಗುಲಬರ್ಗಾ ಜಿಲ್ಲೆಯಲ್ಲಿ ಆಹಾರ ಧಾನ್ಯಗಳ - ಅದರಲ್ಲಿ ಜೋಳದ ಬೆಲೆಗಳಲ್ಲಿ ಮಿತಿ ಮೀರಿ ಏರಿಕೆಯ ಬಗ್ಗೆ ಸರಕಾರವು ಗಣನೆಗೆ ತೆಗೆದುಕೊಂಡಿರುವ ಬಗ್ಗೆ.

(ಬಿ) ಬೆಲೆ ಏರಿಕೆಯ ನಿಯಂತ್ರಣದ ಬಗ್ಗೆ ಸರಕಾರವು ತೆಗೆದುಕೊಂಡ ಕ್ರಮದ ಬಗ್ಗೆ.

(ಸಿ) ಜೋಳವನ್ನು ಉಪಯೋಗಿಸುವ ಇತರ ಜಿಲ್ಲೆಗಳಲ್ಲಿ ಮತ್ತು ಗುಲಬರ್ಗಾಕ್ಕೆ ಸಾಕಷ್ಟು ಪ್ರಮಾಣದಲ್ಲಿ ಅಕ್ಕಿಯನ್ನು ಸರಬರಾಜು ಮಾಡದೇ ಇರುವುದಕ್ಕೆ ಕಾರಣಗಳ ಬಗ್ಗೆ.

ಉತ್ತರ: ಶ್ರೀ ಎಂ.ವಿ. ಕೃಷ್ಣಪ್ಪ (ಕಂದಾಯ ಮಂತ್ರಿಗಳು):

(ಎ) ಹೌದು.

(ಬಿ) ಸ್ಥಳೀಯ ಅವಶ್ಯಕತೆಗಳ ಮತ್ತು ಪರಿಸ್ಥಿತಿಗಳಿಗನುಸಾರವಾಗಿ, ಜನಸಂಖ್ಯೆಯ, ಆಧಾದರಲ್ಲಿ ಸಕಾಲದಲ್ಲಿ ಬಿಡುಗಡೆ ಮಾಡಲು, ಅಕ್ಕಿ ಮತ್ತು ಜೋಳದ ಬಫರ್ ಸಂಗ್ರಹಣೆ ಮಾಡಲು ಮತ್ತು ಅವುಗಳನ್ನು ಕೇಂದ್ರ ಸರಕಾರದಿಂದ ಪಡೆಯಲು ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ.

ಆಹಾರ ಧಾನ್ಯಗಳಲ್ಲಿ ಬೆಲೆಗಳ ಏರಿಕೆಯನ್ನು ನಿಯಂತ್ರಿಸಲು ಸಾಕಷ್ಟು ನಿಯಂತ್ರಣ ಕ್ರಮಗಳನ್ನು ಹೊರಡಿಸಲಾಗಿದೆ.

(ಸಿ) ಅಕ್ಕಿಯ ವಿಷಯದಲ್ಲಿ ಮೈಸೂರು ರಾಜ್ಯವು ಬಹಳಷ್ಟು ಅಭಾವವನ್ನು ಅನುಭವಿಸಿರುವುದು. ಅಕ್ಕಿಯನ್ನು ಆಂಧ್ರ ಪ್ರದೇಶದಿಂದ ಆಮದು ಮಡಿಕೊಳ್ಳಲಾಗುತ್ತಿತ್ತು. ಸಾಮಾನ್ಯವಾಗಿ, ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ಅದರಲ್ಲಿ ಆಂಧ್ರಪ್ರದೇಶದಿಂದ ಮೈಸೂರು ರಾಜ್ಯಕ್ಕೆ ಅಕ್ಕಿಯ ಸಾಗಾಣಿಕೆಯ ಮೇಲೆ ಕೆಲವು ನಿರ್ಬಂಧನೆಗಳನ್ನು ಹೇರಿದುದರಿಂದ, ಕಳೆದ ಒಂದುವರೆ ವರ್ಷದಿಂದ, ರಾಜ್ಯಕ್ಕೆ ಮತ್ತು ಇತರ ಜಿಲ್ಲೆಗಳಿಗಾಗಿ, ಅಕ್ಕಿಯನ್ನು ಸಾಕಷ್ಟು ಪ್ರಮಾಣದಲ್ಲಿ ಪಡೆಯಲು ಸಾಧ್ಯವಾಗಲಿಲ್ಲ.

* ವಿಧಾನಸಭೆಯ ನಡವಳಿಕೆಯು ದಿನಾಂಕ 22ನೇ ಏಪ್ರಿಲ್, 1965

ವಿಷಯ: ರಾಜ್ಯಕ್ಕೆ ಜಿ.ಸಿ. ಸೀಟ್ಸ್‌ಗಳ ಹಂಚುವಿಕೆಯ ಬಗ್ಗೆ.*

ಪ್ರಶ್ನೆ: ಶ್ರೀ ಗಂಗಾಧರ ನಮೋಶಿ (ಗುಲಬರ್ಗಾ):-

ಕೈಗಾರಿಕಾ ಮತ್ತು ವಾಣಿಜ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯಕ್ಕೆ ಹಂಚಿಕೊಡಲಾದ ಜಿ.ಸಿ. ಸೀಟುಗಳ ಪಾಲು ಎಷ್ಟಿದೆ ಎಂಬುದನ್ನು,

(ಬ) ಅದರ ಜಿಲ್ಲಾವಾರು ಹಂಚುವಿಕೆ.

(ಕ) ಹಂಚುವಿಕೆಯ ಪದ್ಧತಿ.

(ಡ) ಯಾವತ್ತಿನಿಂದ ಗುಲಬರ್ಗಾ ಜಿಲ್ಲೆಗೆ ಜಿ.ಸಿ. ಸೀಟುಗಳ ಪಾಲು ಹಂಚಲಾಗಿಲ್ಲ.

ಎಂಬುದಕ್ಕೆ ಕಾರಣಗಳೇನು ಎಂಬುದನ್ನು ತಿಳಿಸುವಿರಾ?

ಉತ್ತರ: ಶ್ರೀ ಕೆ. ಮಲ್ಲಪ್ಪ (ಕೈಗಾರಿಕಾ ಮತ್ತು ವಾಣಿಜ್ಯ ಮಂತ್ರಿ):

(ಅ) ಕಳೆದ 2 ವರ್ಷಗಳಿಂದ, ಭಾರತ ಸರಕಾರವು ಆ ಪಾಲನ್ನು ಕೊಟ್ಟಿದ್ದಿಲ್ಲ.

(ಬ) ಆ (ಅ) ಪ್ರಶ್ನೆಗೆ ಉತ್ತರ ನೀಡಿರುವುದರಿಂದ, ಅದು ಉದ್ಭವಿಸುವುದಿಲ್ಲ.

(ಕ) ಕೃಷಿಯೇತರ ಪಾಲು ಕೆಳಗಿನಂತಿದೆ.

ಕೈಗಾರಿಕೆಯ ಪಾಲು:

ತನಿಖೆಯ ನಂತರ, ಜಿಲ್ಲೆಗಳ ಕೈಗಾರಿಕೆಗಳ ಮತ್ತು ವಾಣಿಜ್ಯ ಸಹಾಯಕ ನಿರ್ದೇಶಕರ ಶಿಫಾರಸ್ಸುಗಳ ಆಧಾರದ ಮೇಲೆ ಜಂಟಿ ನಿರ್ದೇಶಕರು (ಎಸ್.ಎಸ್. ಆಯ್) ಹೊರಡಿಸಿದ ಅನುಮತಿ ಪತ್ರಗಳ ಪ್ರಕಾರ ಮತ್ತು ಮೈಸೂರು ಚಿಕ್ಕ ಉದ್ದಿಮೆ ಕಾರ್ಪೋರೇಷನ್‌ನಿಂದ, ಸಾಮಗ್ರಿಗಳನ್ನು ಒದಿಗಿಸಲಾಗಿದೆ.

ಸಾಮಾನ್ಯ ಪಾಲು:

ನೊಂದಾಯಿತ ದಾಸ್ತಾನುಗಾರರಿಂದ ಜಿಲ್ಲೆಗಳ ಡೆಪ್ಯುಟಿ ಕಮೀಶನರರಿಂದ.

ಕೃಷಿಯ ಪಾಲು:

ಕೇಂದ್ರ ಸರಕಾರದ ನಿರ್ದೇಶನಗಳ ಮೇರೆಗೆ, ಒಟ್ಟು ಹಂಚುವಿಕೆಯ 75 ಪ್ರತಿಶತ ಸರಕು ಸಹಕಾರಿ ಉಗ್ರಾಣಗಳ ಕಟ್ಟಡಕ್ಕಾಗಿ ಬಿಡುಗಡೆ ಮಾಡಲಾಗಿದೆ. ತಾಲ್ಲೂಕಾ ಉಪ ಸಮಿತಿಯ ಶಿಫಾರಸ್ಸಿನ ಆಧಾರದ ಮೇಲೆ, ಉಳಿದ ಭಾಗವನ್ನು ಹಂಚಲಾಗಿದೆ.

(ಡ)

ಕೈಗಾರಿಕಾ ಪಾಲು:

1962 ಅಕ್ಟೋಬರ್ ಅವಧಿಯಲ್ಲಿ ಗುಲಬರ್ಗಾ ಜಿಲ್ಲೆ 510 ಸೀಟುಗಳನ್ನು ಹಂಚಲಾಯಿತು. ಅಂದಿನಿಂದ, ಆ ಭಾಗವನ್ನು ಪಡೆಯದೇ ಇರುವುದರಿಂದ, ಹಂಚುವಿಕೆ ಮಾಡಲಾಗಿಲ್ಲ.

---

* ವಿಧಾನಸಭೆಯ ನಡವಳಿಕೆಯ ದಿನಾಂಕ 22ನೇ ಏಪ್ರಿಲ್, 1965

ಸಾಮಾನ್ಯ ಪಾಲು:-

1962ರ ವರ್ಷದ ನಿಯಮದ ಅಡಿಯಲ್ಲಿ 1963ರ ಜುಲೈ ಅವಧಿಯಲ್ಲಿ 11 ಟನ್.ಜಿ.ಸಿ. ಸೀಟ್ಸ್‌ಗಳನ್ನು ಗುಲಬರ್ಗಾ ಡೆಪ್ಯುಟಿ ಕಮೀಷನರಿಗೆ ಸರಬಾಜು ಮಾಡಲಾಯಿತು.

ಕೃಷಿಯ ಪಲು:-

ಆಗಸ್ಟ್ 1964ರ ಅವಧಿಯಲ್ಲಿ 22 ಟನ್ ಅಥವಾ 1631 ಜಿ.ಸಿ. ಸೀಟ್ಸ್‌ಗಳನ್ನು ಸ್ವೀಕರಿಸಲಾಗಿತ್ತು. ಅದರ ನಂತರ ಯಾವುದೇ ಪಾಲನ್ನು ಸ್ವೀಕರಿಸಲಾಗಿಲ್ಲ.

ವಿಷಯ: ಕೃಷ್ಣಾ ಮತ್ತು ಗೋದಾವರಿ ನೀರು ಹಂಚಿಕೆ ಬಗ್ಗೆ.*

**ಗಂಗಾಧರ ನಮೋಶಿ (ಗುಲಬರ್ಗಾ):** ಮಾನ್ಯ ಮುಖ್ಯ ಮಂತ್ರಿಗಳು ಈ ವಿಷಯವನ್ನು ತಿಳಿಸುವರೆ?

ಕೃಷ್ಣ ಮತ್ತು ಗೋದಾವರಿ ನೀರನ್ನು ಹಂಚಿಕೊಳ್ಳುವ ಬಗ್ಗೆ ರಾಜ್ಯ ಸರಕಾರವು ಭಾರತ ಸರಕಾರದೊಡನೆ ಮತ್ತು ಸಂಬಂಧಪಟ್ಟ ಸರಕಾರಗಳನ್ನು ಚರ್ಚಿಸಿದೆಯೇ?

ಎಸ್.ನಿಜಲಿಂಗಪ್ಪ (ಮಾನ್ಯ ಮುಖ್ಯಮಂತ್ರಿಗಳು): ಹೌದು.

**ಗಂಗಾಧರ ನಮೋಶಿ:** ನಾನು ಈ ಕುರಿತು ವಿವರಣೆಗಳನ್ನು ತಿಳಿಯಬಹುದೇ?

ಎಸ್. ನಿಜಲಿಂಗಪ್ಪ: ಚರ್ಚೆಯು ಬಹಳ ಬೃಹತ ಪ್ರದೇಶವನ್ನೊಳಗೊಂಡಿದೆ. ನೀರಿನ ಪ್ರಮಾಣಕ್ಕಿರುವ ಚರ್ಚೆಯು ಇನ್ನೂ ಮಾಡಬೇಕಾಗಿದೆ. ಕೆಲವು ನದಿಗಳು ಆ ಪ್ರದೇಶಗಳಲ್ಲಿನ ಅಭಾವದ ಪರಿಸ್ಥಿತಿಯ ಕಾರಣದಿಂದ ನೀರನ್ನು ದಕ್ಷಿಣ ತುದಿಗೆ ಸ್ಥಳಾಂತರಿಸಲಾಗಿದೆ.

**ಗಂಗಾಧರ ನಮೋಶಿ:** ಈ ಚರ್ಚೆಯ ಅವಶ್ಯಕತೆ ಏಕೆ? ಭಾರತ ಸರಕಾರದ ಅಂದಿನ ಮಂತ್ರಿಗಳಾದ ಶ್ರೀ ಹಫೀಜ್ ಮಹಮ್ಮದ ಇಬ್ರಾಹಿಮ್‌ರು ನೀಡಿದ ತೀರ್ಪಿನಲ್ಲಿ, ನೀರಿನ ಹಂಚುವಿಕೆಯು ಒಳಗೊಂಡಿರುವುದು ಸತ್ಯಾಂಶವಲ್ಲವೇ?

ಎಸ್. ನಿಜಲಿಂಗಪ್ಪ: ಆ ತೀರ್ಪಿನಿಂದ ನಮಗೆ ಸಮಾಧಾನವಾಗಿರುವುದಿಲ್ಲ. ನಮಗೆ ಹೆಚ್ಚು ನೀರು ಬೇಕು. ಕೃಷ್ಣಾದಲ್ಲಿ ಲಭ್ಯವಿರುವ ನೀರಿನ ಪ್ರಮಾಣದ ಬಗ್ಗೆ ಅಂತಿಮವಾಗಿ ಇನ್ನೂ ಗುರ್ತಿಸಲಾಗಿಲ್ಲ.

ಗಂಗಾಧರ ನಮೋಶಿ: ನಾಗಾರ್ಜುನ ಸಾಗರಕ್ಕಾಗಿ, ಹೆಚ್ಚುವರಿ ನೀರು ಪಡೆಯಲು, ಆಂಧ್ರ ಪ್ರದೇಶ ಸರಕಾರದ ಮತ್ತು ಡಾ: ಕೆ.ಎಲ್. ರಾವರ ಪ್ರಯತ್ನವೇ?

ಎಸ್. ನಿಜಲಿಂಗಪ್ಪ: ಅದು ರಾವ್ ಅವರ ಇಚ್ಛೆ ಎಂಬುದು ನನಗೆ ಅನಿಸುವುದಿಲ್ಲ. ಅವರು ಬಹಳ ವಿಶಾಲ ಮನೋಭಾವನೆಯ ವ್ಯಕ್ತಿಗಳು.

**ಗಂಗಾಧರ ನಮೋಶಿ:** ಈ ಪ್ರಶ್ನೆಯನ್ನು ಬಗ್ಗೆ ಹರಿಸುತ್ತೇವೆ ಎಂದು ಕಳೆದ 4-5 ವರ್ಷಗಳಿಂದಲೂ ಹೇಳುತ್ತಿದ್ದೀರಿ; ಈ ವರ್ಷದಲ್ಲಾದರೂ ಇದನ್ನು ಬಗ್ಗೆ ಹರಿಸುತ್ತೀರೆಂದು ನಂಬಬಹುದೇ?

ಎಸ್. ನಿಜಲಿಂಗಪ್ಪ: 4-5 ವರ್ಷವಾದರೂ ಆಗಬಹುದು; ಇನ್ನೂ 10 ವರ್ಷಗಳಾದರೂ ಆಗಬಹುದು. ನೀರು ಬರುವುದು ಜಾಸ್ತಿಯಾಗುತ್ತಿರುತ್ತದೆ; ಅಳತೆಯಂತೆ ಆಗ ಜಾಸ್ತಿ ಕೇಳಬೇಕಾಗಿರುತ್ತದೆ, ಕೇಳುತ್ತೇವೆ. ಆದಷ್ಟು ಬೇಗನೆ ನೀರನ್ನು ಶೇಖರಣೆ ಮಾಡುವುದಕ್ಕೆ ಅಣೆಗಳನ್ನೂ ಕಟ್ಟಬೇಕಾಗುತ್ತದೆ.

* ವಿಧಾನಸಭೆಯ ನಡವಳಿಕೆಯ ದಿನಾಂಕ 3ನೇ ಆಗಸ್ಟ್, 1966

ಎಂ.ಎಸ್. ಮಿಲ್ ಕಾರ್ಮಿಕರ ಕಣ್ಮಣಿ:

ಎಂ.ಎಸ್.ಕೆ. ಮಿಲ್. ಗುಲ್ಬರ್ಗಾದಲ್ಲಿ 1884 ರಲ್ಲಿ ಖಾಸಗಿ ಆಡಳಿತದಲ್ಲಿ ಆರಂಭಿಸಲಾಯಿತು. ಅದು ಖಾಸಗಿ ಆಡಳಿತದಲ್ಲಿಯೇ 1962ರ ವರೆಗೆ ಮುಂದುವರೆಯಿತು. ಕ್ರಮೇಣ ಕೆಲವು ಆರ್ಥಿಕ ತೊಂದರೆಗಳ ಕಾರಣಕ್ಕಾಗಿ, ಕಾರ್ಖಾನೆಯು ಮುಚ್ಚಲ್ಪಟ್ಟಿತು. 1962ರಲ್ಲಿ ಮೈಸೂರು ಸರಕಾರವು ಕಾರ್ಖಾನೆಯನ್ನು ತನ್ನ ಆಡಳಿತಕ್ಕೊಳಪಡಿಸಿಕೊಂಡಿತು ಸರಕಾರವು ಕಾರ್ಖಾನೆಯ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಸುಮಾರು 150 ಲಕ್ಷ ರೂಪಾಯಿ ಮೊತ್ತದ ಹಣವನ್ನು ತೊಡಗಿಸಿ, ಕಾರ್ಖಾನೆಯು ಪುನಃರಾರಂಭಿಸಲು ಸಹಾಯಕವಾಯಿತು. 1962 ರಿಂದ 1968ರ ವರೆಗೆ ಕಾರ್ಖಾನೆಯು ಸರಕಾರದ ಅಡಿಯಲ್ಲಿಯೇ ತನ್ನ ಕಾರ್ಯ ಮಾಡಿತು. ಆದರೆ, ಪುನಃ ಕೆಲವು ಕಾರಣಗಳಿಗಾಗಿ ಕಾರ್ಖಾನೆಯ ಆಡಳಿತವನ್ನು ಖಾಸಗಿ ವಲಯಕ್ಕೆ ವಹಿಸಿಕೊಡಲಾಯಿತು. ಆದರೆ ಮತ್ತೆ ಕೆಲವು ಕಾರ್ಮಿಕರ ಮತ್ತು ಆರ್ಥಿಕ ತೊಂದರೆಗಳ ಕಾರಣಯ, ಕಾರ್ಖಾನೆಯನ್ನು ಮುಚ್ಚಲ್ಪಟ್ಟಿತು. ಕೊನೆಗೆ 1972ರಲ್ಲಿ ಭಾರತ ಸರಕಾರವೇ, ಕಾರ್ಖಾನೆಯ ಆಡಳಿತವನ್ನು ವಹಿಸಿ, 1974ರ ಜವಳಿ ಉದ್ದಿಮೆ ಕಾಯ್ದೆಯ ಅಡಿಯಲ್ಲಿ ಕಾರ್ಖಾನೆಯನ್ನು ರಾಷ್ಟ್ರೀಕರಣಗೊಳಿಸಿತು. ಹೀಗಾಗಿ, ಕಾರ್ಖಾನೆಯ ನ್ಯಾಶನಲ್ ಟೆಕ್ಸ್‌ಟೈಲ್ ಕಾರ್ಪೊರೇಷನ್ (ಎನ್.ಟಿ.ಸಿ.) ಘಟಕದ ಅಡಿಯಲ್ಲಿ ಕಾರ್ಯ ನಿರ್ವಹಿಸಲಾರಂಭಿಸಿತು. ಹೀಗೆಯೇ, 1974 ರಿಂದ 1997ರ ವರೆಗೆ ತನ್ನ ಕಾರ್ಯ ನಿರ್ವಹಿಸಿತು. ಆದರೆ 1997ರಲ್ಲಿ ಕಾರ್ಖಾನೆಯು ಆರ್ಥಿಕ ತೊಂದರೆಗಳಿಂದಾಗಿ ತನ್ನ ಉತ್ಪಾದನಾ ಕಾರ್ಯವನ್ನು ಸ್ಥಗಿತಗೊಳಿಸಿತು.

ಕಾರ್ಯ ಆರಂಭ ಮಾಡಿದ ದಿನದಿಂದಲೂ, ಕಾರ್ಖಾನೆಯು ಮತ್ತು ದರ ಕಾರ್ಮಿಕರು ಅದೆಷ್ಟೋ ಕಠಿಣ ಸಮಸ್ಯೆಗಳಿಗೆ ಗುರಿಯಾಗುತ್ತಿದ್ದಾಗ ಶ್ರೀ ಗಂಗಾಧರ ನಮೋಶಿಯವರು ತಮ್ಮ ಧುರೀಣತ್ವ ವಹಿಸಿ ಕಾರ್ಖಾನೆಯ ಮತ್ತು ಕಾರ್ಮಿಕರ ಪ್ರಗತಿ ಮತ್ತು ಕಲ್ಯಾಣಕ್ಕಾಗಿ ಕೆಲವು ಮಹತ್ತರ ಕಾರ್ಯಕ್ರಮಗಳನ್ನು ಹಾಕಿಕೊಂಡು ಕೆಲವು ಗಣನೀಯ ಸಾಧನೆಗಳನ್ನು ಮಾಡಿದರು. ಆ ಸಾಧನೆಗಳಲ್ಲಿ ಕೆಳಗಿನವುಗಳು ಬಹು ಪ್ರಮುಖವಾಗಿರುತ್ತವೆ.

ಶ್ರೀ ನಮೋಶಿಯವರು 1951ರಲ್ಲಿ ಪೀಪಲ್ಸ್ ಡೆಮಾಕ್ರೆಟಿಕ್ ಫ್ರಂಟ್‌ಗೆ ಸೇರಿ ರಾಜಕೀಯ ರಂಗವನ್ನು ಪ್ರವೇಶಿಸಿ 1953ರಲ್ಲಿ ಎಂ.ಎಸ್. ಕೆ. ಮಿಲ್ಲಿನ ಕಾರ್ಮಿಕರ ಸಮಸ್ಯೆಗಳನ್ನು ಸ್ಪಂಧಿಸಲು ಮತ್ತು ಕಾರ್ಖಾನೆಯ ಆಡಳಿತದಲ್ಲಿ ಕಾರ್ಮಿಕರ ಪಾಲ್ಗೊಳ್ಳುವಿಕೆ ವೇತನದಲ್ಲಿ ಹೆಚ್ಚಳ ಕಾರ್ಖಾನೆಯ ಒಡೆಯರ ಮತ್ತು ಕಾರ್ಮಿಕರ ನಡುವೆ ಸೌಹಾರ್ದಯುತ

ಸಂಬಂಧಗಳನ್ನು ಬಲಪಡಿಸಲು, ಎಂ.ಎಸ್. ಕೆ. ಮಿಲ್ ಕಾರ್ಮಿಕರ ಒಕ್ಕೂಟದ ಸಂಘಟನೆ ಮಾಡಿದರು. ಆ ಒಕ್ಕೂಟದ ಜನರಲ್ - ಸೆಕ್ರೆಟರಿಯಾಗಿ ಕೆಲಸ ಮಾಡಿ 1954ರಲ್ಲಿ ಕಾರ್ಮಿಕರ ಸಂಬಳವನ್ನು 03 ರೂಪಾಯಿ ಇದ್ದುದ್ದನ್ನು 07 ರೂಪಾಯಿಗೆ ಏರಿಸಿದ ಶ್ರೇಯಸ್ಸು ಶ್ರೀ ಗಂಗಾಧರ ನಮೋಶಿಯವರಿಗೆ ಸಲ್ಲುತ್ತದೆ. ಆ ವೇಳೆಯ ಮೊದಲೇ ಲಾಲ್ ಬೋಟಾ ವರ್ಕರ್ಸ್ ಯೂನಿಯನ್ ಮಿಲ್ಲಿನಲ್ಲಿ ಪ್ರಥಮವಾಗಿ ಕಾರ್ಯ ನಿರ್ವಹಿಸುತ್ತಿತ್ತು. ಕಾರ್ಮಿಕರ ಸಮಸ್ಯೆಗಳು ದಿನೇ ದಿನೇ ಹೆಚ್ಚುಗುತ್ತಿದ್ದಂತೆಯೇ ಕಲ್ಬುರ್ಗಿಯ ನಾನಾ ಭಾಗಗಳಲ್ಲಿ ಓಕ್ಕೂಟಗಳ ಸ್ಥಾಪನೆಯ ಅವಶ್ಯಕತೆಯೂ ಹೆಚ್ಚಾಗತೊಡಗಿತು. ಅಂತೆಯೇ ಶಹಬಾದಿನ ಎ.ಸಿ.ಸಿ. ಮತ್ತು ಎ.ಬಿ.ಎಲ್ ಕಾರ್ಖಾನೆಗಳಲ್ಲಿ ಲಾಲ್ ಬೋಟಾ ಕಾರ್ಮಿಕರ ಕೂಟಗಳು ಪ್ರಾರಂಭಿಸಲಾಯಿತು. ಹಾಗೆಯೇ ಹೋಟೆಲ್ ಮತ್ತು ಹಮಾಲ್ ಒಕ್ಕೂಟಗಳ ಸ್ಥಾಪನೆಗೆ ಶ್ರೀ ಗಂಗಾಧರ ನಮೋಶಿಯವರು ತಮ್ಮ ಧುರೀಣತ್ವವನ್ನು ವಹಿಸಿದರು. 1955ರಲ್ಲಿಯೇ ಬಾಜಿ ಪಾಲಾ ಮಾರ್ಕೆಟ ಯೂನಿಯನ್ ಸ್ಥಾಪಿಸಲು ಯಶಸ್ವಿಯಾದರು. ಅಳಂದ ತಾಲ್ಲೂಕಿನಲ್ಲಿ ನೇಕಾರರ ಒಕ್ಕೂಟ ಯಾದಗಿರಿಯಲ್ಲಿ ಬೀಡಿ ಕಾರ್ಮಿಕರ ಒಕ್ಕೂಟ ಮತ್ತು ಚಿತ್ತಾಪುರ, ಚಿಂಚೋಳಿ ಮತ್ತು ವಾಡಿಗಳಲ್ಲಿ ಗಣಿ ಕಾರ್ಮಿಕರ ಒಕ್ಕೂಟಗಳು, ಶ್ರೀ ನಮೋಶಿಯವರ ಪ್ರಯತ್ನದಿಂದಲೇ ಪ್ರಾರಂಭಿಸಲಾಯಿತು.

ಎಂ.ಎಸ್.ಕೆ. ಮಿಲ್‌ವು, ತನ್ನ ಕಾರ್ಯಾರಂಭ ಮಾಡಿದ ದಿನದಿಂದಲೂ ನೇಕಾರರ ಸಮಸ್ಯೆಗಳಿಗೆ ಗುರಿಯಾಗುತ್ತ ಹೋಯಿತು. ಕಾರ್ಖಾನೆಯು ಆರ್ಥಿಕ ತೊಂದರೆಗೆ ಒಳಗಾದಾಗ ಕಾರ್ಮಿಕರ ವೇತನದಲ್ಲಿ 25 ಪ್ರತಿಶತ ಕಡಿತ ಮಾಡಲು ಸರಕಾರವು ಆದೇಶ ನೀಡಿದಾಗ ಶ್ರೀ ನಮೋಶಿಯವರು ಅದನ್ನು ಧೈರ್ಯದಿಂದ ಪ್ರತಿಭಟಿಸಿ ಆ ಆದೇಶದ ವಿರುದ್ಧ ಬಂಡಾಯ ಹೂಡಿ ಕಾರ್ಮಿಕರ ವೇತನದಲ್ಲಿ 25 ಪ್ರತಿಶತ ಕಡಿತವನ್ನು ತಡೆ ಹಿಡಿಯುವಲ್ಲಿ ಯಶಸ್ವಿಯಾದರು. ಆ ಉದ್ದೇಶಕ್ಕಾಗಿಯೇ ಸರಕಾರದ ಗಮನ ಸೆಳೆಯಲು ಗುಲ್ಬರ್ಗಾ ಬಂದ್ ಆಚರಿಸಲಾಯಿತು. 1961 ರಲ್ಲಿ ಉಪವಾಸ ಸತ್ಯಾಗ್ರಹ ಮಾಡಿ ಕಾರ್ಮಿಕರ ಮೂಲ ವೇತನದಲ್ಲಿ 25 ಪ್ರತಿ ಶತ ಹೆಚ್ಚಳವಾಗಲು ಶ್ರೀ ನಮೋಶಿಯವರೇ ಕಾರಣರಾದರು. ಅದೇ ವರ್ಷದಲ್ಲಿಯೇ ಕರ್ನಾಟಕ ಸರಕಾರದಿಂದ ಕಾರ್ಮಿಕರಿಗೆ ಸಾಲ ನೀಡುವ ಯೋಜನೆಯು ಒಂದು ಶರತ್ತಿನ ಮೇಲೆ ಆಧಾರವಾಗಿತ್ತು. ಅಂದರೆ ಸರಕಾರದಿಂದ ಸಾಲ ತೆಗೆದುಕೊಳ್ಳುವ ಕಾರ್ಮಿಕರು ತಮ್ಮ ವೇತನದಲ್ಲಿ 25 ಪ್ರತಿಶತ ಕಡಿತಕ್ಕೆ ಒಪ್ಪಬೇಕಾಗಿತ್ತು. ಆ ಶರತ್ತಿಗೆ ಒಕ್ಕೂಟವು ಒಪ್ಪಿತ್ತೇನೋ ನಿಜ ಆದರೆ ಶ್ರೀ ನಮೋಶಿಯವರು, ಪ್ರತಿಭಟಿಸಿ ಕಾರ್ಮಿಕರ ಕೂಲಿಯಲ್ಲಿ ಕಡಿತವಾಗದಂತೆ ತಡೆಯುವಲ್ಲಿ ಯಶಸ್ವಿಯಾಗಿ ಕಾರ್ಮಿಕರಿಗೆ ಸರಕಾರದಿಂದ ಸಾಲ ಸಿಗುವಂತೆಯೂ ಮಾಡಿ ತಮ್ಮ

ಧುರೀಣತ್ವದ ಮಹತ್ವವನ್ನು ಪ್ರತಿಬಿಂಬಿಸಿದರು. 1964ರಲ್ಲಿ ಪರಂಗಲ್ಲಿನ ಅಜಮಜಾಯಿ ಬಟ್ಟೆಯ ಕಾರ್ಖಾನೆಯು ಮುಚ್ಚಿಸಲ್ಪಟ್ಟಾಗ, ಅದು ಪುನಃ ಕಾರ್ಯಾರಂಭ ಮಾಡಲು ಶ್ರೀ ನಮೋಶಿಯವರೇ ಪ್ರಯತ್ನ ಮಾಡಿ ಯಶಸ್ವಿಯಾದರು.

1969ರಲ್ಲಿ ಶ್ರೀ ನಮೋಶಿಯವರು, ಶ್ರೀ ಎಸ್. ಕೆ. ಕಾಂತರವರೊಂದಿಗೆ ಕೂಡಿ ಎಂ.ಎಸ್. ಕೆ. ಮಿಲ್ ಮುಚ್ಚಲ್ಪಟ್ಟಾಗ ಮತ್ತು ಅದರ ಕಾರ್ಯ ಸ್ಥಗಿತಂಡಾಗ 78 ದಿವಸಗಳ ಕಾಲ ಸಂಪು ಹೂಡಿ, ಸರಕಾರದ ಮೇಲೆ ಒತ್ತಡ ತಂದು, ಕಾರ್ಖಾನೆಯು ಪುನಃ ತನ್ನ ಕಾರ್ಯ ಆರಂಭ ಮಾಡಲು ಯಶಸ್ವಿಯಾದರು. ಅವರಿಗೆ ಕಾರ್ಮಿಕರ ಹಿತಾಸಕ್ತಿಗಳನ್ನು ರಕ್ಷಿಸುವುದೇ ಪ್ರಮುಖ ಗುರಿಯಾಗಿತ್ತು. ಹಾಗೆಯೇ, ಮುಂದುವರೆದು, 1973ರಲ್ಲಿ ಕಾರ್ಮಿಕರ ತುಟ್ಟಿಭತ್ಯೆಯ ಹೆಚ್ಚಳವನ್ನು 15 ರೂಪಾಯಿಗಳಿಂದ 24 ರೂಪಾಯಿಗಳಿಗೆ ಹೆಚ್ಚಿಸಿದ ಯಶಸ್ಸಿನ ಶ್ರೇಯಸ್ಸು ಶ್ರೀ ನಮೋಶಿಯವರಿಗೆ ಸಲ್ಲುತ್ತದೆ. ಇಲ್ಲದೇ, ಅದೇ ಕಾಲದಲ್ಲಿಯೇ ಕಾರ್ಮಿಕರ ವಿರಾಮದ ವೇಳೆಯಲ್ಲಿ ಸಂಬಳ ಕೊಡುತ್ತಿರಲಿಲ್ಲ. ಕಾರಣ, ಅದರ ವಿರುದ್ಧ ಹೋರಾಡಿ ಕಾರ್ಮಿಕರಿಗೆ ವಿರಾಮದ ವೇಳೆಯಲ್ಲಿನ ಸಂಬಳ ಸಿಗುವಂತೆ ಮಾಡುವಲ್ಲಿ ಯಶಸ್ವಿಯಾದರು.

1974ರಲ್ಲಿ, ಕಾರ್ಖಾನೆಯ ಕೆಲವು ಕಾರ್ಮಿಕರನ್ನು ದುರ್ನಡತೆಯ ಆಧಾರದ ಮೇಲೆ ಅಮಾನತ್ತಿನಲ್ಲಿಡಲಾಗಿತ್ತು. ಆ ಕ್ರಮದ ವಿರುದ್ಧವೂ ಕಾರ್ಮಿಕರನ್ನು ಪುನಃ ಸೇವೆಯನ್ನು ಸೇರುವಂತೆ ಪ್ರಯತ್ನ ಮಾಡಿ, ಕೊನೆಗೂ ಯಶಸ್ವಿಯಾದರು. ಅಂತೆಯೇ, 1976ರಲ್ಲಿ ಕಾರ್ಮಿಕರು, ಪುನಃ ಸೇವೆಯಲ್ಲಿ ಸೇರಿದರು. ಶ್ರೀ ನಮೋಶಿಯವರು "ಕಾರ್ಮಿಕರ ಕಣ್ಮಣಿ" ಯೆಂಬ ಬಿರುದು, ದಿನೇ ದಿನೇ ಕಲ್ಬುರ್ಗಿ ಮತ್ತು ಇತರ ತಾಲ್ಲೂಕು ಪ್ರದೇಶಗಳ ವಲಯದಲ್ಲಿ ಪ್ರಸಿದ್ಧಿ ಯಾಗುತ್ತಾ ಹೋಯಿತು. ಅವರು ಕರ್ನಾಟಕ ವಿಧಾನಸಭೆಯ ಸದಸ್ಯರಿದ್ದಾಗಲೂ, ಕಲ್ಬುರ್ಗಿ ಜಿಲ್ಲೆಯ ಸಮಸ್ತ ಕಾರ್ಖಾನೆಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಕಾರ್ಮಿಕರ ಸಮಸ್ಯೆಗಳನ್ನು ವಿಧಾನ ಮಂಡಲದಲ್ಲಿ ಮಂಡಿಸಿ, ಸರಕಾರದ ಗಮನ ಸೆಳೆಯುವಂತೆ ಪ್ರಯತ್ನಿಸಿ, ಸರಕಾರವು ಕಾರ್ಮಿಕರ ಸಮಸ್ಯೆಗಳಿಗೆ ಸ್ಪಂಧಿಸುವಂತೆ ಒತ್ತಾಯಿಸಿ, ಅವುಗಳಿಗೆ ಸೂಕ್ತವಾದ ಪರಿಹಾರಗಳನ್ನು ಕಂಡು ಹಿಡಿಯಲು ಅದೆಷ್ಟೋ ಶ್ರಮ ವಹಿಸಿದ ಎಷ್ಟೋ ಹೇಳಿಕೆಗಳನ್ನು ಮತ್ತು ಭಾಷಣಗಳನ್ನು ಮಾಡಿದ್ದು, ಕರ್ನಾಟಕದಲ್ಲಿ ಅದರಲ್ಲಿ ವಿಶೇಷವಾಗಿ ಕಲ್ಬುರ್ಗಿ ಜಿಲ್ಲೆಯ ಕಾರ್ಮಿಕ ವರ್ಗವು ಯಾವಾಗ್ಲೂ ಮರೆಯುವಂತಿಲ್ಲ.

ಅವರು ಯಾವಾಗಲೂ, ನ್ಯಾಯಯುತ ಬೇಡಿಕೆಗಳಿಗಾಗಿ ಹೋರಾಡಲು, ಕಾರ್ಮಿಕರನ್ನು ಹುರಿದುಂಬಿಸಿ ಮತ್ತು ಅನ್ಯಾಯದ ವಿರುದ್ಧ ದಂಗೆ ಏಳಲು ಕಾರ್ಮಿಕರನ್ನು ಉಪದೇಶಿಸಿ ಆಡಳಿತದ ಮತ್ತು ಕಾರ್ಮಿಕರ ಮಧ್ಯೆಯಿರುವ ಸಂಬಂಧಗಳು

ಸೌಹಾರ್ದಯುತವಾಗಿ ಬೆಳೆಯಲು, ಅನುಕೂಲ ಮಾಡಿಕೊಡುತ್ತಿದ್ದರು. ಅವರು ನಿಜವಾಗಿಯೂ ತಮ್ಮ ಅನುಯಾಯಿಗಳ ವಿಶ್ವಾಸ ಮತ್ತು ಬೆಂಬಲಕ್ಕೆ ಪಾತ್ರರಾಗಿ ಅನುಯಾಯಿಗಳು ಅವರು ತೋರಿಸಿಕೊಟ್ಟ ಮಾರ್ಗವನ್ನೇ ಅನುಸರಿಸುವಂತೆ ಮಾಡುತ್ತಿದ್ದರು. ವಿನಾ: ಕಾರಣ ಆಡಳಿತದ ವಿರುದ್ಧ ಕಾರ್ಮಿಕರು ದಂಗೆ ಏಳಲು ಯಾವಾಗ್ಯೂ ಹುರಿದುಂಬಿಸುತ್ತಿರಲಿಲ್ಲ. ಕೆಲವು ಸಲ ಆಡಳಿತದ ಮತ್ತು ಕಾರ್ಮಿಕರ ನಡುವೆ ಭಿನ್ನಾಭಿಪ್ರಾಯಗಳು ತಲೆದೋರಿದಾಗ, ಅವುಗಳನ್ನು ಶಾಂತಿಯುತರಾಗಿ ನಿವಾರಿಸಲು ಕಾರ್ಮಿಕರ ಪರ ಎಷ್ಟೋ ಬಿನ್ನವಿತ್ತಳೆಗಳನ್ನು ಮತ್ತು ಸುತ್ತೋಲೆಗಳನ್ನು ಮಂಡಿಸಿ ಕಾರ್ಮಿಕರ ಬೇಡಿಕೆಗಳನ್ನು ಮಂಡಿಸುತ್ತಿದ್ದರು. ಹಾಗೆಯೇ ಅವುಗಳಿಗೆ ಸೂಕ್ತವಾದ ಪರಿಹಾರಗಳೂ ಸಿಗುವಂತೆ ಯತ್ನಿಸಿ ಸಫಲರಾದ್ದು ಕಾರ್ಮಿಕ ವರ್ಗವು ಇಂದಿಗೂ ಮರೆಯುವಂತಿಲ್ಲ.

ತಮ್ಮ ಬದುಕಿನ ಕೊನೆಯ ಉಸಿರಿನವರೆಗೂ ಶ್ರೀ ನಮೋಶಿಯವರು ಮಾರ್ಕ್ಸ್‌ವಾದ ಸಿದ್ಧಾಂತದ ಮೇಲೆ ಅಚಲ ನಂಬಿಕೆಯಿಟ್ಟು ಬಂಡವಾಳಶಾಹಿಯ ವಿರುದ್ಧ ಹೋರಾಡಿ ಕಾರ್ಮಿಕರ ಕಲ್ಯಾಣಕ್ಕಾಗಿ ಹಗಲಿರುಳು, ದುಡಿದು, ಕಾರ್ಮಿಕರ ಜೀವನವು ನಿಜವಾಗಿಯೂ ಮಾನವೀಯ ಜೀವನವನ್ನಾಗಿ ಪರಿವರ್ತಿಸಿದ ಮಹಾನ್ ವ್ಯಕ್ತಿ ಮತ್ತು ಧೀಮಂತ ನಾಯಕನಾಗಿ "ಕಾರ್ಮಿಕರ ಕಣ್ಮಣಿ" ಮತ್ತು ಕೆಂಪು ಸೂರ್ಯ" ಎಂಬ ಬಿರುದುಗಳನ್ನು ಪಡೆದಿದ್ದು, ನಿಜವಾಗಿಯೂ ಸಾರ್ಥಕ ಮತ್ತು ಸಮರ್ಥನೀಯ.

ಶ್ರೀ ಗಂಗಾಧರ ನಮೋಶಿಯವರು ಮುಂಜಾನೆ ಮನೆ ಬಿಟ್ಟರೆಂದರೆ ಮರಳಿ ಮನೆಗೆ ಬರುವುದೆಂಬುದರ ಅರಿವಿನ ಬಗ್ಗೆ ಚಿಂತಿರುತ್ತಿರಲಿಲ್ಲ. ಮನೆ ಬಿಟ್ಟವರೇ ದಾರಿಗಳಲ್ಲಿ ಕಾರ್ಮಿಕರ ವಿವಿಧ ಸಂಘಟನೆಗಳ ಗಲ್ಲಿಗಳಿಗೆ ಭೇಟಿಯಿತ್ತು, ಅವರ ಯೋಗ ಕ್ಷೇಮವನ್ನು ವಿಚಾರಿಸಿ ಮತ್ತು ಅವರ ಸಮಸ್ಯೆಗಳಿಗೆ ಸ್ಪಂಧಿಸಿ ಮತ್ತು ಸೂಕ್ತ ಪರಿಹಾರ ನೀಡುವಲ್ಲಿ ಅವರಿಗೆ ಧೈರ್ಯ ಮತ್ತು ಸಾಂತ್ವನ ಹೇಳಿ ತಮ್ಮನ್ನು ತಾವೇ ಮರೆತು ಸದಾಕಾಲ ಕಾರ್ಮಿಕರ ಕಲ್ಯಾಣದ ಬಗ್ಗೆ ಚಿಂತೆ ಮಾಡುತ್ತಿದ್ದರು. ಇಂಥ ಕಣ್ಮಣಿಯನ್ನು ಕಾರ್ಮಿಕರು ಮರೆಯುವುದು ಅದು ಹೇಗೆ ಸಾಧ್ಯ?

## ಕಲ್ಬುರ್ಗಿಯ ಮಹಾನಗರ ಪಾಲಿಕೆಯಲ್ಲಿ ಶ್ರೀ ಗಂಗಾಧರ ನಮೋಶಿಯವರ ಪಾತ್ರ:

ಶ್ರೀ ಗಂಗಾಧರ ನಮೋಶಿಯವರು ಸಾರ್ವಜನಿಕ ಸೇವೆಯಲ್ಲಿಯೇ ನಿರತರಾದವರು. ಕಲ್ಬುರ್ಗಿ ಜಿಲ್ಲೆಯ ಸಮಸ್ತ ಜನ ಸೇವೆಯೇ ಜನಾರ್ಧನ ಸೇವೆಯೆಂದು ಪರಿಗಣಿಸುತ್ತಿದ್ದರು. ಸಾರ್ವಜನಿಕ ಸೇವೆಗಾಗಿಯೇ ಹಗಲಿರುಳು ಚಿಂತಿಸಿ ತಮ್ಮ ಅಲ್ಪ ಸೇವೆಯು ಜನರಿಗಾಗಿ ಸಾರ್ಥಕವಾಗಲಿಯೆಂಬುದೇ ಅವರ ಪರಮ ಗುರಿಯಾಗಿತ್ತು. ಆ ಸಾರ್ವಜನಿಕ ಸೇವೆ ಮಾಡಲು, ಅವರಿಗೆ ರಾಜಕೀಯ ಪಕ್ಷ ಅಡ್ಡ ಬರುತ್ತಿರಲಿಲ್ಲ. "ಮೊದಲು ಸೇವೆ ನಂತರ ಪಕ್ಷ" ಎಂಬುದೇ ಅವರ ಜೀವನದ ತಿರುಳಾಗಿತ್ತು. ಅಂತೆಯೇ ಕಲ್ಬುರ್ಗಿಯ ಟೌನ್ ಮುನಿಸಿಪಾಲಿಟಿಗೆ 1951-52ರಲ್ಲಿ ಚುನಾಯಿತರಾಗಿ ಸಕ್ರೀಯ ಸದಸ್ಯರಾಗಿ ವಿರೋಧ ಪಕ್ಷದ ನಾಯಕರೂ ಆದರು. ಮುನಿಸಿಪಾಲಿಟಿಯ ಆರಂಭವಾದಾಗಿನಿಂದಲೂ, ಶ್ರೀ ನಮೋಶಿಯವರು ಅದರ ಸದಸ್ಯರಾಗಿ ಆಯ್ಕೆಯಾದರು. ಅದೇ ಸಮಯದಲ್ಲಿಯೇ 08 ಜನ ಸದಸ್ಯರು ಆಯ್ಕೆಗೊಂಡು ನಾಗರಿಕ ಸಮಿತಿಯ ಧುರೀಣತ್ವ ವಹಿಸಿದರು. ನಂತರ 1954ರಲ್ಲಿ ಕಮ್ಯುನಿಷ್ಟ ಪಕ್ಷ ಸೇರಿದರು. ಮುನಿಸಿಪಾಲಿಟಿಯ ಸದಸ್ಯರಾಗಿ, ಶ್ರೀ ಗಂಗಾಧರ ನಮೋಶಿಯವರು ತಮ್ಮ ಕಾರ್ಯಾರಂಭ ಮಾಡಿ ಅಲ್ಲಿಯೂ ಕೆಲವು ಮಹತ್ತರ ಸಾಧನೆಗಳನ್ನು ಮಾಡುವಲ್ಲಿ ಪ್ರಸಿದ್ಧಿಯಾದರು. ಪ್ರಸ್ತುತ ಮಹಾನಗರ ಪಾಲಿಕೆಯ ಸದಸ್ಯರು ಮತ್ತು ಅಧ್ಯಕ್ಷರು, ಶ್ರೀ ಗಂಗಾಧರ ನಮೋಶಿಯವರ ಅಸ್ಮರಣೀಯ, ಸಾಧನೆಗಳನ್ನು, ಯಾವತ್ತೂ ಮರೆಯುವಂತಿಲ್ಲ. ಗುಲ್ಬರ್ಗಾ ನಗರದ ಜನತೆಗೆ ಸಾರ್ವಜನಿಕ ಸೌಲಭ್ಯಗಳು ಸಿಗುವಂತೆ ಮಾಡಲು ಶ್ರಮಿಸಿದವರಲ್ಲಿ ಶ್ರೀ ಗಂಗಾಧರ ನಮೋಶಿಯವರೇ ಪ್ರಥಮರೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಏಕೆಂದರೆ ಅವರು ವಿಶಾಲವಾದ ಮನೋಭಾವನೆಯಿಂದ ಗುಲ್ಬರ್ಗಾ ಜಿಲ್ಲೆಯ ಸರ್ವಾಂಗೀಣ ಪ್ರಗತಿಗೆ ಶ್ರಮಿಸಿದ್ದುಂಟು. ಸತತವಾಗಿ 1951-52 ರಿಂದ 1982ರ ವರೆಗೆ ಶ್ರೀ ಗಂಗಾಧರ ನಮೋಶಿಯವರು ಗುಲ್ಬರ್ಗಾ ಮಹಾನಗರ ಪಾಲಿಕೆಯ ಸದಸ್ಯರಾಗಿ ಆಯ್ಕೆಗೊಂಡರು. ಕೆಲವು ಸಲ ಅನಿವಾರ್ಯ ಕಾರಣಗಳಿಂದ ಮಹಾನಗರ ಪಾಲಿಕೆಗೆ ಚುನಾವಣೆಗಳು ನಡೆಯದೇ ಇದ್ದರೂ ಶ್ರೀ ನಮೋಶಿಯವರು ಹಾಗೆಯೇ ಅದರ ಸದಸ್ಯರೆಂದು ಮುಂದುವರೆದರು. 1972ರಲ್ಲಿ ಶ್ರೀ ನಮೋಶಿಯವರು ಮಹಾನಗರ ಪಾಲಿಕೆಯ ಮಹಾ ಪೌರರಾದರು.

ಕಲ್ಬುರ್ಗಿ ನಗರ ಪಾಲಿಕೆಯ ಸದಸ್ಯರಾಗಿ ಅದರ ಚರ್ಚೆಗಳಲ್ಲಿ ಸಕ್ರೀಯವಾಗಿ ಭಾಗವಹಿಸಿ ಶ್ರೀ ಗಂಗಾಧರ ನಮೋಶಿಯವರು ಕೆಲವು ಮಹತ್ತರ ಕಾರ್ಯಕ್ರಮಗಳು ಜಾರಿಯಲ್ಲಿ ಬರುವಂತೆ ಕೆಳಗಿನ ಕೆಲವು ಮಹತ್ವದ ಸಾಧನೆಗಳನ್ನು ಮಾಡಿ ತಮ್ಮ

ಮುತ್ಸದ್ದಿತನದ ವೈಖರಿಯನ್ನು ಪ್ರತಿಬಿಂಬಿಸಿದರು. ಅವರು ಸದಾ ಜನಪರ ಕಾರ್ಯಕ್ರಮಗಳಿಗೆ ಮಾತ್ರ ಬೆಂಬಲ ನೀಡಿ, ಜನರ ಹೃದಯದಲ್ಲಿಯೇ ಇವತ್ತಿಗೂ ಮನೆ ಮಾಡಿಕೊಂಡಿದ್ದಾರೆ. ಆ ಕೆಲವು ಮಹತ್ತರ ಸಾಧನೆಗಳು, ಈ ಕೆಳಗಿನಂತಿವೆ.

1. ಬ್ರಹ್ಮಪೂರದಿಂದ ಮಾರುಕಟ್ಟೆಯ ತನಕ ಸಿಮೆಂಟ್ ರಸ್ತೆಯ ನಿರ್ಮಾಣ

2. ಸ್ಟೇಶನ್ ಬಜಾರಿನಿಂದ ಬ್ರಹ್ಮಪೂರವರೆಗೆ ಸಿಮೆಂಟ್ ರಸ್ತೆ ನಿರ್ಮಾಣ

3. ಒಳಚರಂಡಿ ನೀರಿನ ಪೂರೈಕೆಯ ಯಶಸ್ಸು.

4. ಬೆಣ್ಣೆತೊರಾ ಯೋಜನೆಯ ಸಲುವಾಗಿ ಒಂದು ಯೋಜನೆ ಹಾಕಿ, ಅದನ್ನು ಜಾರಿಯಲ್ಲಿ ತರಲು ಮಾಡಿದ ಪ್ರಯತ್ನಕ್ಕೆ ಯಶಸ್ಸು.

5. ಭೋಸಗಾ ಕೆರೆಯಿಂದ ಸಮಸ್ತ ಗುಲ್ಬರ್ಗಾ ನಗರದ ಜನರಿಗೆ ಕುಡಿಯುವ ನೀರಿನ ಪೂರೈಕೆ ಆಗದಿದ್ದಾಗ ಓಣಿ ಓಣಿಗಳಲ್ಲಿ ಬೋರ್‌ವೆಲ್‌ಗಳನ್ನು ಹಾಕಿಸಲು ಬೇಡಿಕೆಯನ್ನಿಟ್ಟು ಅದರಲ್ಲಿ ಯಶಸ್ವಿಗಳಿಸಿದ್ದು, ಶ್ರೀ ನಮೋಶಿಯವರ ಧುರೀಣತ್ವದಿಂದಲೇ ಎಂದು ನಿಸ್ಸಂದೇಹವಾಗಿ ಹೇಳಬೇಕಾಗುತ್ತದೆ.

6. ಗುಲ್ಬರ್ಗಾ ನಗರಕ್ಕೆ ವಿದ್ಯುತ್‌ಶಕ್ತಿಯ ಪೂರೈಕೆ ಮಾಡುವಲ್ಲಿ ಯಶಸ್ವಿ

7. ಇಡೀ ಗುಲ್ಬರ್ಗಾ ರಸ್ತೆಗಳನ್ನು ಅಗಲಗೊಳಿಸುವಲ್ಲಿ ಸಕ್ರೀಯವಾದ ಪಾತ್ರ ಮತ್ತು ಯಶಸ್ಸು

8. ಗುಲ್ಬರ್ಗಾ ನಗರಕ್ಕೆ "ಸೂಪರ್ ಮಾರ್ಕೆಟ್ಟಿನಲ್ಲಿ" ಕಾಯಿಪಲ್ಲೆಯ ಮಾರ್ಕೆಟಿನ ಸೌಲಭ್ಯ. ಆದರೆ, ನಮೋಶಿಯವರು ಮಾರ್ಕೆಟಿನಲ್ಲಿ ಸ್ಥಳದ ಅಭಾವದ ಕಾರಣ ಕಾಯಿಪಲ್ಲೆ ಮಾರ್ಕೆಟ್ಟು ಅಲ್ಲಿ ಇಡಕೂಡದೆಂದು ಹೋರಾಡಿ ಸಮರ್ಥಿಸಿದ್ದುಂಟು.

9. ಗುಲ್ಬರ್ಗಾ ನಗರವು ಬೆಂಕಿಯ ಅನಾಹುತದಿಂದ ಮುಕ್ತಗೊಳಿಸಲು ಅಗ್ನಿ ಶಾಮಕದ ಠಾಣೆ ಸ್ಥಾಪಿಸುವಲ್ಲಿ ಪ್ರಯತ್ನಕ್ಕೆ ಯಶಸ್ಸು.

10. ಇವರ ಅವಧಿಯಲ್ಲಿಯೇ 'ಬಸವೇಶ್ವರ ಕಾಲೋನಿ'ಯು ಹೊಸದಾಗಿ ನಿರ್ಮಾಣಗೊಂಡು 5 ಸಾವಿರಕ್ಕಿಂತಲೂ ಮಿಗಿಲಾಗಿ ಪ್ಲಾಟುಗಳು ಜಾರಿಗೊಳಿಸುವಂತೆ ಮಾಡಿ ಯಶಸ್ವಿ.

11. ಸಮಸ್ತ ಕಲ್ಬುರ್ಗಿಯ ಜನಾಂಗದ ಮಕ್ಕಳಿಗೆ ಶಿಕ್ಷಣದ ಫಲ ಸಿಗಲೆಂದು ಎಚ.ಕೆ.ಈ ಸಂಸ್ಥೆಯ ಸ್ಥಾಪನೆಯಲ್ಲಿ ಮಹತ್ತರ ಪಾತ್ರ.

12. ಗುಲ್ಬರ್ಗಾ ವಿಭಾಗಕ್ಕೆ ವಿಶ್ವವಿದ್ಯಾಲಯದ ಕೊರತೆ ನೀಗಿಸಲು ವಿಶ್ವವಿದ್ಯಾಲಯದ ಸ್ಥಾಪನೆಯಲ್ಲಿ ಯಶಸ್ಸು.

13. ಇವರ ಕಾಲದಲ್ಲಿಯೇ ಮುನಿಸಿಪಾಲಿಟಿಯ ಪ್ರಸ್ತುತ ಕಟ್ಟಡ ಆರಂಭಗೊಂಡಿದ್ದು (1969)

14. ಕಾಯಿಪಲ್ಲೆಯ ಹೊಸ ಮಾರುಕಟ್ಟೆಯನ್ನು ಹೆಸರಿಡುವ ವಾದಕ್ಕೆ ಶ್ರೀ ನಮೋಶಿಯವರು ಒಪ್ಪದೇ ಆದಕ್ಕೆ ಕೇವಲ ಗುಲ್ಬರ್ಗಾ ಕಾಯಿಪಲ್ಲೆ ಮಾರುಕಟ್ಟೆ ಎಂದೇ ಕರೆಯಬೇಕೆಂದು ಸಮರ್ಥಿಸಿ ಯಶಸ್ವಿಯಾದರು.

15. ಗುಲ್ಬರ್ಗಾದಿಂದ ಸೇಡಂಕ್ಕೆ ಹೋಗುವ ರಸ್ತೆಯ ನಿರ್ಮಾಣ ಶ್ರೀ ನಮೋಶಿಯವರ ಕಾಲಾವಧಿಯಲ್ಲಿಯೇ ಆರಂಭಗೊಂಡಿತು.

16. ಆಹಾರ ಧಾನ್ಯಗಳ ಬೆಲೆಯೇರಿಕೆಯ ವಿರುದ್ಧ ಪ್ರತಿಭಟಿಸಿ ಅವುಗಳ ಬೆಲೆಯಲ್ಲಿ, ಇಳಿತದ ಸಾಧನೆ.

17. ಹಿಂದು-ಮುಸ್ಲಿಂ ಬಾಂಧವರ ನಡುವೆ ದಂಗೆಗಳು ತಲೆದೋರಿದಾಗ ಶಾಂತಿಯನ್ನು ಕಾಪಾಡಲು "ಶಾಂತಿ ಸಭೆಗಳು" ರಚನೆಗಾಗಿ ವಹಿಸಿದ ಮುತ್ಸದ್ಧಿತನವು ಶ್ರೀ ನಮೋಶಿಯವರದೇ (1954).

ಹೀಗೆ, ಗಂಗಾಧರ ನಮೋಶಿಯವರು ಬಹುಮುಖ ವ್ಯಕ್ತಿತ್ವದ ಪ್ರತೀಕದಂತಿದ್ದು, ಕಾರ್ಮಿಕರ ಕಣ್ಮಣಿಯೆಂದು ನಗರ ಪಾಲಿಕೆಯ ಸಕ್ರೀಯ ಸದಸ್ಯರಾಗಿ ಮತ್ತು ರಾಜ್ಯದ ವಿಧಾನ ಸಭೆಯ ಸದಸ್ಯರಾಗಿ ಹಗಲಿರುಳು ಗುಲ್ಬರ್ಗಾ ವಿಭಾಗದ ಸಮಸ್ತ ಜನರ ಕಲ್ಯಾಣಕ್ಕಾಗಿ ಮತ್ತು ವಿಭಾಗದ ಸರ್ವತೋಮುಖ ಅಭಿವೃದ್ಧಿಗಾಗಿ ಹೋರಾಡಿ ಅಧ್ಭುತ ಯಶಸ್ವಿಯನ್ನು ಸಾಧಿಸಿದ್ದನ್ನು ಅವಲೋಕಿಸಿದರೆ ನಿಜವಾಗಿಯೂ ಅವರು ಒಬ್ಬ ವ್ಯಕ್ತಿಯಲ್ಲ. ಸಂಸ್ಥೆಯೆಂದೇ ಹೇಳಬೇಕಾಗುತ್ತದೆ. ಅವರು ಒಬ್ಬ ಕೇವಲ ಧುರೀಣರಲ್ಲ, ಮುಂದಿನ ಪೀಳಿಗೆಯ ಕಲ್ಯಾಣವನ್ನು ಬಯಸಿದ್ದ ನಿಜವಾದ ಮುತ್ಸದ್ಧಿಯೆಂದೇ ಪರಿಗಣಿಸುವುದು ಸಮರ್ಥನೀಯ. ಅವರು ತಮ್ಮ ಕೊನೆಯುಸಿರಿನ ತನಕ, ಸಾರ್ವಜನಿಕ ರಂಗಕ್ಕೆ ತಮ್ಮ ಜೀವನವನ್ನು ಧಾರೆಯೆರೆದು ಇಡೀ ಗುಲ್ಬರ್ಗಾ ವಿಭಾಗದ ಬಗ್ಗೆ ಚಿಂತಿಸುತ್ತ, ಎಷ್ಟೋ ಬಾರಿ ಜೈಲು ಅನುಭವಿಸಿ ಅಮರಣ ಉಪವಾಸ ಸತ್ಯಾಗ್ರಹ ಮಾಡಿ ತಮ್ಮ ಆರೋಗ್ಯದ ಕಡೆ ಗಮನ ಕೊಡದೇ ಸಮಸ್ತ ಗುಲ್ಬರ್ಗಾ ಜನಸ್ತೋಮದ ಯೋಗಕ್ಷೇಮದ ಬಗ್ಗೆ ಚಿಂತಿಸುತ್ತಿದ್ದರು. ಅವರ ವಿಶಿಷ್ಟ ಮತ್ತು ವಿಶೇಷ ಕಾರ್ಯವೈಖರಿಯ ಕಾರಣ ಈಗಲೂ ಗುಲ್ಬರ್ಗಾ ಜನರ ಹೃದಯಗಳಲ್ಲಿ ಅಮರವಾಗಿ ಉಳಿದಿದ್ದು ಸಮಸ್ತ ಜನರ ಸೌಭಾಗ್ಯವೆಂದರೆ

ಅತೀಶೋಯೋಕ್ತಿಯಾ ಗಲಾರದು. ಇಂಥ ಮುತ್ಸದ್ದಿಗಳು ಪದೇ ಪದೇ ಜನಿಸುವುದಿಲ್ಲ. ಮತ್ತು ಕಾಣಿಸಿಕೊಳ್ಳುವುದಿಲ್ಲ. ಆದರೆ ಅವರ ಕಾರ್ಯ ಮತ್ತು ಸಾಧನೆ, ಯಾವಾಗಲೂ ಅಮರ. ಕಾರಣ, ಶ್ರೀ ಗಂಗಾಧರ ನಮೋಶಿಯವರು, ತಮ್ಮ ಸಾಧನೆಗಳ ಮೂಲಕ ತಮ್ಮ ವಿಶಿಷ್ಟ ವ್ಯಕ್ತಿತ್ವವನ್ನು ಕೇವಲ ಗುಲ್ಬರ್ಗಾದ ಜನರಿಗಷ್ಟೇ ಅಲ್ಲ ಇಡೀ ಕರ್ನಾಟಕಕ್ಕೆ ಪರಿಚಯಿಸಿರುವುದು ನಿಜವಾಗಿಯೂ ಸಾರ್ಥಕ. ಅವರು ಸಾರ್ವಜನಿಕ ರಂಗಕ್ಕೆ ನೀಡಿದ ಸೇವೆಯೂ ಕೂಡ ಸಾರ್ಥಕವೆಂದೇ ಯಾರೂ ಹೇಳಬೇಕಾಗಿಲ್ಲ.

ಶ್ರೀ ಗಂಗಾಧರ ನಮೋಶಿಯವರ ನಿಸ್ವಾರ್ಥ ಸೇವೆ, ಶುದ್ಧ ಚರಿತ್ರೆ,ಡ ಕ್ರಿಯಾಶೀಲತೆ, ಮತ್ತು ವಾಕಚಾತುರ್ಯದಂಥ ಮೌಲ್ಯಗಳು, ಅವರೊಬ್ಬ ಸಮರ್ಥ ಧುರೀಣರೆಂದು ಅಷ್ಟೇ ಅಲ್ಲ, ಒಬ್ಬ ಮಹಾನ್ ಮುತ್ಸದ್ದಿಯೆಂದು ಅಳೆಯುವ ಮೂಲ ಸಾಧನೆಗಳೆಂದು ಹೇಳಿದರೆ ಆಶ್ಚರ್ಯವೇನಲ್ಲ.

C-5971

ಮುದ್ರಕರು : ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಸರ್ಕಾರಿ ಮುದ್ರಣಾಲಯ, ಬೆಂಗಳೂರು-1. ಕಾ.ಸೂ. WD-4145-ಪಿ-12